# ವಿಶೇಷ ಘಟಕ ಯೋಜನೆಯಡಿಯಲ್ಲಿ ದಲಿತರ ಸ್ಥಿತ್ಯಂತರಗಳು

(ಹಗರಿಬೊಮ್ಮನಹಳ್ಳಿ ತಾಲೂಕನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಾದರಪಡಿಸಿದ ಪಿಹೆಚ್.ಡಿ. ಮಹಾಪ್ರಬಂಧ


ಸಂಶೋಧಕರು

ಜಿ. ಪಿ. ದೇವರಾಜ್

ಮಾರ್ಗದರ್ಶಕರು

ಡಾ. ಹೆಬ್ಬಾಲೆ ಕೆ. ನಾಗೇಶ್

ಹಿ.ಶ್ರೇ. ಅಧ್ಯಾಪಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ





ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

2005 - 2006

# ವಿಶೇಷ ಘಟಕ ಯೋಜನೆಯಡಿಯಲ್ಲಿ ದಲಿತರ ಸ್ಥಿತ್ಯಂತರಗಳು.

(ಹಗರಿಬೊಮ್ಮನಹಳ್ಳಿ ತಾಲೂಕನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಾದರ ಪಡಿಸಿದ ಪಿಹೆಚ್.ಡಿ. ಮಹಾಪ್ರಬಂಧ

ಸಂಶೋಧಕರು

**ಜಿ.ಪಿ.ದೇವರಾಜ್**



ಮಾರ್ಗದರ್ಶಕರು

**ಡಾ. ಹೆಬ್ಬಾಲೆ ಕೆ. ನಾಗೇಶ್**

ಹಿ.ಶ್ರೇ. ಅಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ
೨೦೦೫ - ೨೦೦೬

# ಪ್ರಮಾಣ ಪತ್ರ

**ವಿಶೇಷ ಘಟಕ ಯೋಜನೆಯಡಿಯಲ್ಲಿ ದಲಿತರ ಸ್ಥಿತ್ಯಂತರಗಳು** (ಹಗರಿಬೊಮ್ಮನಹಳ್ಳಿ ತಾಲೂಕನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ. ಹೆಬ್ಬಾಲೆ ಕೆ. ನಾಗೇಶ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾ ಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ದಿನಾಂಕ:

ಸ್ಥಳ:

**ಜಿ. ಪಿ. ದೇವರಾಜ್**
ಸಂಶೋಧಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾನಿಲಯ, ಹಂಪಿ

## ದೃಢೀಕರಣ ಪತ್ರ

ಶ್ರೀ ಜಿ. ಪಿ. ದೇವರಾಜ್ ಇವರು ವಿಶೇಷ ಘಟಕ ಯೋಜನೆಯಡಿಯಲ್ಲಿ ದಲಿತರ ಸ್ಥಿತ್ಯಂತರಗಳು (ಹಗರಿಬೊಮ್ಮನಹಳ್ಳಿ ತಾಲೂಕನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ಪಿಹೆಚ್.ಡಿ. ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸಲಾಗುತ್ತಿದೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೇ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ:

ಸ್ಥಳ:

**ಡಾ. ಹೆಬ್ಬಾಲೆ ಕೆ. ನಾಗೇಶ್**
ಮಾರ್ಗದರ್ಶಕರು ಹಾಗೂ ಹಿ.ಶ್ರೇ.ಅಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಈ ನನ್ನ ಪ್ರೌಢ ಪ್ರಬಂಧ ರಚಿಸುವ ಅಧ್ಯಯನಕ್ಕೆ ಅನುಮತಿ ನೀಡಿದ ಸಮಾಜಕಲ್ಯಾಣ ಇಲಾಖೆಯ ಮಾನ್ಯ ಆಯುಕ್ತರಿಗೆ, ನನ್ನನ್ನು ಈ ಮೂಲಕ ಪ್ರೇರೇಪಿಸಿದ ದಕ್ಷ ಹಾಗೂ ಸಹೃದಯ ನನ್ನ ಹಿರಿಯ ಅಧಿಕಾರಿಗಳಾದ ಡಾ. ಎಂ. ಸಿ. ಶ್ರೀನಿವಾಸ ಅವರಿಗೆ ಎಂದಿಗೂ ನಾನು ಚಿರಋಣಿ. ಅಂತೆಯೇ ಹಂಪಿ ವಿಶ್ವವಿದ್ಯಾನಿಲಯದಲ್ಲಿ ನನ್ನ ಅಧ್ಯಯನಕ್ಕೆ ಮಾರ್ಗದರ್ಶಕರಾದ ಹೊಸ ತಲೆಮಾರಿನ ಮಾನವೀಯ ಮೌಲ್ಯಗಳ ಪ್ರಭಾವೀ ಬರಹಗಾರರು, ಕೊಡಗಿನ ಕನ್ನಡದ ಕಟ್ಟಾಳು ಡಾ. ಹೆಬ್ಬಾಲೆ ಕೆ.ನಾಗೇಶ್‌ರವರಿಗೆ ನನ್ನ ನಮನಗಳು. ದಲಿತಪರ ಕಳಕಳಿ ಉಳ್ಳವರು ಸರಳ, ಮುಕ್ತಮನಸ್ಸಿನ ಕನ್ನಡ ವಿ.ವಿ. ಕುಲಪತಿಗಳಾದ ಪ್ರೊ. ವಿವೇಕ ರೈ, ಭಾಷಾಂತರಕಾರರೂ ಕತೆಗಾರರೂ ಹಾಗೂ ಹಿಂದಿನ ಕುಲಸಚಿವರೂ ಆದ ಕರೀಗೌಡ ಬೀಚನಹಳ್ಳಿ, ಹಾಲಿ ಕುಲಸಚಿವರೂ ಆದ ಶ್ರೀ ಶಂಕರ್ ಅವರೂ, ಅಧ್ಯಯನಾಂಗದ ನಿರ್ದೇಶಕರಾದ ಪ್ರೊ.ಟಿ.ಆರ್.ಚಂದ್ರಶೇಖರ್ ಅವರಿಗೂ, ಬುಡಕಟ್ಟು ತಜ್ಞರಾದ ಹಿ.ಚಿ.ಬೋರಲಿಂಗಯ್ಯ, ಡಾ. ಬೇವಿನಕಟ್ಟಿ, ಮುಖ್ಯಸ್ಥರಾದ ಮೊಗಳ್ಳಿಗಣೇಶ್, ಡೀನರೂ, ಸಾಹಿತಿಗಳೂ ಆದ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ್ ಅವರಿಗೂ, ಸಮಾಜ ವಿಜ್ಞಾನಗಳ ನಿಕಾಯದ ಡೀನರಾದ ಪ್ರೊ. ದೇವರ ಕೊಂಡಾರೆಡ್ಡಿ ಅವರಿಗೂ ಇತರೆ ಎಲ್ಲಾ ಅಧ್ಯಾಪಕರು ಮತ್ತು ಸಿಬ್ಬಂದಿ ವರ್ಗದವರಿಗೆ ನನ್ನ ಕೃತಜ್ಞತೆಗಳು.

ಪೆಚ್ಚಿನದಾಗಿ ನನ್ನ ಅಧ್ಯಯನಕ್ಕೆ ನಿರಂತರ ಪ್ರೇರೇಪಣೆ, ಆಶಾವಾದಿತನವನ್ನು ಹುಟ್ಟು ಹಾಕುತ್ತಲಿರುವ ಯಾವತ್ತೂ ನನ್ನ ಧರ್ಮಪತ್ನಿ ಹಾಗೂ ಮಹಾನ್ ದೈವಭಕ್ತೆಯೂ ಆದ ಶ್ರೀಮತಿ ರುಕ್ಮಿಣಿಗೆ ಹಾಗೂ ಬೇಗ ಪಿಹೆಚ್.ಡಿ. ಮಾಡಪ್ಪಾ ಎಂದು ಪ್ರೋತ್ಸಾಹಿಸುತ್ತಲಿರುವ ನನ್ನ ಚೈತನ್ಯದ ಚಿಲುಮೆ ಮಕ್ಕಳಾದ ಗೌತಮ ಮತ್ತು ಸ್ಫೂರ್ತಿಗೆ ಹಾಗೂ ನನ್ನ ಈ ಬೆಳವಣಿಗೆಗೆ ನಿರಂತರ ಆರ್ಶೀವಾದ ನೀಡುತ್ತಲಿರುವ ನನ್ನ ಹಡೆದವ್ವ ಗೌರಮ್ಮ ಹಾಗೂ ನನ್ನ ತಂದೆ ದಿವಗಂತ ಪುಟ್ಟಯ್ಯನವರಿಗೆ ಸಹೃದಯ ಪ್ರಣಾಮಗಳು.

ಈ ಪ್ರಬಂಧ ರಚಿಸಲು, ವಿಷಯ ಸಂಗ್ರಹಿಸಲು ಮಾಹಿತಿಗಳನ್ನು ಸಾಕಷ್ಟು ಪ್ರಮಾಣದಲ್ಲಿ ಒದಗಿಸಿದ ಪುತ್ರ ಸಮಾನರಾದ ಮೋಹನ್ ಕುಮಾರನಿಗೆ, ನನ್ನ ಅಧ್ಯಯನಕ್ಕೆ ಪ್ರೇರೇಪಣೆ ನೀಡಿದ ಡಾ. ಕರೀಗೌಡ ಬೀಚನಹಳ್ಳಿ, ಡಾ. ಕೇಶವನ್ ಪ್ರಸಾದ್, ಡಾ. ಮೊಗಳ್ಳಿಗಣೇಶ್, ಡಾ. ಕೆ. ಎಂ. ಮೈತ್ರಿ, ಡಾ. ಹರಿಶ್ಚಂದ್ರ ದಿಗ್ಗಂಗೀಕರ, ಡಾ. ಚೆಲುವರಾಜು, ಡಾ. ಮಲ್ಲಿಕಾರ್ಜುನ ವಣೇನೂರು, ಅಂದವಾಗಿ ಡಿ.ಟಿ.ಪಿ. ಮಾಡಿದ ಮೋಹನ್‌ಕುಮಾರ ಮತ್ತು ಅಭಿಗ್ರಾಫಿಕ್ಸ್‌ನವರಿಗೂ ನನ್ನ ಕೃತಜ್ಞತೆಗಳು.

ಸಮಾಜ ಕಲ್ಯಾಣ ಇಲಾಖೆಯ ಅಧಿಕಾರಿಗಳಾದ ಶ್ರೀಯುತ ಹನುಮಂತಪ್ಪನವರು, ಎಂ. ಪಿ. ಶ್ರೀನಿವಾಸುಲು ಹಾಗೂ ಎಲ್.ಜಿ. ಘಂಟಿಯವರಿಗೂ, ನೆಚ್ಚಿನ ಸಿಬ್ಬಂದಿಯವರಾದ ಗುರುಬಸವರಾಜ್‌ಸ್ವಾಮಿ, ನಿಷ್ಠೆ ನಿಯತ್ತಿನ ಸಹಾಯಕರಾದ ಬಸಪ್ಪ ಮತ್ತು ರಂಗಪ್ಪ ಜೊತೆಗೆ ಗೋಟೂರು ಬಸವರಾಜ ಮತ್ತಿತರೇ ಸಿಬ್ಬಂದಿಯವರಿಗೆ ಬಹುಪಾಲು ನನ್ನೆಲ್ಲಾ ಈ ನಾಡಿನ ಮೂಲನಿವಾಸಿಗಳಾದ ದಲಿತ ಬಂಧುಗಳಿಗೆ ನನ್ನ ನಮನಗಳು.

ಜಿ. ಪಿ. ದೇವರಾಜ್

# ಪರಿವಿಡಿ

# ಅಧ್ಯಾಯ ಒಂದು

## ಅಧ್ಯಯನದ ಸ್ವರೂಪ ಮತ್ತು ಮಹತ್ವ

ಅ) ಅಧ್ಯಯನದ ಸ್ವರೂಪ

ಆ) ಉದ್ದೇಶ.

ಇ) ಮಹತ್ವ

ಈ) ವಿಧಾನಗಳು

ಉ) ವ್ಯಾಪ್ತಿ

# ಅಧ್ಯಾಯ ಒಂದು

# ಅಧ್ಯಯನದ ಸ್ವರೂಪ ಮತ್ತು ಮಹತ್ವ

## ಪೀಠಿಕೆ

ಭಾರತಕ್ಕೆ ಸ್ವಾತಂತ್ರ್ಯ ಲಭಿಸಿ 55 ವರ್ಷಗಳಾಗಿದ್ದರೂ ಶತಶತಮಾನಗಳಿಂದ ನಿರಂತರ ಶೋಷಣೆ ಹಾಗೂ ದೌರ್ಜನ್ಯಕ್ಕೊಳಗಾದ ದಲಿತರು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ, ಇನ್ನೂ ಸಹ ಹಿಂದುಳಿದಿರುವುದು ವಿಷಾದನೀಯ ವಿಚಾರ. ದಲಿತರು ಬಡತನ, ನೋವು, ಕಷ್ಟ ದಬ್ಬಾಳಿಕೆ ದೌರ್ಜನ್ಯದಿಂದ ಸಮಾಜದಲ್ಲಿ ಅಲಕ್ಷಿತರಾಗಿ ಬದುಕುತ್ತಿರುವುದು ಸರ್ವ ವೇದ್ಯವಾದ ವಿಚಾರ. ಇದರಿಂದಾಗಿಯೇ ಜಾತಿವ್ಯವಸ್ಥೆಯೆಂಬುದು ಎಲ್ಲೆಂದರಲ್ಲಿ ತಾಂಡವವಾಡುತ್ತಿದೆ. ದಲಿತ ಎಂದರೆ ಮುಟ್ಟಿಸಿಕೊಳ್ಳದವರು, ಹೀನ ಕುಲದವರು, ಕೀಳುಜಾತಿಯವರು, ಅಸ್ಪೃಶ್ಯರು ಹೀಗೆ ಹಲವಾರು ಅರ್ಥಗಳಿವೆ. ಈ ಅಸ್ಪೃಶ್ಯರು ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದವರಾಗಿದ್ದಾರೆ. ದಲಿತರಲ್ಲಿ ಸುಮಾರು ನೂರಾಒಂದು ಜಾತಿಗಳಿವೆ. ಆದರೆ ಇಷ್ಟರವರೆಗೆ ಐದು ಆರು ಜಾತಿಗಳನ್ನು ಮಾತ್ರ ಒಗ್ಗೂಡಿಸುವ ಕೆಲಸ ಮಾಡಲಾಗಿದೆಯಷ್ಟೆ. ಇಂತಹ ಜಾತಿಗಳಲ್ಲಿ ಅವರದೇ ಆದ ಆಚಾರ ವಿಚಾರ, ಹಬ್ಬಹರಿದಿನ ಸಂಸ್ಕೃತಿ ಸಂಪ್ರದಾಯಗಳಿವೆ. ಅವರೆಲ್ಲರಿಗೂ ಅವರದೇ ಆದ ಸಮಸ್ಯೆಗಳೂ ಇವೆ. ಅದರ ಜೊತೆ ಜೊತೆಯಲ್ಲಿಯೇ ತಮ್ಮ ಮೌಲ್ಯಗಳನ್ನೂ, ಹಕ್ಕುಗಳನ್ನೂ ಉಳಿಸಿಕೊಳ್ಳಬೇಕೆಂಬ ಆಶಯ ಇಂದು ಉಲ್ಬಣಗೊಳ್ಳುತ್ತಿದೆ. ಈ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿ ಅರ್ಧಶತಮಾನ ಕಳೆದರೂ ಅಸ್ಪೃಶ್ಯರ ಸ್ವಾತಂತ್ರ್ಯ ಮಾತ್ರ ನಿಗೂಢವಾಗಿ ಕಣ್ಣಾಮುಚ್ಚಾಲೆಯಾಡುತ್ತಿದೆ. ಹಳ್ಳಿಹಳ್ಳಿಗಳಲ್ಲಿ ನಿರಕ್ಷರ ಕುಕ್ಷಿಗಳು ನೆಲೆ ನಿಂತಿದ್ದಾರೆ. ಅಲ್ಲಿ ತುಳಿತಕ್ಕೆ ಒಳಗಾದ, ದಬ್ಬಾಳಿಕೆಗೆ ಒಗ್ಗಿಹೋದ ಈ ದೇಶದ ಪರಿಯನ್ನು ಅರಿಯದೆ ಜನ ಇನ್ನೂ ಜೀವಂತವಾಗಿದ್ದಾರೆ. ಇದಕ್ಕೆ ಕಾರಣಗಳೇನು? ಪ್ರಸ್ತುತ ಸಮಕಾಲೀನ ಸಂದರ್ಭದಲ್ಲಿ ಸಮಾನತೆಯನ್ನು ಕಂಡುಕೊಳ್ಳುವ ನೆಲೆಯಲ್ಲಿ ತಾತ್ವಿಕಚಿಂತನಗೆ ಒಳಪಡಿಸಿ ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಅಳವಡಿಸಲಾಗಿದೆ.

ಜಾಗತೀಕರಣದ ವಿರಾಟ್‌ಸ್ವರೂಪದಲ್ಲಿ ಜಾತೀಯತೆಯ ಮೊನಚು ಜಾಣ್ಮೆಯಿಂದ ತಲೆತೂರಿಸುತ್ತಿದೆ. ಈ ಸಂದರ್ಭದಲ್ಲಿ ದಲಿತರ ಅಭಿವೃದ್ಧಿಯ ಬಗ್ಗೆ ತಾಂತ್ರಿಕ ಮತ್ತು ತಾತ್ವಿಕವಾದ ಅಂಶಗಳನ್ನು ಅಳವಡಿಸಿ ಪ್ರತಿ ಹಳ್ಳಿಹಳ್ಳಿಗಳಲ್ಲಿ ನೆಲೆಸಿರುವಂತಹ ದಲಿತರನ್ನು ಶಿಕ್ಷಿತರನ್ನಾಗಿ ಮಾಡಿ ಅಭಿವೃದ್ಧಿಶೀಲವಾಗುವ ಮುಕ್ತ ದೃಷ್ಟಿಯಲ್ಲಿ ಅಧ್ಯಯನಗಳು ಆರಂಭವಾಗುವುದರತ್ತ ಈ ಅಧ್ಯಯನದಲ್ಲಿ ಗಮನಹರಿಸಲಾಗಿದೆ.

## ಅ) ಅಧ್ಯಯನದ ಸ್ವರೂಪ

ದಲಿತರ ಅಭಿವೃದ್ಧಿ ಕುರಿತು ಸರ್ಕಾರ ಹಲವಾರು ಯೋಜನೆಗಳನ್ನು ಜಾರಿಗೆ ತಂದಿದೆ. ಅಂತಹ ಯೋಜನೆಗಳು ಫಲಪ್ರದವಾಗದ ಕಾರಣ ಪರಿಶಿಷ್ಟಜಾತಿ, ಜನರ ಸರ್ವಾಂಗೀಣ ಅಭಿವೃದ್ಧಿಗಾಗಿ ಸರ್ಕಾರದ ನಾನಾ ಇಲಾಖೆಗಳ ಮೂಲಕ ವಿಶೇಷ ಘಟಕ ಯೋಜನೆ ಎಂಬ ಮಹತ್ವದ ಯೋಜನೆಯೊಂದನ್ನು ಜಾರಿಗೊಳಿಸಿರುವುದು ಗಮನಾರ್ಹ. ಇದನ್ನು ಪರಾಮರ್ಶಿಸಲು ಸರ್ಕಾರದ ಇತರೇ ಯೋಜನೆಗಳು ಎಷ್ಟರ ಮಟ್ಟಿಗೆ ದಲಿತರ ಪರವಾಗಿ ಅನುಷ್ಠಾನಗೊಂಡು, ಅವರ ಸ್ಥಿತಿ ಹೇಗೆ ಬದಲಾಗಿದೆ ಅಂತಹ ಯೋಜನೆಗಳು ಗುರಿಮುಟ್ಟದಿರುವುದರ ಕಾರಣದಿಂದಾಗಿ ವಿಶೇಷ ಘಟಕ ಯೋಜನೆಯನ್ನು ಜಾರಿಗೆ ತರಲಾಗಿದೆಯೇ, ಅದರ ಬಗೆಗಿನ ಬೆಳವಣಿಗೆಯನ್ನು ಕುರಿತಂತೆ ತುಲನಾತ್ಮಕ ನೋಟವನ್ನು ಬೀರುವುದೇ ಈ ಅಧ್ಯಯನದ ವಿಷಯವಾಗಿದೆ.

ಪ್ರಸ್ತುತ ಅಧ್ಯಯನವು ಪರಿಶಿಷ್ಟ ಜಾತಿ ಜನರ ಅಂದರೆ ದಲಿತರ ಅಭಿವೃದ್ಧಿಗಾಗಿ ಇರುವ ಯೋಜನಗಳು ಮತ್ತು ತತ್ವಗಳು ಹಾಗೂ ಸದರಿ ಜನಾಂಗದವರ ಬೆಳವಣಿಗೆಗೆ ಪೂರಕವಾದ ಯೋಜನೆಗಳಿಗೆ ಸಂಬಂಧಿಸಿದ್ದುದಾಗಿದೆ. ಈ ಅಧ್ಯಯನವು ಹಗರಿಬೊಮ್ಮನಹಳ್ಳಿ ತಾಲೂಕಿನ ಪ್ರತಿಯೊಂದು ಪರಿಶಿಷ್ಟ ಜಾತಿ ಜನರ ಫಲಾನುಭವಿಗಳ ಮನೆ ಮನೆಗೆ ಭೇಟಿಕೊಟ್ಟು ಅವರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳು ಮತ್ತು ಸ್ಥಾನಮಾನದ ಬಗ್ಗೆ ಹಾಗು ಅವರಿಗೆ ಬೇಕಾಗಿರುವ ಇತರೆ ಮೂಲಭೂತ ಸೌಕರ್ಯಗಳ ಬಗ್ಗೆ ಸಮೀಕ್ಷೆ ನಡೆಸಿ ವರದಿ ತಯಾರಿಸಲಾಗಿರುತ್ತದೆ. ಈ ಅಧ್ಯಯನವು ಒಂದು ಸಮಗ್ರ ಅಧ್ಯಯನವಾಗಿದ್ದು ಇದು ಸರ್ಕಾರದ ಇತರೆ ಅಭಿವೃದ್ಧಿ ಇಲಾಖೆಗಳು ಪರಿಶಿಷ್ಟ ಜಾತಿ ಜನರ ಅಭಿವೃದ್ಧಿಗಾಗಿ ಇತ್ತೀಚಿನ ದಿನಮಾನಗಳಲ್ಲಿ ಅನುಷ್ಠಾನಗೊಳಿಸುತ್ತಿರುವ ಅಭಿವೃದ್ಧಿ ಕಾರ್ಯಕ್ರಮಗಳ ಒಂದು ಅನುಭವದ ಸಮೀಕ್ಷೆಯಾಗಿರುತ್ತದೆ. ಅಂತೆಯೇ ಇದು ಪ್ರಾಥಮಿಕ ಹಾಗೂ ನಂತರದ ಅಂಕಿ ಅಂಶಗಳ ಸಂಗ್ರಹಣೆಯ ಆಧಾರದ ಮೇಲಿನ ಅಧ್ಯಯನವಾಗಿರುತ್ತದೆ.

ಸದರಿ ಅಧ್ಯಯನದಿಂದ ಪರಿಶಿಷ್ಟಜಾತಿ ಜನರ ಅಭಿವೃದ್ಧಿಗಾಗಿ ಒಂದು ಸಮಗ್ರ ಯೋಜನೆಯೊಂದಿಗೆ ಹೊರಬಂದಿದ್ದು ಇದನ್ನು ಹಗರಿಬೊಮ್ಮನಹಳ್ಳಿಯ ಪರಿಶಿಷ್ಟ ಜಾತಿಯ ಜನರ ಅಭಿವೃದ್ಧಿಗಾಗಿ ಪರಿಗಣಿಸಲು ಸಾಧ್ಯವಾಗಿದೆ. ಸ್ವಾತಂತ್ರ್ಯ ಬಂದು ಸುಮಾರು ಐವತ್ತೈದು ವರ್ಷಗಳೇ ಕಳೆದಿದ್ದರೂ ಈ ಜನಾಂಗದ ಮೇಲಿನ ಶೋಷಣೆ ನಿಂತಿಲ್ಲ. ಅವರನ್ನು ತಿದ್ದುವ ಅಥವಾ ಕಾಲದ ಸಹಜ ಬದಲಾವಣೆಗೆ ಅವರು ತಾವಾಗಿಯೇ ಬದಲಾಗುವಂತಹ ಪರಿಸ್ಥಿತಿ ನಿರ್ಮಾಣ ಮಾಡುವಂತಹ ಪ್ರಾಮಾಣಿಕ ಪ್ರಯತ್ನಗಳು ಹೆಚ್ಚಾಗಿ ಈ ಹಿಂದಿನ ಯೋಜನೆಗಳಲ್ಲಿ ಸಾಧ್ಯವಾಗದಿರುವುದು ಗಮನಾರ್ಹ ಸಂಗತಿ.

ದಲಿತರು ಬಹಳಷ್ಟು ಪ್ರಾಣಿಗಳಿಗಿಂತ ನಿಕೃಷ್ಟ ಜೀವನವನ್ನು ನಡೆಸುತ್ತಿದ್ದಾರೆಂಬುದು ಸರ್ಕಾರದ ಗಮನಕ್ಕೆ ತಡವಾಗಿ ಬಂದಿರುವುದರಿಂದ, ಈ ಜನಾಂಗದ ಅಭಿವೃದ್ಧಿಯಾಗದಿರುವುದನ್ನು ಮನಗಂಡ ಸರ್ಕಾರವು ಪರಿಶಿಷ್ಟ ಜಾತಿಯ ಜನರ

ಸರ್ವತೋಮುಖ ಅಭಿವೃದ್ಧಿಗಾಗಿ ವಿಶೇಷ ಘಟಕ ಯೋಜನೆಯನ್ನು ಜಾರಿಗೆ ತಂದಿದೆ ಎಂಬ ಅಂಶವನ್ನು ಈ ಅಧ್ಯಯನದಲ್ಲಿ ಉಲ್ಲೇಖಿಸಲಾಗಿದೆ.

## ಆ) ಅಧ್ಯಯನದ ಉದ್ದೇಶ

ಯಾವುದೇ ಸಮುದಾಯದ ಸಂಸ್ಕೃತಿ ವಿಕಾಸವಾಗುತ್ತಾ ಅನೇಕ ಕಾಲಘಟ್ಟಗಳ ಜೊತೆ ಮುಖಾಮುಖಿಯಾಗುತ್ತಾ ತನ್ನ ಅಸ್ತಿತ್ವವನ್ನು ರೂಪಿಸಿಕೊಳ್ಳುತ್ತವೆ. ಸಾಂಸ್ಕೃತಿಕ ಪ್ರತಿರೋಧದ ಶಕ್ತಿಯ ಬಹುರೂಪಗಳು ಯಾವ ಸಂಸ್ಕೃತಿಯಲ್ಲಿ ಜೀವಂತಿಕೆಯನ್ನು ವಿಸ್ತರಿಸುತ್ತವೆಯೋ ಅಂತಹ ಯಾವ ಸಮುದಾಯಗಳು ಮುಳುಗಿ ಹೋಗುವುದಿಲ್ಲ. ವೈಚಾರಿಕ ಅನ್ವೇಷಣೆಗಳು ಅಂತಹ ಸಂಸ್ಕೃತಿಗಳಲ್ಲಿ ನಿರಂತರವಾದ ಬದಲಾವಣೆಗಳನ್ನು ಅಪೇಕ್ಷಿಸುತ್ತಾ ನಾಗರೀಕತೆಯ ಕಡೆಗೆ ಪಯಣಿಸುತ್ತಿರುತ್ತವೆ. ನಮ್ಮ ರಾಷ್ಟ್ರದಲ್ಲಿ ಸಿರಿವಂತರು ಕಡಿಮೆ. ಬಡವರು ಹೆಚ್ಚು. ಅಕ್ಷರಸ್ಥರು ಕಡಿಮೆ. ಅನಕ್ಷರಸ್ಥರೇ ಹೆಚ್ಚು. ಅಂಧಶ್ರದ್ಧೆ, ಕಂದಾಚಾರ, ಮೂಢನಂಬಿಕೆ ನಮ್ಮ ಸಮಾಜವನ್ನು ಕಿತ್ತು ತಿನ್ನುತ್ತಿವೆ. ಜಾತಿ ಮತಗಳ ಸಂಘರ್ಷ, ಮೇಲು ಕೀಳುಗಳ ಪೈಪೋಟಿ, ಪ್ರತಿನಿತ್ಯ ಹಳ್ಳಿಗಳಲ್ಲಿ ಊರು ಕೇರಿಗಳು ನಗರಗಳಲ್ಲಿ ಪಟ್ಟಣಗಳಲ್ಲಿ ನಡೆಯುತ್ತಿವೆ. ಇದು ನಾಗರೀಕ ಸಮಾಜದ ಲಕ್ಷಣಗಳಲ್ಲ. ಓದಿದವರೆಲ್ಲಾ ವಿಚಾರವಂತರಲ್ಲ, ಆಚಾರವಂತರಲ್ಲ. ಅವರೆಲ್ಲ ಕೇವಲ ಹೊಟ್ಟೆ ಪಾಡಿಗಾಗಿ ಓದಿಕೊಂಡವರು, ತಿಳಿದುಕೊಂಡವರು. ಮಠ, ಮಂದಿರ, ಗುಡಿ, ಗುಂಡಾರಗಳಲ್ಲಿರುವವರು ನೀತಿ ಬೋಧಿಸುವ ಬದಲು ತಮ್ಮ ತಮ್ಮ ಸ್ವಾರ್ಥ ಪ್ರತಿಷ್ಠೆಗಳಿಗಾಗಿ ಮಾತ್ರ ಹೆಣಗಾಡುತ್ತಿರುವುದು ನಾಚಿಕೆಯ ವಿಚಾರವಾಗಿದೆ.

ಈ ರಾಷ್ಟ್ರದ ಮೂಲನಿವಾಸಿಗಳಾದ ಅಸ್ಪೃಶ್ಯರು ತಮ್ಮ ಪೌರುಷವನ್ನು ಕಳೆದುಕೊಂಡು, ಹಣವಂತರ ಜಾತಿವಾದಿಗಳ ಕೈಗೊಂಬೆಗಳಾಗಿ ಅಘೋಷಿತ ಗುಲಾಮಗಿರಿಯಲ್ಲಿಯೇ ಕಾಲಾಹರಣ ಮಾಡಬೇಕಾಗಿದೆ. ಬುದ್ಧ, ಬಸವ, ಅಂಬೇಡ್ಕರರ ಸಿದ್ಧಾಂತಗಳು ಬರುಬರುತ್ತಾ ಸವಕಲಾಗುತ್ತಿವೆ. ಕಾಂಚಾಣ ಮಾತ್ರ ಗಗನದುದ್ದಕ್ಕೂ ತನ್ನ ಕದಂಭಬಾಹುಗಳನ್ನು ಚಾಚಿಕೊಂಡು ಮುನ್ನುಗ್ಗುತ್ತಿವೆ. ಇಂತಹ ಅಸಮಾನತೆಯನ್ನು ತೊಲಗಿಸಿ ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು ಎನ್ನುವಂತಹ ಸಿದ್ಧಾಂತದ ಅಡಿಪಾಯದ ಮೇಲೆ ಹೊಸ ಸಮಾಜ ಕಟ್ಟಬೇಕೆಂಬ ಇಚ್ಛಾಶಕ್ತಿಯಿಂದ ಈ ಮಹಾ ಪ್ರಬಂಧವನ್ನು ರಚಿಸಿ ತನ್ಮೂಲಕ ಉಸಿರು ಹೋದವರಿಗೆ ಉಸಿರಾಗಿ ದನಿಕಳೆದುಕೊಂಡವರ ದನಿಯಾಗಿ ಒಂದಿನಿತು ಕಿರು ಸೇವೆ ಸಲ್ಲಿಸಿ ಜೀವನ ಪಾವನ ಮಾಡಿಕೊಳ್ಳಬೇಕೆಂಬುದೇ ಇದರ ಮಹತ್ವದ ಉದ್ದೇಶವಾಗಿರುತ್ತದೆ.

೧. ಹಗರಿಬೊಮ್ಮನ ಹಳ್ಳಿ ತಾಲೂಕಿನ ಪರಿಶಿಷ್ಟ ಜಾತಿ ಕುಟುಂಬಗಳು, ಅವರಲ್ಲಿರುವ ಜನಸಂಖ್ಯೆ, ಅವರ ಶೈಕ್ಷಣಿಕ ಮಟ್ಟ, ಆರ್ಥಿಕ ಮತ್ತು ಸಾಮಾಜಿಕ ಸ್ಥಾನಮಾನಗಳ ಬಗ್ಗೆ ವಿವರವಾಗಿ ಅಧ್ಯಯನ ಮಾಡುವುದು.

೨. ಪರಿಶಿಷ್ಟ ಜಾತಿ ಹಲವಾರು ಪಂಗಡಗಳಿದ್ದು, ಅವುಗಳಲ್ಲಿ ಹೆಚ್ಚಿನ ಜನಸಂಖ್ಯೆಯು ಯಾವ ಪಂಗಡಕ್ಕೆ ಸೇರಿರುತ್ತಾರೆಂಬುದರ ಬಗ್ಗೆ ಮಾಹಿತಿಯನ್ನು ಸಂಗ್ರಹಿಸುವುದು.

೩. ಪರಿಶಿಷ್ಟ ಜಾತಿ ಜನರು ಎದುರಿಸುತ್ತಿರುವ ತೊಂದರೆಗಳ ಬಗ್ಗೆ ಪಟ್ಟಿಯನ್ನು ಮಾಡಿ ಪರಾಮರ್ಶಿಸುವುದು.

೪. ವಿಶೇಷ ಘಟಕ ಯೋಜನೆಯಡಿಯಲ್ಲಿ ಮುಂದುವರೆಯುತ್ತಿರುವ ಕಲ್ಯಾಣ ಕಾರ್ಯಕ್ರಮಗಳ ಬಗ್ಗೆ ಮೌಲ್ಯಮಾಪನ ಮಾಡುವುದು.

೫. ವಿಶೇಷ ಘಟಕ ಯೋಜನೆಯನ್ನುಅ ನುಷ್ಠಾನಗೊಳಿಸಲು ಇರುವ ಬಾಧಕಗಳನ್ನು ಪತ್ತೆ ಹಚ್ಚುವುದು. ಹಾಗೂ ಅವುಗಳಿಗೆ ಸೂಕ್ತ ಸಲಹೆಗಳನ್ನು ನೀಡುವುದು.

೬. ಈ ಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿ ಜನರನ್ನು ಸಮಗ್ರ ಅಭಿವೃದ್ಧಿಪಡಿಸಲು ಬೇಕಾಗುವ ಇತರೆ ಪೂರಕ ಯೋಜನೆಗಳನ್ನು ರೂಪಿಸಲು ಸಲಹೆಗಳನ್ನು ನೀಡುವುದು.

೭. ವಿಶೇಷ ಘಟಕ ಯೋಜನೆಯಡಿಯಲ್ಲಿ ಇಲ್ಲಿಯವರೆಗೆ ಆಗಿರುವ ಪ್ರಗತಿ ನಿರೀಕ್ಷಿಸಿದ ಮಟ್ಟದಲ್ಲಿ ಗುರಿ ತಲುಪಿದೆಯೇ? ಅಥವಾ ಇಲ್ಲವೇ?ಎಂಬುದರ ಬಗ್ಗೆ ಸ್ಪಷ್ಟ ಚಿತ್ರಣವನ್ನು ನೀಡುವಂತೆ ಮಾಹಿತಿಯನ್ನು ಸಂಗ್ರಹಿಸಿ ಪರಾಮರ್ಶಿಸುವುದು.

೮. ಪರಿಶಿಷ್ಟ ಜಾತಿ ಜನರಅಭಿವೃದ್ಧಿಗಾಗಿ ಇರುವ ಯೋಜನೆಗಳ ಬಗ್ಗೆ ಅವರಿಗೆಅರಿವು ಮೂಡಿಸುವುದು.

೯. ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ಪರಿಶಿಷ್ಟ ಜಾತಿ ಜನರ ಬಗ್ಗೆ ಸಂಗ್ರಹಿಸಿರುವ ಮಾಹಿತಿಗಳನ್ನು ವಿವಿಧ ಮೂಲಗಳಿಂದ ಪಡೆದುಕೊಂಡು ಅವುಗಳ ನಿಖರತೆಯನ್ನು ಪರಿಶೀಲಿಸುವುದು.

೧೦. ಕರ್ನಾಟಕದಲ್ಲಿ ಅದರಲ್ಲೂ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನ ಹಳ್ಳಿಯಲ್ಲಿ ಅಧ್ಯಯನ ನಡೆಯದೇ ಇರುವುದರಿಂದ ಪ್ರಸ್ತುತ ಪ್ರಬಂಧದಲ್ಲಿ ಆನುಷಂಗಿಕ ಸಾಮಗ್ರಿಗಳಿಗಿಂತ ಹೆಚ್ಚಾಗಿ ಭೌತಿಕ ವಸ್ತುಗಳ ವಿಷಯಕ್ಕೆ ಹಾಗೂ ಅಭಿವೃದ್ಧಿಗೆ ಬಹಳ ಮಹತ್ವ ಕೊಟ್ಟು ವಿವರಣಾತ್ಮಕ ಅಧ್ಯಯನ ಮಾಡಲಾಗಿದೆ.

ವಿಶೇಷ ಘಟಕ ಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿ ಜನರ ಅಭಿವೃದ್ಧಿ ಅಧ್ಯಯನ ಒಂದು ಅಭಿವೃದ್ಧಿ ಅಧ್ಯಯನಕ್ಕೆ ಮಾತ್ರ ಸೀಮಿತವಾಗದೆ ಉಳಿದೆಲ್ಲಾ ಸಮಾಜವಿಜ್ಞಾನ ಕ್ಷೇತ್ರಕ್ಕೂ ಉಪಯುಕ್ತವಾಗಬಹುದಾಗಿದೆ.

## ಇ) ಅಧ್ಯಯನದ ಮಹತ್ವ

ದಲಿತರ ಪರಂಪರೆ, ಆಚಾರ, ವಿಚಾರ, ಸಂಸ್ಕೃತಿ, ಸಂಪ್ರದಾಯ, ನಡೆ ನುಡಿ, ಭಾಷೆ ಇವೇ ಮೊದಲಾದವುಗಳ ಬಗ್ಗೆ ಹಲವಾರು ಅಧ್ಯಯನಕಾರರು, ಚಿಂತನಾಕಾರರು ನಾನಾ ಪುಸ್ತಕಗಳನ್ನು ಹೊರತಂದಿರುವುದು ತಿಳಿದುಬಂದಿರುವ ವಿಚಾರ. ಆದರೆ ದಲಿತರೆಂದೇ ಗುರುತಿಸಲ್ಪಡುವ ಪರಿಶಿಷ್ಟಜಾತಿಯವರ ಅಭಿವೃದ್ಧಿಗಾಗಿ ಸರ್ಕಾರ ಕೈಗೊಂಡಿರುವ ವಿಶೇಷ ಘಟಕ ಯೋಜನೆಯಡಿಯಲ್ಲಿ ಬಳ್ಳಾರಿ ಜಿಲ್ಲೆಯ ಹಿಂದುಳಿದ ತಾಲೂಕಿನಲ್ಲಿ ಒಂದಾದ ಹಗರಿಬೊಮ್ಮನಹಳ್ಳಿ ತಾಲೂಕಿಗೆ ಸಂಬಂಧಿಸಿದ ದಲಿತರ ಸ್ಥಿತ್ಯಂತರಗಳನ ಬಗ್ಗೆ ಯಾರೂ ಅಧ್ಯಯನ ನಡೆಸದೇ ಇರುವುದರಿಂದ ಈ ಅಧ್ಯಯನ ನಡೆಸಿರುವುದು ಇದರ ಮಹತ್ವಪೂರ್ಣ ಅಂಶವಾಗಿದೆ.

ಸರ್ಕಾರ ಹಮ್ಮಿಕೊಂಡಿರುವ ಈ ವಿಶೇಷ ಘಟಕ ಯೋಜನೆಯಡಿಯಲ್ಲಿ ದಲಿತರ ಬದುಕು ಎಷ್ಟರ ಮಟ್ಟಿಗೆ ಅಭಿವೃದ್ಧಿಯಾಗಿದೆ ಮತ್ತು ಸ್ಥಿತ್ಯಂತರವಾಗಿದೆ ಎಂಬ ಅಂಶವನ್ನು ಸರ್ಕಾರಕ್ಕೆ, ಸಮಾಜಕ್ಕೆ ಹಾಗೂ ದಲಿತ ಸಮುದಾಯಕ್ಕೆ ಮನವರಿಕೆ ಮಾಡಲು ಹಾಗೂ ಯಾವ ಕ್ಷೇತ್ರದಲ್ಲಿ ಅಭಿವೃದ್ಧಿಯಾಗಿಲ್ಲ ಎಂಬುದಕ್ಕೆ ಕಾರಣಗಳನ್ನು ಕಂಡುಹಿಡಿಯಲು ಈ ಅಧ್ಯಯನ ಪ್ರಮುಖವಾಗಿದೆ. ಈ ಕಾರ್ಯಕ್ರಮ ಪ್ರಾರಂಭವಾಗಿ ಇಪ್ಪತ್ತು ವರ್ಷಗಳೇ ಸಂದರೂ ಈ ಯೋಜನೆಯ ಅರಿವು ದಲಿತರಲ್ಲಿ ಸಂಪೂರ್ಣವಾಗಿ ಬಂದಿರದೇ ಇದರ ಬಗ್ಗೆ ಅರಿವು ಮೂಡಿಸಿ ಅದರ ಲಾಭ ಪಡೆದು ದಲಿತರನ್ನು ಸಮಾಜದ ಮುಖ್ಯವಾಹಿನಿಗೆ ಬರುವಂತೆ ಮಾಡುವ ಮಹತ್ವದ ಪ್ರಯತ್ನ ಇದಾಗಿದೆ.

ಪ್ರಸ್ತುತ ಅಧ್ಯಯನವು ವಿಶೇಷ ಘಟಕ ಯೋಜನೆಯ ಒಂದು ಸಮಗ್ರ ಅಧ್ಯಯನವಾಗಿದ್ದು, ಇದು ಸರ್ಕಾರದ ಇಲಾಖೆಗಳು ದಲಿತರ ಅಭಿವೃದ್ಧಿಗಾಗಿ ಇತ್ತೀಚಿನ ದಿನಗಳಲ್ಲಿ ಅನುಷ್ಠಾನಗೊಳಿಸುತ್ತಿರುವ ಅಭಿವೃದ್ಧಿ ಕಾರ್ಯಕ್ರಮಗಳ ಶೋಧನೆಯೂ ಆಗಿದೆ. ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ವಿಶೇಷ ಘಟಕ ಯೋಜನೆಯಡಿಯಲ್ಲಿ ಲಾಭಪಡೆದ ದಲಿತ ಕುಟುಂಬಗಳ ಜನರು ವಾಸ್ತವವಾಗಿ ಬಡತನ ರೇಖೆಗಿಂತ ಮೇಲೆ ಬಂದಿದ್ದಾರೆಯೇ ಒಂದು ವೇಳೆ ಮೇಲೆ ಬರದಿದ್ದರೆ ಯಾವ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕು. ಈ ಕುರಿತು ಯೋಜನೆಯ ಮೌಲ್ಯಮಾಪನ ಮಾಡಿ ಸೂಕ್ತ ಸಲಹೆ ಸೂಚನೆಗಳನ್ನು ನೀಡಲಾಗಿದೆ. ಅಂತೆಯೇ ಈ ಯೋಜನೆಯಿಂದ ಎಷ್ಟರ ಮಟ್ಟಿಗೆ ದಲಿತರ ಅಭಿವೃದ್ಧಿಯಾಗಿದೆ. ಎಂಬುದರ ಬಗ್ಗೆ ಸಮಾಜ ಮತ್ತು ದಲಿತ ಸಮುದಾಯಗಳಿಗೆ ಮನವರಿಕೆ ಮಾಡಿಕೊಡಲು ಮತ್ತು ಯಾವ ಕ್ಷೇತ್ರದಲ್ಲಿ ಯಾವ ಕಾರಣಗಳಿಂದಾಗಿ ಅಭಿವೃದ್ಧಿಯಾಗಿಲ್ಲ ಎಂಬುದಕ್ಕೆ ಕಾರಣಗಳನ್ನು ಕಂಡುಹಿಡಿಯಲು ಈ ಅಧ್ಯಯನ ಮುಖ್ಯವಾಗಿದೆ.

ಪ್ರಸ್ತುತ ಅಧ್ಯಯನದ ಮೂಲಕ ದಲಿತರಿಗೆ ಸರ್ಕಾರದಿಂದ ಒದಗಿಸಿರುವ ಸೌಲಭ್ಯಗಳ ಬಗ್ಗೆ ಹಾಗೂ ಅವುಗಳ ಸದುಪಯೋಗಗಳ ಬಗ್ಗೆ ಅರಿವು ಮೂಡಿಸುವುದು ಮಹತ್ವದ ಸಂಗತಿಯಾಗಿದೆ. ವಿಶೇಷ ಘಟಕ ಯೋಜನೆಯನ್ನು ಅನುಷ್ಠಾನಗೊಳಿಸುವಾಗ ಇರುವ ಬಾಧಕಗಳನ್ನು ಸರಿಪಡಿಸಲು ಇದುವರೆಗೆ ನೀಡಿರುವ ಸಲಹೆಗಳನ್ನು ಅವಲೋಕನ ಮಾಡುವುದು. ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಬೇಕಾಗಿರುವ ಕ್ರಮಗಳನ್ನು ಪತ್ತೆ ಹಚ್ಚುವುದು ಈ ಅಧ್ಯಯನದ ಮಹತ್ವವಾಗಿದೆ.

**ಈ) ಅಧ್ಯಯನದ ವಿಧಾನಗಳು**

ವೈಜ್ಞಾನಿಕ ಹೊಸ ಹೊಸ ಸಂಶೋಧನೆಗಳ ಮೂಲಕ ಮಾನವ ಅಪಾರವಾದ ಸೌಕರ್ಯ ಸೌಲಭ್ಯಗಳನ್ನು ಪಡೆಯುತ್ತಿದ್ದಾನೆ. ಜೊತೆಜೊತೆಗೆ ಸಾಮಾಜಿಕ ಸಾಹಿತ್ಯಿಕ, ಸಾಂಸ್ಕೃತಿಕ ವಿಷಯಗಳ ಬಗೆಗೂ ಜಿಜ್ಞಾಸೆ ಮೂಡತೊಡಗಿದೆ. ಅವುಗಳಿಂದಾಗುವ ಲಾಭವನ್ನು ಕೇವಲ ಹಣದಿಂದ, ಭೌತಿಕ ಸೌಲಭ್ಯಗಳಿಂದ ಅಳೆಯಲಾಗದು. ಸಾಹಿತ್ಯ ಜನಜೀವನದ ಪ್ರತಿಬಿಂಬ ಎಂಬುದೇ ಅದರಲ್ಲಿ ನಡೆಯುವ ಸಂಶೋಧನೆಯ ಹಿಂದೆ ಗತಿಸಿದ ಸಮಾಜದ ಜೀವಂತ ಚಿತ್ರಣವನ್ನು

ನೀಡಬಲ್ಲುದು. ಭೂತಕಾಲದ ಸಮಾಜದ ಅರಿವಿನಿಂದ ಉತ್ತಮ ಭವಿಷ್ಯವನ್ನು ಅಥವಾ ವರ್ತಮಾನದ ಜೀವನವನ್ನು ಉತ್ತಮಗೊಳಿಸಲು ಸಾಧ್ಯ. ಇತಿಹಾಸ, ಸಾಹಿತ್ಯ ಸಂಸ್ಕೃತಿಗಳ ಸಂಶೋಧನೆಯು ಸಮಾಜಕ್ಕೆ ಸಹಾಯವಾಗಬಲ್ಲದು. ಇದನ್ನೇ ಪರ್ಯಾಯವಾಗಿ ಡಾ.ಬಿ.ಆರ್. ಅಂಬೇಡ್ಕರ್ ಅವರು ಇತಿಹಾಸವನ್ನು ಮರೆತವರು ಇತಿಹಾಸವನ್ನು ಸೃಷ್ಟಿಸಲಾರರು ಎಂದಿದ್ದಾರೆ. ಅವರು ತಮ್ಮ ಜನಾಂಗದ ಇತಿಹಾಸವನ್ನು ಅರಿತಿದ್ದರೂ ತಲತಲಾಂತರದಿಂದ ಅವರು ತುಳಿತಕ್ಕೆ ಒಳಗಾಗಿದ್ದುದನ್ನು ತಿಳಿದಿದ್ದರು. ಅಂತೆಯೇ ಅವರನ್ನು ಮೇಲಕ್ಕೆತ್ತಲು ಅಹೋರಾತ್ರಿ ದುಡಿದಿದ್ದರು. ಮೂಕನಾಯಕ ಎಂಬ ಪತ್ರಿಕೆ ಹೊರಡಿಸಿ ಹಿಂದುಳಿದ ಜನಾಂಗದ ಮೂಕ ವೇದನೆಗೆ ಧ್ವನಿಯಾದರು. ಅದೇ ರೀತಿ ಹರಪ್ಪ ಮಹಂಜದಾರೋ ಸಂಶೋಧನೆಯಿಂದ ಭಾರತೀಯರ ಚರಿತ್ರೆಯ ಪೂರ್ವ ಇತಿಹಾಸದ ಭವ್ಯ ಅಧ್ಯಾಯ ಒಂದು ಪ್ರಾರಂಭವಾಯಿತು. ಆ ವರೆಪಿಗೂ ಪಾಶ್ಚಾತ್ಯರ ಗುಲಾಮಗಿರಿಯಲ್ಲಿ ನರಳುತ್ತಿದ್ದ ಭಾರತೀಯರಿಗೆ ಆತ್ಮಸ್ಥೈರ್ಯ ಪ್ರಾಪ್ತವಾಗಲು ಕಾರಣವಾಯಿತು. ಹೀಗೆ ನಾವು ಗತಕಾಲವನ್ನು ಅರ್ಥಮಾಡಿಕೊಂಡು ಅಲ್ಲಿಯ ಉತ್ತಮಾಂಶಗಳನ್ನು ಎತ್ತಿಹಿಡಿದು ಅದನ್ನು ಮುಂದುವರೆಸಿದರೆ ವರ್ತಮಾನಕ್ಕೆ ಬಹುದೊಡ್ಡ ಪ್ರಯೋಜನವಾಗುತ್ತದೆ.

ವಾಸ್ತವವಾಗಿ ಇರುವ ಆದರೆ ಗೊತ್ತಿಲ್ಲದ ಸಂಗತಿಗಳನ್ನು ಹುಡುಕಿ ಪ್ರಕಟಿಸುವುದು ಸಂಶೋಧನೆಯ ಉದ್ದೇಶ. ಇದು ಸತ್ಯವನ್ನು ಕಾಣಬೇಕೆಂಬ ಉತ್ಕಟ ಅಪೇಕ್ಷೆಯುಳ್ಳ ವ್ಯಕ್ತಿಯೊಬ್ಬನ ಪ್ರಾಮಾಣಿಕ ಪ್ರಯತ್ನ. ಇಂತಹ ನಿಟ್ಟಿನಲ್ಲಿ ಹ.ಬೊ.ಹಳ್ಳಿ ತಾಲೂಕಿಗೆ ಸಂಬಂಧಿಸಿದ ದಲಿತರ ಸ್ಥಿತಿಗತಿಗಳನ್ನು ಹೊರಹೆಕ್ಕಿ ತೆಗೆಯುವ, ಅಲ್ಲಿರುವ ದಲಿತರ ಅಭಿವೃದ್ಧಿಗೆ ಆಗಿರುವ ಅಡಚಣೆಗಳು ಯೋಜನೆಯ ಸಾಧಕ ಬಾಧಕಗಳನ್ನು ಮತ್ತು ಅವುಗಳನ್ನು ಸರಿಪಡಿಸುವ ಸಲಹೆಗಳನ್ನು ನೀಡುವ ಪ್ರಯತ್ನದ ದೃಷ್ಟಿಯಿಂದ ಈ ಕೆಳಗಿನ ಅಧ್ಯಯನ ವಿಧಾನಗಳನ್ನು ಅನುಸರಿಸಲಾಗಿದೆ.

## ೧. ರಚನಾತ್ಮಕ ಪ್ರಶ್ನಾವಳಿ ವಿಧಾನ

ಈ ಪ್ರಶ್ನೆಗಳು ಸಂಶೋಧನೆಯ ಮೂಲಬೀಜಗಳು. ಅಲ್ಲಿಂದಲೇ ಸಂಶೋಧನೆ ಆರಂಭ. ಇತರರಿಂದ ವಿಷಯವನ್ನು ತಿಳಿಯಲು ಕೇಳುವ ಪ್ರಶ್ನೆಗಳ ಸಮೂಹಗಳು ಪ್ರಶ್ನಾವಳಿಗಳು ಇವುಗಳ ಮೂಲಕ ಒಬ್ಬ ವ್ಯಕ್ತಿಯ ಅಂತರಂಗವನ್ನು ಪ್ರವೇಶಿಸಿ ಅವನ ಮಾನಸಿಕ ಚಟುವಟಿಕೆಯನ್ನು ಅರಿಯಲು ಪ್ರಯತ್ನ ಮಾಡಲಾಗುತ್ತದೆ. ನನ್ನ ಅಧ್ಯಯನ ಕ್ಷೇತ್ರದಲ್ಲಿ ಅಭಿಪ್ರಾಯ ಪ್ರತಿಕ್ರಿಯೆಗಳು ಮತ್ತು ಮಾಹಿತಿಯನ್ನು ಸಂಗ್ರಹಣೆ ಮಾಡುವ ದೃಷ್ಟಿಯಿಂದ ನಿರ್ದಿಷ್ಟ ವಿಷಯದ ಸುತ್ತ ಪ್ರಶ್ನಾವಳಿಗಳನ್ನು ತಯಾರಿಸಿ, ಕ್ಷೇತ್ರಕಾರ್ಯ ಮಾಡುವಾಗ ಸುಮಾರು ೪೬೦ ಫಲಾನುಭವಿಗಳನ್ನು ಸಂದರ್ಶಿಸಿ, ಪ್ರಶ್ನಾವಳಿಗಳಿಗೆ ಉತ್ತರ ಪಡೆಯಲಾಗಿದೆ. ವಿಶೇಷ ಘಟಕ ಯೋಜನೆಯಡಿಯಲ್ಲಿ ದಲಿತರ ಅಭಿವೃದ್ಧಿಗೆ ಪೂರಕವಾಗುವಂತಹ ಮಾಹಿತಿಗಳನ್ನು ಸಂಗ್ರಹಿಸಲು ಕ್ಷೇತ್ರಕಾರ್ಯ ಮಾಡುವಾಗ ಅವರಿಗೆ ನಾನಾ ಪ್ರಶ್ನೆಗಳನ್ನು ಕೇಳಿ ಅವರಿಂದ ಪಡೆದ ಉತ್ತರ ರೂಪವನ್ನು ಮಾಹಿತಿ ರೂಪದಲ್ಲಿ ಸಂಗ್ರಹಿಸಿ ಈ ಮಹಾ ಪ್ರಬಂಧ ರಚಿಸಲಾಗಿದೆ.

## ೨. ಸಂದರ್ಶನ ವಿಧಾನ

ಸಂಶೋಧಕನು ಸಂಶೋಧನೆ ಕೈಗೊಳ್ಳಲು ವಿಷಯ ಸಂಗ್ರಹಣೆಗೆ ಅಗತ್ಯವಿರುವ ಮಾಹಿತಿಗಳನ್ನು ಸಂಗ್ರಿಹಸಬೇಕಾಗುತ್ತದೆ. ಅವುಗಳಲ್ಲಿ ಪ್ರಾಥಮಿಕ ಮಾಹಿತಿಗಳು ಹಾಗೂ ಆನುಷಂಗಿಕ ಮಾಹಿತಿಗಳು ಪ್ರಮುಖವಾಗಿರುತ್ತವೆ. ನನ್ನ ಅಧ್ಯಯನ ಕ್ಷೇತ್ರದಲ್ಲಿ ಮಹಾಪ್ರಬಂಧಕ್ಕೆ ಅಗತ್ಯವಿರುವ ವಿವರಗಳನ್ನು ವಿಶೇಷ ಘಟಕ ಯೋಜನೆಯನ್ನು ಅನುಷ್ಠಾನ ಮಾಡುತ್ತಿರುವ ವಿವಿಧ ಇಲಾಖೆಯ ಅಧಿಕಾರಿಗಳನ್ನು ಸಂದರ್ಶಿಸಿರುತ್ತೇನೆ. ಅನುಷ್ಠಾನಾಧಿಕಾರಿಗಳ ಸಂದರ್ಶನ ನಡೆಸಿ ಯೋಜನೆಯ ಪ್ರಾರಂಭ, ಕಾರ್ಯಾನುಷ್ಠಾನ, ಅದರಲ್ಲಿರುವ ಸಾಧಕ ಬಾಧಕಗಳು ಅವುಗಳ ಪರಿಹಾರಕ್ಕೆ ಸೂಕ್ತ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿರುತ್ತದೆ. ಅಂತೆಯೇ ಸದರಿ ಯೋಜನೆಯಲ್ಲಿ ಆಯ್ಕೆಯಾಗಿರುವ ಫಲಾನುಭವಿಗಳನ್ನು ಸಂದರ್ಶಿಸಿ ಅವರು ಈ ಯೋಜನೆಯಲ್ಲಿ ಪಡೆಯುತ್ತಿರುವ ಸೌಲತ್ತು, ಅದರಿಂದ ಬರುತ್ತಿರುವ ಆದಾಯ, ಯೋಜನೆಯನ್ನು ಪಡೆದುಕೊಳ್ಳಲು ನಡೆಸಿದ ಪ್ರಯತ್ನ, ಯೋಜನೆಯ ಸದುಪಯೋಗ ಹಾಗೂ ಅದರಿಂದ ಆಗಿರುವ ಅನುಕೂಲ ಮತ್ತು ಅನಾನುಕೂಲಗಳ ಬಗ್ಗೆ ಅವರ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿರುತ್ತದೆ.

## ೩. ಐತಿಹಾಸಿಕ ಅವಲೋಕನ ವಿಧಾನ

ಸಂಗ್ರಹಿಸುವ ಮಾಹಿತಿಗಳು ಹೊರಸೂಸುವ ಅರ್ಥದ ಮೇಲಿಂದ ಐತಿಹಾಸಿಕ ಸಾಮಾಜಿಕ ಸಂಶೋಧನೆಯನ್ನು ಕೈಗೊಳ್ಳಬಹುದು. ಭೂತಕಾಲದ ಸಾಮಾಜಿಕ ಜೀವನದ ಅಭ್ಯಾಸವೇ ಹಳೆಯದರ ಇತಿಹಾಸ. ಪರಿಚಯವಿಲ್ಲದಿದ್ದರೆ ಹೊಸದರ ಔಚಿತ್ಯವನ್ನಾಗಲಿ, ವೈಶಿಷ್ಟ್ಯವನ್ನಾಗಲಿ ಕಂಡು ಕೊಳ್ಳುವುದು ಸಾಧ್ಯವಿಲ್ಲ. ಗತಿಸಿಹೋದುದನ್ನು ಆಯಾ ಕಾಲದಲ್ಲಿ ನಿಂತು ನೋಡುವುದು ಸಾಮಾಜಿಕ ಅಭ್ಯಾಸವಾದರೆ ಅದನ್ನೊಂದು ಗತಕಾಲದ ವಿಷಯವೆನ್ನುವಂತೆ ನೋಡುವುದು ಐತಿಹಾಸಿಕ ವಿಧಾನ. ಈ ವಿಧಾನದಲ್ಲಿ ದಲಿತರು ಬೆಳೆದು ಬಂದ ರೀತಿ ಅದರ ಮೂಲಸ್ವರೂಪ, ದಲಿತ ಪದದ ನಿಷ್ಪತ್ತಿ, ಅವರ ಆಚಾರ ವಿಚಾರ, ರೀತಿನೀತಿ, ಸಂಪ್ರದಾಯ, ಜನಾಂಗೀಯ ವೈವಿಧ್ಯತೆಗಳು, ನಂಬಿಕೆಗಳು ಮೊದಲಾದವುಗಳ ಬಗ್ಗೆ ಅಲ್ಲಿನ ಹಿರಿಯರು ಹಾಗು ದಲಿತರ ಬಗ್ಗೆ ಆಳವಾಗಿ ಅಧ್ಯಯನ ನಡೆಸಿ ಹೊರತಂದಿರುವ ಪುಸ್ತಕಗಳು, ಲೇಖನಗಳು, ಸಂಶೋಧನಾ ಗ್ರಂಥಗಳನ್ನು ಅಭ್ಯಸಿಸಿ ಮಾಹಿತಿ ಸಂಗ್ರಹಿಸಲಾಗಿದೆ. ದಲಿತ ಸಮುದಾಯದಲ್ಲಿ ಬರುವ ಸದರಿ ಅಧ್ಯಯನದ ಕ್ಷೇತ್ರದ ವಿವಿಧ ಜಾತಿಗಳು, ಉಪಪಂಗಡಗಳು, ಅವರುಗಳು ಆಚರಿಸುವ ಹಬ್ಬಹರಿದಿನಗಳು, ಮದುವೆ, ಜಾತ್ರೆ, ಹುಟ್ಟು, ಸಾವು ಇತ್ಯಾದಿಗಳಲ್ಲಿ ಭಾಗವಹಿಸಿ ಅವರ ಸಂಸ್ಕೃತಿಯನ್ನು ಅಧ್ಯಯನ ಮಾಡಿ ಅಂತಹ ಅಂಶಗಳನ್ನು ಈ ಮಹಾಪ್ರಬಂಧದಲ್ಲಿ ಅಳವಡಿಸಲಾಗಿದೆ.

## ೪. ವಿಷಯ ಅಂಕಿ ಸಂಖ್ಯೆ ಸಂಗ್ರಹಣೆ ಮತ್ತು ವಿಶ್ಲೇಷಣೆ

ವಿವಿಧ ಮೂಲಗಳಿಂದ ವಿಷಯ ಸಂಗ್ರಹಿಸುವುದು ಮೊದಲನೆಯ ಹಂತ. ಸಂಗ್ರಹಿಸಿದ ಸಾಮಾಗ್ರಿಗಳನ್ನು ವಿಶ್ಲೇಷಣೆ ಮಾಡುವುದು ಎರಡನೆಯ ಹಂತ. ಸಂಶೋಧನೆಯ ಆಕರಕ್ಕೆ

ಒಂದು ಅರ್ಥ ಬರುವುದು ಸಂಶೋಧಕನು ಆ ಮಾಹಿತಿಯುನ್ನು ವಿಶ್ಲೇಷಿಸಿದ ನಂತರವೇ. ಇಲ್ಲಿ ಸಂಗ್ರಹಿಸಿದ ಸಾಮಾಗ್ರಿಗಳ ಸ್ವೀಕರಣೆ ವರ್ಣನೆಗಳ ಮೂಲಕ ಅವುಗಳ ಪರಿಷ್ಕರಣೆಯ ಕಾರ್ಯ ನಡೆಯುತ್ತದೆ. ಸಂಶೋಧಕನು ಮಾಹಿತಿಯ ಸಾರಾಣೀಕರಣವನ್ನು ಸುಲುಭವಾಗಿ ಹಾಗೂ ಶೀರ್ಘವಾಗಿ ಮಾಡಬಹುದು. ಮಾಹಿತಿಯನ್ನು ಸಂಖ್ಯಾರೂಪಕ್ಕೆ ಪರಿವರ್ತಿಸುವುದರಿಂದ ವರದಿ ತಯಾರಿಕೆಯ ಕಾರ್ಯ ಸುಲಭವಾಗುತ್ತದೆ. ಈ ವಿಧಾನದಲ್ಲಿ ವಿಶೇಷ ಘಟಕ ಯೋಜನೆಯು ಅನುಷ್ಠಾನಗೊಂಡಿರುವ ಬಗ್ಗೆ ಕ್ಷೇತ್ರಕಾರ್ಯ ನಡೆಸಿ ಫಲಾನುಭವಿಗಳನ್ನು ಪ್ರಶ್ನಾವಳಿಗಳ ಮೂಲಕ ಸಂದರ್ಶಿಸಿ ಮಾಹಿತಿ ಪಡೆದುಕೊಳ್ಳಲಾಗಿದೆ. ಅಂತೆಯೇ ಸರಕಾರ ಹಾಗೂ ಸಂಘ ಸಂಸ್ಥೆಗಳು, ವ್ಯಕ್ತಿಗಳು ನೀಡಿರುವ ಅಂಕಿ ಸಂಖ್ಯೆಗಳನ್ನು ಸಂಗ್ರಹಿಸಿ ಕೋಷ್ಟಕಗಳು ಛಾಯಾಚಿತ್ರದ ಮೂಲಕ ಈ ಮಹಾಪ್ರಬಂಧ ಉತ್ತಮವಾಗಿ ಮೂಡಿ ಬರುವಂತೆ ಪ್ರಯತ್ನಿಸಲಾಗಿದೆ.

### ೫. ತೌಲನಿಕ ವಿಧಾನ

ಒಂದು ಕೃತಿಯ ಮಹತ್ವ ಗೊತ್ತಾಗಬೇಕಾದರೆ ಅದನ್ನು ಇನ್ನೊಂದು ಅಂತಹುದೇ ಕೃತಿಯೊಂದಿಗೆ ಹೋಲಿಸಿ ನೋಡಬೇಕಾಗುತ್ತದೆ. ಹೀಗೆ ಹೋಲಿಸಿದಾಗ ಅದರ ವಿಶ್ಲೇಷಣೆಯೇ ಎಂಬುದರ ಅರಿವಾಗುತ್ತದೆ. ಆದ್ದರಿಂದ ಪ್ರಸ್ತುತ ಮಹಾಪ್ರಬಂಧದಲ್ಲಿ ವಿಶೇಷ ಘಟಕ ಯೋಜನೆಯನ್ನು ಇತರೆ ಯೋಜನೆಗಳೊಂದಿಗೆ ತುಲನಾತ್ಮಕವಾಗಿ ಹೋಲಿಸಲಾಗಿದೆ. ಏಕೆಂದರೆ ಇತರೆ ಯೋಜನೆಗಳು ದಲಿತರ ಸ್ಥಿತಿಗತಿಗಳು ಬದಲಾಗಲು ಹೇಗೆ ಸಹಕಾರಿಯಾಗಿವೆ. ವಿಶೇಷ ಘಟಕ ಯೋಜನೆ ಇತರೆ ಎಲ್ಲಾ ಯೋಜನೆಗಳಿಗಿಂತ ವಿಶೇಷ ಘಟಕ ಯೋಜನೆ ಹೆಚ್ಚು ಪರಿಣಾಮಕಾರಿಯಾಗಿ ಅನುಷ್ಠಾನಗೊಂಡುದುದರ ಫಲವಾಗಿ ದಲಿತರ ಸ್ಥಿತಿಗತಿಗಳು ಅಲ್ಪಮಟ್ಟಿಗಾದರೂ ಬದಲಾಗಲು ಸಾಧ್ಯವಾಯಿತು ಎಂಬುದು ಈ ವಿಧಾನದಿಂದ ತಿಳಿದು ಬರುತ್ತದೆ.

### ೬. ಸಹಭಾಗಿತ್ವ ವಿಧಾನ

ಭಾಷೆ ಮತ್ತು ಸಾಹಿತ್ಯ ಮನುಷ್ಯನ ಅಭಿವ್ಯಕ್ತಿ ರೂಪಗಳು. ಅವನ್ನು ಮನಸ್ಸಿನ ವಿಕಾಸದ್ಯೋತಕಗಳೆಂದು ಕರೆಯಲಾಗುತ್ತದೆ. ಇದರಲ್ಲಿ ವಿಶೇಷ ಘಟಕ ಯೋಜನೆಯು ಅನುಷ್ಠಾನ ಅಧಿಕಾರಿಗಳು ಹಾಗೂ ಫಲಾನುಭವಿಗಳು ಮತ್ತು ಸಮಾಜದ ಇತರೆ ಗಣ್ಯರ ಅಭಿಪ್ರಾಯ ಅನಿಸಿಕೆಗಳನ್ನು ಪಡೆದುಕೊಳ್ಳಲಾಗಿದೆ. ಈ ಯೋಜನೆಯನ್ನು ಅನುಷ್ಠಾನಗೊಳಿಸಲು, ಪ್ರಗತಿಯನ್ನು ಸಾಧಿಸಲು ಇರುವ ಅಡಚಣೆಗಳ ಬಗ್ಗೆ ಹಾಗು ಅವುಗಳನ್ನ ಪರಿಹರಿಸಲು ಶ್ರಮಿಸುವ ವಿಧಾನಗಳು. ಅವರು ನೀಡಿರುವ ಮಾಹಿತಿಗಳನ್ನು ಪಡೆದು ಅವರ ಸಹಭಾಗಿತ್ವದೊಂದಿಗೆ ಈ ಮಹಾ ಪ್ರಬಂಧವನ್ನು ಸಾದರಪಡಿಸಲಾಗಿದೆ.

### ೭. ವಿಷಯ ಅಥವಾ ವ್ಯಕ್ತಿ ಅಧ್ಯಯನ ವಿಧಾನ

ಒಂದು ವಿಶಿಷ್ಟ ವಸ್ತುವಿಷಯ, ವ್ಯಕ್ತಿ ಅಥವಾ ಘಟನೆಗೆ ಸಂಬಂಧಿಸಿದ ಅಂಶಗಳನ್ನು ಅಂದರೆ ಅದರ ಹುಟ್ಟು, ಬೆಳವಣಿಗೆ ಪರಿಣಾಮಗಳನ್ನು ನಿಖರವಾಗಿ ತಿಳಿದುಕೊಳ್ಳಲು ಮಾಡುವ

ಅಧ್ಯಯನದ ವಿಧಾನ ಇದಾಗಿದೆ. ಈ ಯೋಜನೆಯನ್ನು ಅನುಷ್ಠಾನಗೊಳಿಸುವಾಗ ಯಾವ ಇಲಾಖೆಗಳಲ್ಲಿ ಹೆಚ್ಚಿನ ಗುರಿಸಾಧಿಸಲಾಗಿರುತ್ತದೆ, ಇರುವ ದಲಿತ ಸಮುದಾಯಗಳಲ್ಲಿಯೇ ಯಾವ ನಿಗಧಿತ ಜಾತಿಯ ಜನರು ಹೆಚ್ಚು ಫಲಪ್ರಧವಾಗಿ ಯೋಜನೆಯನ್ನು ಸಾರ್ಥಕಪಡಿಸಿಕೊಂಡಿರುತ್ತಾರೆ, ಇತರೆ ಕ್ಷೇತ್ರಗಳಲ್ಲಿ ಗುರಿಯನ್ನು ಸಾಧಿಸಲು ಸಾಧ್ಯವಾಗದೇ ಇರುವುದಕ್ಕೆ ಕಾರಣ ಇತ್ಯಾದಿಗಳನ್ನು ಅರಿಯಲು ಈ ವಿಧಾನವನ್ನು ಅನುಸರಿಸಿ ಪ್ರಸ್ತುತ ಮಹಾ ಪ್ರಬಂಧ ರಚಿಸಲಾಗಿದೆ.

## ಉ) ಅಧ್ಯಯನದ ವ್ಯಾಪ್ತಿ

ಜನಸಾಮಾನ್ಯರ ನಿಜವಾದ ಸಂಸ್ಕೃತಿಯನ್ನು ಅರಿಯಬೇಕಾದರೆ ಜನಸಂಸ್ಕೃತಿಯ ತಿಳುವಳಿಕೆಯ ಜಾನಪದಕ್ಕೆ ಹೋಗಬೇಕಾಗುವುದು. ಆ ಜಾನಪದ, ಜನಾಂಗದ ಸಂಜಿಕೆ, ಆಚಾರ ವಿಚಾರ ಮೊದಲಾದವುಗಳ ಅಭ್ಯಾಸವು ಇಂದಿನ ಪ್ರಕೃತಿ ವಿಜ್ಞಾನಿಗಳಿಗೆ ದಿಕ್ಸೂಚಿಯಾಗಿದೆ. ಯಾವುದೇ ವಿಷಯವನ್ನು ಅಧ್ಯಯನ ಮಾಡುವ ಮೊದಲು ಸಂಶೋಧನಾಕಾರರು ಸಂಶೋಧನ ವ್ಯಾಪ್ತಿ ಅಥವ ಪ್ರದೇಶವನ್ನು ಆಯ್ಕೆ ಮಾಡಿಕೊಳ್ಳಬೇಕು. ನಂತರ ಆ ಪ್ರದೇಶಗಳನ್ನು ಭೂಪಟದಲ್ಲಿ ಗುರುತಿಸಿ ಆ ಪ್ರದೇಶಕ್ಕೆ ಸೇರಿರುವ ಭೂಪ್ರದೇಶ, ಅಲ್ಲಿರುವ ಆಡಳಿತ ವ್ಯವಸ್ಥೆ, ನೈಸರ್ಗಿಕ ಸಂಪತ್ತು, ನದಿಗಳ ವ್ಯವಸ್ಥೆ, ಅರಣ್ಯದ ವಿಸ್ತಾರ, ಮಣ್ಣಿನ ಗುಣ, ಹವಾಮಾನ, ಜನಸಂಖ್ಯೆ ಅವರ ವೃತ್ತಿ, ವ್ಯವಸಾಯಕ್ಕೆ ಲಭ್ಯವಿರುವ ಭೂಮಿ, ಬೆಳೆಗಳು, ಖನಿಜ ಸಂಪತ್ತು, ಕೈಗಾರಿಕೆಗಳು, ಸಾರಿಗೆ ಸಂಪರ್ಕ, ಶಾಲಾಕಾಲೇಜುಗಳು, ವಿದ್ಯಾರ್ಥಿನಿಲಯಗಳು, ಆರೋಗ್ಯಕೇಂದ್ರಗಳು ಇವೇ ಮೊದಲಾದ ಸಾಮಾಜಿಕ ಸೇವೆಗಳ ಬಗ್ಗೆ ಅಧ್ಯಯನ ಮಾಡಿ ಮಾಹಿತಿ ಸಂಗ್ರಹಿಸಿ ಈ ಎಲ್ಲಾ ಮಾಹಿತಿಗಳನ್ನು ಹಗರಿಬೊಮ್ಮನಹಳ್ಳಿ ತಾಲೂಕಿನ ಭೌಗೋಳಿಕ ಪರಿಚಯ ಎಂಬ ಅಧ್ಯಾಯದಲ್ಲಿ ವಿವರವಾಗಿ ಪ್ರಸ್ತುತ ಪಡಿಸಲಾಗಿದೆ.

ಹೈದ್ರಾಬಾದ್ ಕರ್ನಾಟಕ ಭಾಗದ ಜಿಲ್ಲೆಗಳಲ್ಲಿ ಒಂದಾದ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕು ನಾಲ್ಕು ಕಂದಾಯಗ್ರಾಮಗಳನ್ನು ಹೊಂದಿದ್ದು ಅವುಗಳಲ್ಲಿ ಹ.ಬೊ.ಹಳ್ಳಿ, ಹಂಪಸಾಗರ, ತಂಬ್ರಹಳ್ಳಿ, ಕೋಗಳಿಗ್ರಾಮಗಳು ಪ್ರಮುಖವಾಗಿರುತ್ತವೆ. ಸದರಿ ತಾಲೂಕು ೨೨ ಗ್ರಾಮಪಂಚಾಯತಿಗಳನ್ನು ೧೬ ತಾಲೂಕು ಪಂಚಾಯತಿ ಕ್ಷೇತ್ರಗಳನ್ನು, ನಾಲ್ಕು ಜಿಲ್ಲಾಪಂಚಾಯತಿ ಕ್ಷೇತ್ರಗಳನ್ನು ಹೊಂದಿರುತ್ತದೆ. ವಿಶೇಷ ಘಟಕ ಯೋಜನೆಯಡಿಯಲ್ಲಿ ೧೯೯೮ ೧೯೯೯ರಿಂದ ೨೦೦೨ ೩ ರವರೆಗೆ ಒಟ್ಟು ೫ ವರ್ಷಗಳಲ್ಲಿ ಆಯ್ಕೆಯಾಗಿರುವ ಒಟ್ಟು ಮೂವತ್ತು ಗುಂಪು ಗ್ರಾಮಗಳನ್ನು ವೈಜ್ಞಾನಿಕವಾಗಿ ಕ್ಷೇತ್ರಕಾರ್ಯಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಯೋಜನೆಯಲ್ಲಿ ಆಯ್ಕೆಯಾಗಿರುವ ಗುಂಪು ಗ್ರಾಮಗಳಲ್ಲಿ ಒಟ್ಟು ೪೬೦ ಪರಿಶಿಷ್ಟ ಜಾತಿಯ ಫಲಾನುಭವಿಗಳ ಮನೆ ಮನೆಗೂ ಭೇಟಿಕೊಟ್ಟು ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಿದ್ಧಪಡಿಸಿದ ಪ್ರಶ್ನಾವಳಿಯಲ್ಲಿ ವಿಶೇಷ ಘಟಕ ಯೋಜನೆಯ ಪ್ರಗತಿಯ ಮಾಹಿತಿಯನ್ನು ಪರಾಮರ್ಶಿಸಲಾಗಿದೆ. ಈ ಯೋಜನೆಯ ಬಗ್ಗೆ ಸಮೀಕ್ಷೆ ಮಾಡುವುದು ಈ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಕ್ಷೇತ್ರಕಾರ್ಯ ಮತ್ತು ಲಭ್ಯವಿರುವ ಸಾಹಿತ್ಯದ ಆಧಾರದ ಮೇಲೆ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಹ.ಬೊ.ಹಳ್ಳಿ ತಾಲೂಕಿನಲ್ಲಿರುವ ಪರಿಶಿಷ್ಟಜಾತಿ ಜನಾಂಗಕ್ಕೆ ಸೇರಿದ ಆದಿ ದ್ರಾವಿಡ ಚಲುವಾದಿ, ಆದಿಕರ್ಣಾಟಕ, ಬೋವಿ, ಲಂಬಾಣಿ, ಸುಡುಗಾಡು ಸಿದ್ಧರು, ಚನ್ನದಾಸರು, ಕೊರವರು, ಹಂದಿಜೋಗಿಗಳು ಇವೇ ಮೊದಲಾದ ದಲಿತ ಸಮುದಾಯದವರು ತೀರಾ ಕಡು ಬಡವರಾಗಿದ್ದು ಇತರೇ ಜಾತಿಗಳಿಗಿಂತ ತೀರಾ ನಿಕೃಷ್ಟ ಜೀವನ ಸಾಗಿಸುತ್ತಿರುತ್ತಾರೆ. ಪರಿಶಿಷ್ಟಜಾತಿಯಲ್ಲಿಯೇ ಆದಿಕರ್ನಾಟಕ, ಆದಿದ್ರಾವಿಡ, ಚನ್ನದಾಸರು ಜಾತಿಗಳು ಅಸ್ಪೃಶ್ಯತೆಯ, ಶೈಕ್ಷಣಿಕವಾಗಿ, ರಾಜಕೀಯ ಹಾಗೂ ಸಾಮಾಜಿಕವಾಗಿ ಹಿಂದುಳಿದಿರುವ ಈ ಸಮುದಾಯದ ಬಗ್ಗೆ ಹ.ಬೊ.ಹಳ್ಳಿ ತಾಲೂಕಿನಲ್ಲಿ ಯಾವುದೇ ಅಧ್ಯಯನಗಳು ನಡೆಯದಿರುವುದು ವಿಷಾದನೀಯ ವಿಚಾರ. ಈ ನಿರ್ಲಕ್ಷಿತ ಸಮುದಾಯದ ಬಗ್ಗೆ ಸಮಗ್ರ ಅಧ್ಯಯನ ನಡೆಸಿ ಅವರ ಅಭಿವೃದ್ಧಿಗೆ ಪೂರಕ ವಿಚಾರ ಮೂಡಿಸುವುದು ತದನಂತರದ ಅಧ್ಯಯನಗಳಿಗೆ ಆಧಾರವಾಗುವ ಅಂಶಗಳನ್ನು ಒದಗಿಸುವ ವಿಚಾರದಲ್ಲಿ ಗ್ರಂಥಪ್ರಕಟಿಸುವುದು ಈ ಅಧ್ಯಯನದ ಮಹತ್ವವಾಗಿದೆ.

ಪ್ರಸ್ತುತ ಅಧ್ಯಯನವನ್ನು ಈ ಕೆಳಗಿನ ಕೆಲವು ಊಹೆಗಳ ಆಧಾರದ ಮೇಲೆ ಕೈಗೊಳ್ಳಲಾಗಿದೆ.

೧. ವಿಶೇಷ ಘಟಕ ಯೋಜನೆಯಡಿಯಲ್ಲಿ ದಲಿತರ ಸರ್ವತೋಮುಖ ಅಭಿವೃದ್ಧಿಯಾಗಬೇಕಾಗಿದೆ.

೨. ಈ ಯೋಜನೆಯಲ್ಲಿ ಸಾಕಷ್ಟು ಹಣ ಖರ್ಚು ಮಾಡಿದ್ದರೂ ಸರ್ಕಾರ ನಿರೀಕ್ಷಿಸಿದಷ್ಟು ಗುರಿ ಸಾಧಿಸಿದೆ ಎಂದಿದ್ದರೂ, ಸಮುದಾಯದ ಮಟ್ಟದಲ್ಲಿ ಹೆಚ್ಚಿನ ಗುರಿ ತಲುಪಲಾಗಿಲ್ಲ.

೩. ಶೈಕ್ಷಣಿಕ ಸೌಲಭ್ಯಗಳ ಮೂಲಕ ಆರ್ಥಿಕಾಭಿವೃದ್ಧಿಯ ಪ್ರಯೋಜನ ಪಡೆಯಲು ಸಾಮಾಜಿಕ ಪರಿವರ್ತನೆ ಸಾಧ್ಯ ಎಂಬುದರ ಅರಿವು ಅಗತ್ಯವಾಗಿದೆ.

**ಊ) ಅಧ್ಯಯನದ ಅಧ್ಯಾಯಗಳು**

ಪ್ರಸ್ತುತ ಮಹಾಪ್ರಬಂಧವನ್ನು ೮ ಅಧ್ಯಾಯಗಳನ್ನಾಗಿ ವಿಂಗಡಿಸಲಾಗಿದೆ.

೧. ಅಧ್ಯಯನದ ಸ್ವರೂಪ ಮತ್ತು ಮಹತ್ವ

೨. ಹಗರಿಬೊಮ್ಮನಹಳ್ಳಿ ತಾಲೂಕಿನ ಭೌಗೋಳಿಕ ಪರಿಚಯ

೩. ಜನಪದರು ಮತ್ತು ದಲಿತ ಪರಿಕಲ್ಪನೆ

೪. ಕರ್ನಾಟಕದಲ್ಲಿ ದಲಿತ ಚಳುವಳಿಯ ಪ್ರಭಾವ ಮತ್ತು ಪ್ರೇರಣೆ

೫. ದಲಿತರ ಅಭಿವೃದ್ಧಿ ಮತ್ತು ಸರಕಾರದ ಯೋಜನೆಗಳು

೬. ವಿಶೇಷ ಘಟಕ ಯೋಜನೆಯ ಅಡಿಯಲ್ಲಿ ದಲಿತರ ಸ್ಥಿತ್ಯಂತರಗಳು

೭. ಆಧುನಿಕತೆ ಮತ್ತು ದಲಿತರ ಸ್ಥಿತ್ಯಂತರಗಳು

೮. ಉಪಸಂಹಾರ

## ಅಧ್ಯಾಯ ಎರಡು

## ಹಗರಿಬೊಮ್ಮನ ಹಳ್ಳಿ ತಾಲೂಕಿನ ಭೌಗೋಳಿಕ ಪರಿಚಯ

ಅ) ಐತಿಹಾಸಿಕತೆ.
ಆ) ಭೌಗೋಳಿಕ ರಚನೆ.
ಇ) ಸಾಮಾಜಿಕತೆ.
ಈ) ರಾಜಕೀಯ ವ್ಯವಸ್ಥೆ.
ಉ) ಆರ್ಥಿಕ ಸ್ಥಿತಿ ಗತಿ.
ಊ) ಶೈಕ್ಷಣಿಕ ಸ್ಥಿತಿ.

# ಅಧ್ಯಾಯ ಎರಡು

# ಹಗರಿಬೊಮ್ಮನಹಳ್ಳಿ ತಾಲೂಕಿನ ಭೌಗೋಳಿಕ ಪರಿಚಯ

## ಅ) ಐತಿಹಾಸಿಕ ಹಿನ್ನಲೆ:

ಹಗರಿ ಬೊಮ್ಮನಹಳ್ಳಿ ಯಾವ ಐತಿಹಾಸಿಕ ಹಿನ್ನೆಲೆ ಇಲ್ಲದ ವರ್ತಮಾನದ ಊರಾಗಿದೆ. ಬೊಮ್ಮನಹಳ್ಳಿ ಎಂದ ತಕ್ಷಣ ನಮಗೆ ರಾಷ್ಟ್ರಕವಿ ಕುವೆಂಪುರವರ "ಬೊಮ್ಮನಹಳ್ಳಿ ಕಿಂದರಜೋಗಿ"ಕೃತಿ ನೆನಪಾಗುತ್ತದೆ. ಆದರೆ ಆ ಕೃತಿಗೂ ಈ ಬೊಮ್ಮನವಳ್ಳಿಗೂ ಯಾವುದೇ ಸಂಬಂಧವಿಲ್ಲ, ನಮ್ಮ ಇತಿಹಾಸದುದ್ದಕ್ಕೂ ನದಿದಂಡೆಯಲ್ಲಿ ನಗರ ಸಂಸ್ಕೃತಿಗಳು ಬೆಳೆದದ್ದು ಕಂಡುಬರುತ್ತದೆ. ಹಾಗೆಯೆ ಹಗರಿಬೊಮ್ಮನಹಳ್ಳಿ ಕೂಡಾ ಹಗರಿ ದಂಡೆಯಲ್ಲಿರುವ ಊರುಗಳನ್ನು ಗುರುತಿಸುವ ಸಲುವಾಗಿ ಹಗರಿ ಸೇರಿಸಿ ಹೇಳುವುದು ರೂಢಿಯಾಗಿ ಬೆಳೆದು ಬಂದಿದೆ. ಉದಾ: ಹಗರಿಕ್ಯಾದಿಗಿಹಳ್ಳಿ, ಹಗರಿಗಜಾಪುರ, ಹಗರಿಬೊಮ್ಮನಹಳ್ಳಿ, ಗದ್ದಿಕೇರಿ, ಹಂಪಸಾಗರ ಮತ್ತು ಕೋಗಳಿ ಸುತ್ತಮುತ್ತ ನೂತನ ಶಿಲಾಯುಗ ಹಾಗು ಇತಿಹಾಸ ಪ್ರಾರಂಭ ಯುಗಕ್ಕೆ ಸೇರಿದ ನೆಲೆಗಳನ್ನು ಗುರುತಿಸಲಾಗಿದೆ.ಇತ್ತೀಚಿಗೆ ದಶಮಾಪುರದ ಹತ್ತಿರದ ತಿಮ್ಮಪ್ಪನ ಅಡವಿಯಲ್ಲಿ ೯೧ ಕಲ್ಲು ವೃತ್ತಗಳನ್ನು ಪತ್ತೆ ಹಚ್ಚಿದ್ದಾರೆ. ಕದಂಬರು, ಗಂಗರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಳಚೂರಿ ಅರಸರು, ಹೊಯ್ಸಳರು, ದೇವಗಿರಿಯಾದವರು, ವಿಜಯನಗರದ ಅರಸರು, ಮೈಸೂರುಅರಸರು,ಬ್ರಿಟಿಷರು ಈ ಪ್ರದೇಶವನ್ನು ಆಳಿದ್ದಾರೆ. ತಾಲ್ಲೂಕಿನಲ್ಲಿ ಪ್ರಮುಖವಾದ ಕಂಡುಬರುವ ಐತಿಹಾಸಿಕ ಸ್ಥಳಗಳೆಂದರೆ ಕೋಗಳಿ,ಅಂಬಳಿ ಮೋರಿಗೆರಿ,ತಂಬ್ರಳ್ಳಿ, ನಾರಯಣದೇವ ನಕೆರೆ,ಉಲುವತ್ತ, ಅಲಬೂರು,ಹಂಪಸಾಗರ, ಏಣಿಗಿ, ಚಿಮ್ಮಳ್ಳಿ, ಬನ್ನಿಕಲ್,ಮಗಿಮಾವಿನಹಳ್ಳಿ ಈ ಮೇಲ್ಕಂಡ ಊರುಗಳಲ್ಲಿರುವ ಶಿಲಾಶಾಸನಗಳು,ದೇವಾಲಗಳು ಹಾಗು ಅದರಲ್ಲಿ ಶಿಲ್ಪಕಲೆಗಳು, ದೇವಾಲಯಗಳು ಹಾಗು ಅದರಲ್ಲಿ ಶಿಲ್ಪಕಲೆಗಳು ಇಲ್ಲಿನ ಇತಿಹಾಸವನ್ನು ಸಾರುತ್ತದೆ. ಯಾವುದೇ ಊರು ಅಥವಾ ಗ್ರಾಮ ಇಲ್ಲವೆ ಪಟ್ಟಣಕ್ಕೆ ತನ್ನದೇ ಆದ ಪೂರ್ವ ಇತಿಹಾಸ ಹಾಗು ಸ್ಥಳ ಮಹಿಮೆ ಇರುತ್ತದೆ ಒಂದು ಊರು ಅಥವಾ ತಾಲೂಕಿನ ಇತಿಹಾಸವೆಂದರೆ ಕೇವಲ ಅದೊಂದಕ್ಕೆ ಸೀಮಿತವಾರಗಿರಲು ಸಾಧ್ಯವಿಲ್ಲ. ತನ್ನ ಸುತ್ತಲಿನ ಊರು ಅಥವಾ ತಾಲೂಕುಗಳನ್ನೊಳಗೊಂಡು ಜಿಲ್ಲೆ ಹಾಗೂ ನೆರೆ ಹೊರೆ ಜಿಲ್ಲೆಗಳ ಇತಿಹಾಸಗಳೊಂದಿಗೆ ತಳುಕು ಹಾಕಿಕೊಂಡಿರುತ್ತದೆ. ಇಂದಿನ ದಿನಮಾನಗಳಲ್ಲೊಂದಕೂ ಈ ಸಂಬಂಧಗಳು ರಾಷ್ಟ್ರಾದ್ಯಂತ ವ್ಯಾಪಿಸಿದೆ .ಹೀಗಾಗಿ ತಾಲೂಕಿನ ಇತಿಹಾಸವನ್ನು ಗಮನಿಸಿದಾಗ ಜಿಲ್ಲೆ,ರಾಜ್ಯ,ದೇಶಗಳ ಭೂಪಟಗಳನ್ನು ಹಿನ್ನೆಲೆಯಾಗಿಟ್ಟು ಕೊಂಡು ಗುರುತಿಸಬೇಕಾಗುತ್ತದೆ. ಕರ್ನಾಟಕದ ಭೂಪಟದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಬಳ್ಳಾರಿ ಜಿಲ್ಲೆಯು

ಹಗರಿಬೊಮ್ಮನಹಳ್ಳಿ ತಾಲೂಕು ಹೊಂದಿದೆ.ಇತಿಹಾಸ ಪೂರ್ವ ಹಾಗೂ ಇತಿಹಾಸ ಕಾಲದಿಂದಲೂ ಕೆಲವು ಸ್ಥಳಗಳು ಗುರುತಿಸಲ್ಪಟ್ಟಿವೆ.ಇಲ್ಲಿಯ ಪರಿಸರದಲ್ಲಿ ಪ್ರಾಗೈತಿಹಾಸಿಕ ಕುರುಗಳಿರುವುದನ್ನು ಸಂಶೋಧಕರು ಗುರುತಿಸಿದ್ದಾರೆ.

ಹಗರಿಬೊಮ್ಮನಹಳ್ಳಿಗೆ ಈ ಹೆಸರು ಬರಲು ಕಾರಣ, ಹಿಂದಿನ ಕಾಲದಲ್ಲಿ ಇಲ್ಲಿನ ಹಿರಿಯರು ಭೋರ್ಗರೆದು ಹರಿಯುತ್ತಿದ್ದ ತುಂಗಭದ್ರಾ ತೀರದಲ್ಲಿ ನೆಲಸಿದ್ದರು. ಅವರಿಗೆ ಬಳ್ಳಾರಿಯ ಪಕ್ಕದಲ್ಲಿ ವಿಶಾಲವಾಗಿ ಪ್ರವಹಿಸುವ ನದಿಯು ಹಳ್ಳದಂತೆ ಕಂಡಿತು.ಅದನ್ನು ಹಗರಿ ಎಂದರು, ಚಿಕ್ಕಹಗರಿ ದಡದಲ್ಲಿರುವ ಬೊಮ್ಮನಹಳ್ಳಿಯಾಗಿದೆ. ಈ ಊರಿಗೆ ೧೯೫೦ ರಲ್ಲಿ ತುಂಗಭದ್ರೆಯಲ್ಲಿ ಮುಳುಗಡೆಯಾದ ಗ್ರಾಮಗಳಿಂದ ವಲಸೆ ಬಂದ ಜನರು ಇಲ್ಲಿ ನೆಲಸಿದ್ದರಿಂದ ಈ ಊರಿಗೆ ಹೊಸಕಳೆ ಬಂದಿದೆ. ೧೯೪೫ ರ ವರೆಗೆ ಕುಗ್ರಾಮವಾಗಿದ್ದ ಈ ಊರು ಆ ಸಮಯದಲ್ಲಿ ಸ್ಥಾಪಿತವಾದ ಎಣ್ಣೆ ಉದ್ಯಮವೊಂದರಿಂದ ಇಲ್ಲಿನ ಬೆಳವಣಿಗೆ ಶೀಘ್ರಗತಿಯಲ್ಲಾಯಿತು .ಈ ರೀತಿಯಾಗಿ ಹಳೇ ಹಗರಿಬೊಮ್ಮನಹಳ್ಳಿ ಹಾಗೂ ರೈತಾಪಿ ಮತ್ತು ವ್ಯಾಪಾರಿ ವರ್ಗದ ಜನರು ನೆಲೆಸಿರುವ ರಾಮನಗರ (ಹೊಸಹಗರಿಬೊಮ್ಮನಹಳ್ಳಿ) ಈ ಎರಡೂ ಬೆಳೆದು ಕೂಡಿಕೊಂಡು ಒಟ್ಟಾರೆಯಾಗಿ ಹಗರಿಬೊಮ್ಮನಹಳ್ಳಿಯಾಗಿದೆ. .ಹಗರಿಬೊಮ್ಮನಹಳ್ಳಿಯ ಈಶಾನ್ಯಕ್ಕೆ ತುಂಗಭದ್ರಾನದಿಯ ಬಲದಂಡೆಯ ಕಡೆಗಿರುವ ಹಂಪಾಪಟ್ಟಣಕ್ಕೆ ಗ್ರಾಮ ಕೈಮಗ್ಗದ ಬಟ್ಟೆಗೆ ಪ್ರಸಿದ್ಧ. ಇಲ್ಲಿ ಪ್ರತಿ ವರ್ಷ ಡಿಸೆಂಬರ್-ಜನವರಿ ತಿಂಗಳಲ್ಲಿ ವೀರಭದ್ರಸ್ವಾಮಿ ರಥೋತ್ಸವ ನಡೆಯುತ್ತದೆ. ಹಗರಿಬೊಮ್ಮನಹಳ್ಳಿ ದಕ್ಷಿಣಕ್ಕಿರುವ ಕೋಗಳಿ ಗ್ರಾಮ ಹಿಂದೆ ನೊಳಂಬವಾಡಿ ೩೨೦೦೦ ದ ಭಾಗವಾಗಿದ್ದು ಕೋಗಳಿ ೫೦೦ ಇಂದು ಹೆಸರಾಗಿತ್ತು. ಇಲ್ಲಿರುವ ಜೈನ ದೇವಾಲಯದಲ್ಲಿ ತೀರ್ಥಂಕರ ವಿಗ್ರಹವಿದೆ. ದೇವಾಲಯದ ಒಳಗೆ ಮತ್ತು ಹತ್ತಿರದಲ್ಲಿ ಕೆಲವು ಶಾಸನಗಳಿವೆ. ಕೋಗಳಿಯಲ್ಲಿ ಚಾಳುಕ್ಯ , ಹೊಯ್ಸಳ ಮತ್ತು ವಿಜಯನಗರ ಕಾಲದ ಕೆಲವು ಶಾಸನಗಳಿವೆ. ಹಗರಿಬೊಮ್ಮನಹಳ್ಳಿಗೆ ವಾಯುವ್ಯದಲ್ಲಿ ತುಂಗಭದ್ರಹಳ್ಳಿಯಲ್ಲಿ ಸು ೩೦೦ ವರ್ಷಗಳ ಹಿಂದೆ ಕಟ್ಟಿದ ರಂಗನಾಥ ದೇವಾಲಯವಿದೆ. ಇಲ್ಲಿ ಆದಿಶೇಷನ ಮೇಲೆ ಒರಗಿರುವ ನಾರಾಯಣಮೂರ್ತಿ ಇದ್ದು ಅದರ ಪಕ್ಕದಲ್ಲಿ ಶಿವಲಿಂಗವಿದೆ. ಪ್ರತಿವರ್ಷ ಪಾಲ್ಗುಣ ಮಾಸದಲ್ಲಿ ಇಲ್ಲಿ ರಥೋತ್ಸವ ಜರುಗುವುದು. ತುಂಗಭದ್ರಾ ಅಣೆಕಟ್ಟನಿಂದ ಮುಳುಗಡೆಯಾದ ಗ್ರಾಮಗಳ ಜನರುಗೆ ಹಗರಿಬೊಮ್ಮನಹಳ್ಳಿಯಲ್ಲಿ ಪುನರ್ವಸತಿಯನ್ನು ಕಲ್ಪಿಸಲಾಯಿತು. ಇದು ಈಗ ಒಂದು ಮುಖ್ಯ ವ್ಯಾಪರಿ ಕೇಂದ್ರ.

## ಆ) ಭೌಗೋಳಿಕ ರಚನೆ

ದಖನ್ ಪ್ರಸ್ತಭೂಮಿಯಲ್ಲಿ ದಕ್ಷಿಣ ಭಾಗ ಕರ್ನಾಟಕದ ಮಧ್ಯ ಭಾಗದ ಬಯಲು ಸೀಮೆಯಲ್ಲಿ ನೆಲೆಗೊಂಡಿರುವ ಬಳ್ಳಾರಿ ಜಿಲ್ಲೆಯ ಏಳು ತಾಲೂಕುಗಳಲ್ಲಿ ಹಗರಿಬೊಮ್ಮಹಳ್ಳಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಹೊಂದಿದೆ. ಜಿಲ್ಲೆಯಲ್ಲಿನ ಇತರ ತಾಲೂಕುಗಳಿಗೆ ಹೋಲಿಸಿದಲ್ಲಿ ಹಡಗಲಿಯನ್ನು ಹೊರತುಪಡಿಸಿದರೆ ಚಿಕ್ಕ ತಾಲ್ಲೂಕು ಇದು. ಜನಸಂಖ್ಯೆ ದೃಷ್ಟಿಯಿಂದಲೂ ಕೊನೆಯ ಸ್ಥಾನ ಪಡೆದಿದೆ. ಸಮುದ್ರಮಟ್ಟದಿಂದ ೫೧೩ ಮೀಟರ್ ಎತ್ತರದಲ್ಲಿರುವ ಈ ತಾಲೂಕಿನ ಪೂರ್ವದಲ್ಲಿ ಕೂಡ್ಲಿಗಿ.ಪಶ್ಚಿಮದಲ್ಲಿ ಹಡಗಲಿಉತ್ತರದಲ್ಲಿ ಹೋಸಪೇಟೆ ಹಾಗು ತುಂಗಭದ್ರಾನದಿ ಮತ್ತು ದಕ್ಷಿಣಕ್ಕೆ ಕೂಡ್ಲಿಗಿ ತಾಲೂಕುಗಳಿವೆ. ೭೫ ರಿಂದ ೪೦ಡಿಗ್ರಿ ಮತ್ತು

೭೭ರಿಂದ ೧೧ ಡಿಗ್ರಿ ರೇಖಾಂಶ ಮತ್ತು ೧೪ರಿಂದ ೧೩ ಮತ್ತು ೧೫ ರಿಂದ ೫೦ ಅಕ್ಷಾಂಶದ ಮದ್ಯ ಇರುವ ಬಳ್ಳಾರಿ ಜಿಲ್ಲೆಯಲ್ಲಿ ಈ ತಾಲೂಕು ವಿಸ್ತರಿಸಿದೆ.ಕೆಲವಡೆ ಕಲ್ಲು ಒಂಡೆ,ಗುಡ್ಡಗಳಿವೆ. ಅಷ್ಟೇನೂ ದಟ್ಟವಲ್ಲದ ಕುರುಚಲು ಗಿಡಗಳಿಂದ ಕೂಡಿದ ಅರಣ್ಯ ಪ್ರದೇಶವಿದೆ. ಉಳಿದಂತೆ ಬಯಲು ಸೀಮೆಯಾಗಿದೆ. ಈ ತಾಲೂಕಿನ ಒಟ್ಟು ವಿಸ್ತೀರ್ಣ ೯೪೭ ಚ.ಕಿ.ಮೀ

ಹಗರಿಬೊಮ್ಮನಹಳ್ಳಿ ಬಳ್ಳಾರಿಜಿಲ್ಲೆಯ ಒಂದು ತಾಲ್ಲೂಕು ಮತ್ತು ತಾಲ್ಲೂಕಿನ ಆಡಳಿತ ಕೇಂದ್ರ. ಈ ತಾಲ್ಲೂನ್ನು ಉತ್ತರದಲ್ಲಿ ರಾಯಚೂರು ಜಿಲ್ಲೆ, ಪೂರ್ವದಲ್ಲಿ ಹೊಸಪೇತೆ ಮತ್ತು ಕೂಡ್ಲಿಗಿ ತಾಲ್ಲೂಕುಗಳೂ, ದಕ್ಷಿಣದಲ್ಲಿ ಹರಪನಹಳ್ಳಿ ತಾಲ್ಲೂಕು ಪಶ್ಚಿಮದಲ್ಲಿ ಹಡಗಲಿ ತಾಲ್ಲೂಕಿನ ಒಂದು ಹೋಬಳಿ ಕೇಂದ್ರವಾಗಿತ್ತು.ಅನಂತರ ಕೂಡ್ಲಿಗಿ ತಾಲ್ಲೂಕಿನ ೧೩ ಗ್ರಾಮಗಳನ್ನು, ಹಡಗಲಿ ತಾಲ್ಲೂಕಿನಿಂದ ೨೨ಗ್ರಾಮಗಳನ್ನು ತೆಗೆದುಕೊಂಡು ಮಲ್ಲಾಪುರ ತಾಲ್ಲೂಕಿನ ಬದಲು ಹಗರಿಬೊಮ್ಮನಹಳ್ಳಿ ತಾಲ್ಲೂಕು ಕೇಂದ್ರವಾಗಿಸಿಕೊಂಡು ಈ ತಾಲ್ಲೂಕನ್ನು ೧೯೭೩ ರಲ್ಲಿ ರಚಿಸಲಾಯಿತು. ಹಂಪಸಾಗರ ಕೋಗಳಿ ,ಹಗರಿಬೊಮ್ಮನಹಳ್ಳಿ,ತಂಬ್ರಳ್ಳಿ ಇದರ ಹೋಬಳಿಗಳಾಗಿವೆ. ಈ ತಾಲ್ಲೂಕಿನ ವಿಸ್ತೀರ್ಣ೯೭೭ ಚ.ಕಿ.ಮೀ ಗಳಾಗಿರುತ್ತದೆ. ತಾಲ್ಲೂಕಿನ ಉತ್ತರದಲ್ಲಿ ತುಂಗಭದ್ರಾ ನದಿ ಮತ್ತು ತುಂಗಭದ್ರಾ ಜಲಾಶಯದ ಹಿನ್ನೀರು ಹರಿದಿರುತ್ತದೆ. ಚಿಕ್ಕಹಗರಿ ತಾಲ್ಲೂಕಿನ ಮುಖ್ಯನದಿ. ಹೊಳೆಯು ದಕ್ಷಿಣದಿಂದ ಉತ್ತರಾಭಿಮುಖವಾಗಿ ಹರಿದು ತುಂಗಾಭದ್ರಾ ನದಿಯನ್ನು ಸೇರಿಕೊಳ್ಳುತ್ತದೆ. ತಾಲ್ಲೂಕಿನಲ್ಲಿ ಕೆಂಪುಮಣ್ಣಿನ ಭೂಮಿ ಹೆಚ್ಚಾಗಿರುವುದು ಕಂಡುಬರತ್ತದೆ.

ಸಾಮನ್ಯವಾಗಿ ಮಳೆಯಾಗುವ ಈ ತಾಲ್ಲೂಕಿನ ವ್ಯವಸಾಯಕ್ಕೆ ಅನುಕೂಲವಾಗಲು ಚಿಕ್ಕಹಗರಿ ನದಿಗೆ ಹಗರಿಬೊಮ್ಮನಹಳ್ಳಿಯಿಂದ ದಕ್ಷಿಣದ ೪,ಕಿ.ಮಿ ದೂರದಲ್ಲಿ ಮಾಲ್ವಿಯ ನೈರುತ್ಯಕ್ಕೆ ಸುಮಾರು ಅರ್ಧಮೈಲು ದೂರದಲ್ಲಿ ೨೫೦ ಲಕ್ಷ ರೂ ಮೌಲ್ಯದ ಅಣೆಕಟ್ಟು ಕಟ್ಟಿ ಹಗರಿಬೊಮ್ಮನಹಳ್ಳಿಜಲಾಶಯವನ್ನು ನಿರ್ಮಿಸಾಲಾಗಿದೆ. ಈ ಜಲಾಶಯವು ಎರಡು ನಾಲೆ ಗಳಿಂದ ಸುಮಾರು ೭೩೫೦ ಎಕರೆಗೆ ನೀರೊದಗಿಸಲಾಗಿದೆ. ಈತಾಲ್ಲೂಕಿನಲ್ಲಿ ಕೆಂಪು ಮತ್ತು ಕಪ್ಪು ಮಣ್ಣು ಭೂಮಿ ಇದ್ದು ಜೋಳ,ಶೇಂಗಾ, ಸೂರ್ಯಕಾಂತಿ,ಸಜ್ಜೆ,ಮೇಣಸಿನಕಾಯಿ ಹೆಚ್ಚಾಗಿ ಬೇಳೆಯುತ್ತಿದ್ದಾರೆ.ಇತ್ತೀಚಿನ ನೀರಾವರಿ ಸೌಕರ್ಯಗಳು ಹೆಚ್ಚಾಗಿರುವುದರಿಂದ ತೋಟಗಾರಿಕಾ ಬೆಳೆಗಳಾಗಿ ಹೆಚ್ಚಾಗಿ ಬೆಳೆಯುತ್ತಿರುವುದು ಸಾಮನ್ಯವಾಗಿದೆ.

ಕೃಷಿಯ ಜೊತೆಗೆ ಈ ತಾಲ್ಲೂಕಿನಲ್ಲಿ ಪಶುಪಾಲನೆ ಮತ್ತು ಮತ್ಸ್ಯೋದ್ಯಮಗಳಿವೆ. ಪಶುಪಾಲನೆ ಕೇಲವು ವರ್ಷಗಳಿಂದ ಅಭಿವೃದ್ಧಿಯ ಪಥದಲ್ಲಿದೆ. ಈ ತಾಲ್ಲೂಕಿನಲ್ಲಿ ಅನೇಕ ಎಣ್ಣೆ ಗಿರಣಿಗಳಿದ್ದು ಖಾದ್ಯತೈಲ ಉತ್ಪಾದನೆ ಇಲ್ಲಿ ಮುಖ್ಯ ಕೈಗಾರಿಕೆ. ಈಕೈಗಾರಿಕೆಗೆ ಬೇಕಾಗುವ ಎಣ್ಣೆಕಾಳುಗಳ ಉತ್ಪಾದನೆ ಇಲ್ಲಿ ಅದಿಕ ತಾಲ್ಲೂಕಿನ ಉತ್ತರ ಭಾಗದಲ್ಲಿ ಮತ್ತು ಪಶ್ಚಿಮಕ್ಕೆ ತುಂಗಭದ್ರಾನದಿಯ ಹಿನ್ನೀರು ನಿಲ್ಲುವುದರಿಂದ ವ್ಯವಸಾಯಕ್ಕೆ ಅನುಕೂಲವಾಗಿದೆ. ಈ ಪ್ರದೇಶದಲ್ಲಿ ಏತ ನೀರಾವರಿ ಯೋಜನೆಗಳು ಕಾರ್ಯ ನಿರ್ವಹಿಸುತ್ತಿರುವುದು. ನದಿಯ ದಡದಲ್ಲಿ ಗ್ರಾಮಗಳಿರುವುದರಿಂದ ವ್ಯವಸಾಯಕ್ಕೆ ಅನುಕೂಲಕರವಾದ ಭೂಮಿ ಇದ್ದು ಜೋಳ, ಶೇಂಗಾ, ಸೂರ್ಯಕಾಂತಿ, ಸಜ್ಜೆ, ಮೇಣಸಿನಕಾಯಿ ಹೆಚ್ಚಾಗಿ ಬೇಳೆಯುತ್ತಿದ್ದಾರೆ. ಇತ್ತೀಚಿನ

ನೀರಾವರಿ ಸೌಕರ್ಯಗಳು ಹೆಚ್ಚಾಗಿರುವುದರಿಂದ ತೋಟಗಾರಿಕಾ ಬೆಳೆಗಳಾಗಿ ಹೆಚ್ಚಾಗಿ ಬೆಳೆಯುತ್ತಿರುವುದು ಸಾಮನ್ಯವಾಗಿದೆ.

ಕೃಷಿಯ ಜೊತೆಗೆ ಈ ತಾಲ್ಲೂಕಿನಲ್ಲಿ ಪಶುಪಾಲನೆ ಮತ್ತು ಮತ್ಸ್ಯೋದ್ಯಮಗಳಿವೆ. ಪಶುಪಾಲನೆ ಕೇಲವು ವರ್ಷಗಳಿಂದ ಅಭಿವೃದ್ಧಿಯ ಪಥದಲ್ಲಿದೆ. ಈ ತಾಲ್ಲೂಕಿನಲ್ಲಿ ಅನೇಕ ಎಣ್ಣೆ ಗಿರಣಿಗಳಿದ್ದು ಖಾದ್ಯತೈಲ ಉತ್ಪದಾನೆ ಇಲ್ಲಿ ಮುಖ್ಯ ಕೈಗಾರಿಕೆ. ಈ ಕೈಗಾರಿಕೆಗೆ ಬೇಕಾಗುವ ಎಣ್ಣೆಕಾಳುಗಳ ಉತ್ಪಾದನೆ ಇಲ್ಲಿ ಅಧಿಕ ತಾಲ್ಲೂಕಿನ ಉತ್ತರ ಭಾಗದಲ್ಲಿ ಮತ್ತು ಪಶ್ಚಿಮಕ್ಕೆ ತುಂಗಭದ್ರಾನದಿಯ ಹಿನ್ನೀರು ನಿಲ್ಲುವುದರಿಂದ ವ್ಯವಸಾಯಕ್ಕೆ ಅನುಕೂಲವಾಗಿದೆ. ಈ ಪ್ರದೇಶದಲ್ಲಿ ಏತ ನೀರಾವರಿ ಯೋಜನೆಗಳು ಕಾರ್ಯ ನಿರ್ವಹಿಸುತ್ತಿರುವುದು ನದಿಯ ದಡದಲ್ಲಿ ಗ್ರಾಮಗಳು ವ್ಯವಸಾಯದಿಂದ ಅನುಕೂಲವಾಗಿದೆ.

ಈ ತಾಲ್ಲೂಕಿನಲ್ಲಿ ಪ್ರಾಥಮಿಕ ಶಾಲೆಗಳು ಮಾದ್ಯಮಿಕ, ಪ್ರೌಢಶಾಲೆ, ಪದವಿ ಪೂರ್ವಕಾಲೇಜುಗಳಿದ್ದು, ಶೈಕ್ಷಣಿಕ ಅಭಿವೃದ್ಧಿಗೆ ಸಹಕಾರಿಯಾಗಿದೆ. ಅಂಚೆ ಮತ್ತು ತಂತಿ ದೂರಾವಾಣಿ, ವಿದ್ಯುತ್,ಆಸ್ಪತ್ರೆ ಮುಂತಾದ ಸೌಕರ್ಯಗಳಿವೆ. ಪೋಲಿಸ್ ಠಾಣೆಗಳು ಹಗರಿಬೊಮ್ಮನಹಳ್ಳಿ ಹಾಗೂ ತಂಬ್ರಳ್ಳಿಯಲ್ಲಿ ಉಪಠಾಣೆ, ಹಂಪಸಾಗರದಲ್ಲಿ ವಿದ್ಯಬ್ಯಾಸಕ್ಕೆ ಅನುಕೂಲವಾಗುವಂತ್ತೆ ಸಮಾಜಕಾಲ್ಯಾಣ ಇಲಾಖೆಯಿಂದ ೧೦ ಮೇಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು ೧ ಮೇಟ್ರಿಕ್ ನಂತರ ವಿದ್ಯಾರ್ಥಿ ನಿಲಯ ಬಿ.ಸಿ.ಎಂ ವಿದ್ಯಾರ್ಥಿ ನಿಲಯಗಳು ತಾಲ್ಲೂಕಿನ ಪ/ಜಾತಿ ಪ/ಪಂಗಡ ಹಾಗು ಹಿಂದುಳಿದ ವರ್ಗ ಅಲ್ಪಸಂಖ್ಯಾತರ ಅಭಿವೃದ್ಧಿಗೆ ಸಹಕಾರಿಯಾಗಿವೆ. ತಾಲ್ಲೂಕಿನಲ್ಲಿ ಕೊಟ್ಟೂರು, ಹೋಸಪೇಟೆ ರೈಲುಮಾರ್ಗ ಮತ್ತು ರಾಜ್ಯ ಹೆದ್ದಾರಿ ಹಾದುಹೋಗಿದ್ದು ಸುತ್ತ ಪಟ್ಟಣ ಮತ್ತು ಊರುಗಳಿಗೆ ಉತ್ತಮ ಮಾರ್ಗ ಸಂಪರ್ಕಗಳಿವೆ.

ರೈಲುಮಾರ್ಗ ಮತ್ತು ರಾಜ್ಯ ಹೆದ್ದಾರಿ ಹಾದು ಹೋಗಿದ್ದು ಪಟ್ಟಣ ಮತ್ತು ಊರುಗಳಿಗೆ ಉತ್ತಮ ಮಾರ್ಗ ಸಂಪರ್ಕಗಳಿವೆ.

*** ಆಡಳಿತ ರಚನೆ (Administrative setup)**

ಹಗರಿಬೊಮ್ಮನಹಳ್ಳಿ ಮೊದಲು ಹಡಗಲಿ ತಾಲ್ಲೂಕಿನ ಒಂದು ಹೋಬಳಿ ಕೇಂದ್ರವಾಗಿತ್ತು ಆನಂತರ ಕೂಡ್ಲಿಗಿ ತಾಲ್ಲೂಕಿನಿಂದ ೧೩ ಗ್ರಾಮಗಳನ್ನು ಹಡಗಲಿ ತಾಲೂಕಿನಿಂದ ೨೨ ಗ್ರಾಮಗಳನ್ನು ತೆಗೆದುಕೊಂಡು ಮತ್ತು ಮಲ್ಲಾಪುರ ತಾಲ್ಲೂಕಿನ ೨೦ ಗ್ರಾಮಗಳನ್ನು ತೆಗೆದುಕೊಂಡು ಮಲ್ಲಾಪುರ ತಾಲ್ಲೂಕಿನ ಬದಲು ಹಗರಿಬೊಮ್ಮನಹಳ್ಳಿಯನ್ನು ಕೇದ್ರವಾಗುಳ್ಳ ಈ ತಾಲ್ಲೂಕನ್ನು ರಚಿಸಲಾಯಿತು. ಈ ತಾಲ್ಲೂಕು ೪ ಕಂದಾಯ ಹೋಬಳಿಗಳನ್ನು ಹೊಂದಿದ್ದು ಅವು ಈ ರೀತಿ ಇವೆ ೧)ಹಗರಿಬೊಮ್ಮನಹಳ್ಳಿ ೨)ತಂಬ್ರಹಳ್ಳಿ ೩) ಹಂಪಸಾಗರ ೪] ಕೋಗಳಿ ಒಟ್ಟು ಐವತ್ತೆರಡು ಗ್ರಾಮಗಳು ಜನವಸತಿಯಿಂದ ಕೂಡಿದ್ದು ಮೂರು ಗ್ರಾಮಗಳು ಜನ ವಸತಿ ಇರುವುದಿಲ್ಲ (ಜಿಲ್ಲಾ ಅಂಕಿ ಅಂಶಗಳ ನೋಟ ೯೫-೯೬ಪುಟ೧) (ಅಸ್ಪೃಶ್ಯರು ಎ.ವೆಂಕಟಸ್ವಾಮಿ) ಅಂತರರಾಷ್ಟ್ರೀಯ ಸಂಬಂಧಗಳು

ಹಗರಿಬೊಮ್ಮನಹಳ್ಳಿ ತಾಲ್ಲೂಕು ಹೈದ್ರಾಬಾದ್-ಕರ್ನಾಟಕ ಯೋಜನೆಯಡಿಯಲ್ಲಿ ಬರುವುದರಿಂದ ತಾಲ್ಲೂಕಿನಲ್ಲಿ ಯೋಜನೆಯ ಕಾರ್ಯಾನುಷ್ಠಾನವಿಲ್ಲದೇ ಹಾಗೂ ಜಿಲ್ಲಾ ಪಂಚಾಯಿತಿ ಯೋಜನೆಗಳ ಜಾರಿಯಲ್ಲಿವೆ. (ಖಟಿಜಣಾಣಡುಚಿಟುಚೀಣುಂಟಿ , ಔಭಿಚಿಟ ಜಭಿಂಟಂಟುಭಿ ಜಥಣಡಿಜಟಿಚಿಟುಣುಥ:ರಿಚಿಂಜ ೨೦) ಹಗರಿಬೊಮ್ಮನಹಳ್ಳಿ ತಾಲ್ಲೂಕು ಹೊಸಪೇಟೆಯ ಕಂದಾಯ ವಿಭಾಗಕ್ಕೆ ಸೇರಿದ್ದಾಗಿದೆ.

**ಇ) ಸಾಮಾಜಿಕತೆ**

ಭಾರತದಲ್ಲಿ ಶ್ರಮಜೀವಿ ವರ್ಗ ಬಡತನದಲ್ಲಿದೆ. ಆದರೆ ಈ ವರ್ಗ ಶ್ರೀಮಂತರು ಮತ್ತು ಬಡವರು ಎಂಬ ಬೇಧವನ್ನು ಬಿಟ್ಟು ಬೇರೆ ಯಾವ ಭೇದಗಳು ಇಲ್ಲವೆಂದೂ ನೈತಿಕ ಸ್ಥೈರ್ಯದಿಂದ ಹೇಳಲಾರದು. ಈ ವರ್ಗ ಜಾತಿಗಳ ಮಧ್ಯದ ಅಂತರವನ್ನು ಮೇಲು ಕೀಳೆಂಬ ಬೇದವನ್ನು ತಾನೂ ಅನುಸರಿಸುವುದಿಲ್ಲ ಎಂಬುದನ್ನು ಧೃಡಪಡಿಸಲಾರದೆ ಹೋಗಿದೆ. ಹೀಗಿರುವಾಗ ಇಂತಹ ಜನರು ಶ್ರೀಮಂತರ ವಿರುದ್ಧವಾದ ಕ್ರಾಂತಿಯಲ್ಲಿ ಒಗ್ಗೂಡುವರೆಂಬ ನಂಬಿಕೆಯಿಲ್ಲ. ಶ್ರಮಜೀವಿಗಳಲ್ಲಿ ಒಗ್ಗೂಡದೆ ಹೋದ ಪಕ್ಷದಲ್ಲಿ ಕ್ರಾಂತಿ ನಡೆಯುವುದು ಅಸಾಧ್ಯ. ಭಾರತದಲ್ಲಿರುವ ಜಾತಿ ವ್ಯವಸ್ಥೆಯು ನೀವು ಯಾವ ಹಾದಿಗಾದರು ಹೋಗಿ ಜಾತಿಯೆಂಬ ಭೂತ ನಿಮ್ಮನ್ನು ಅಡ್ಡಗಟ್ಟುತ್ತದೆ. ಈ ಭೂತವನ್ನು ಸಂಹರಿಸದ ಹೊರತು. ಅತಿ ಶೂದ್ರಂಗೆ ಸಾಮಾಜಿಕ ರಾಜಕೀಯ ಮತ್ತು ಆರ್ಥಿಕ ಸಮಾನತೆ ದೊರಕುವುದಿಲ್ಲ. ಶ್ರಮ ವಿಭಜನೆಯ ಪ್ರತಿಯೊಂದು ಸಮಾಜದ ಅವಶ್ಯಕ ಲಕ್ಷಣವಾಗಿರುತ್ತದೆ. ಆದರೆ ಜಾತಿ ಪದ್ಧತಿ ಕೇವಲ ಶ್ರಮ ವಿಭಜನೆಯಾಗದೆ, ಶ್ರಮಜೀವಿಗಳ ವಿಭಜನೆ ಆಗುತ್ತಿರುವುದು ದುರಂತ.

**ಈ) ರಾಜಕೀಯಕ್ಕೆ ವ್ಯವಸ್ಥೆ:**

ಹಗರಿಬೊಮ್ಮನಹಳ್ಳಿ ತಾಲ್ಲೂಕಿಗೆ ತನ್ನದೇ ವಿಧಾನ ಸಭಾ ಕ್ಷೇತ್ರವಿಲ್ಲದಿರುವುದರಿಂದ ತಾಲ್ಲೂಕಿನ ಅಭಿವೃದ್ಧಿ ಕುಂಠಿತಗೊಂಡಿದೆ ಎಂಬ ಕೂಗು ಸಹ ಕೇಳಿಬರುತ್ತದೆ. ತಾಲ್ಲೂಕಿನಲ್ಲಿ ಪಂಚಾಯತ್ ರಾಜ್ ವ್ಯವಸ್ಥೆ ಅಸ್ತಿತ್ವದಲ್ಲಿರುತ್ತದೆ. ಈ ತಾಲ್ಲೂಕು ನಾಲ್ಕು ಜಿಲ್ಲಾ ಪಂಚಾಯತ್ ಕ್ಷೇತ್ರಗಳನ್ನು ಹೊಂದಿರುತ್ತದೆ. ಈ ತಾಲ್ಲೂಕು ಪಂಚಾಯಿತಿ ಸಮಿತಿಯಲ್ಲಿ ಒಟ್ಟು ಹದಿನಾಲ್ಕು ಸದಸ್ಯರು ಇರುತ್ತಾರೆ. ಇದು ಹತ್ತು ಪುರುಷ ಸದಸ್ಯರು ಮತ್ತು ನಾಲ್ಕು ಮಹಿಳಾ ಸದಸ್ಯರನ್ನು ಒಳಗೊಂಡಿದೆ. ತಾಲ್ಲೂಕಿನಲ್ಲಿ ೨೨ ಗ್ರಾಮ ಪಂಚಾಯಿತಿಗಳಿವೆ ಇಲ್ಲಿಯೂ ಸಹಾ ಮೀಸಲಾತಿಗನುಗುಣವಾಗಿ ಮಹಿಳಾ ಸದಸ್ಯರು ಮತ್ತು ಅಧ್ಯಕ್ಷರು ಇರುತ್ತಾರೆ.

* ವಿಸ್ತೀರ್ಣ ಮತ್ತು ಜನಸಂಖ್ಯೆ (Area and Population);

ಈ ತಾಲ್ಲೂಕು ೯೭೩.೬೨ ಚ.ಕಿ.ಮಿ ಹೊಂದಿದೆ (District censes hand book :೧೯೯೧ page ೪೦) ವಿಸ್ತೀರ್ಣದ ದೃಷ್ಟಿಯಿಂದ ಜಿಲ್ಲೆಯಲ್ಲಿ ಇದು ಏಳನೆ

ಸ್ಥಾನದಲ್ಲಿದೆ. ೧೯೯೧ರಲ್ಲಿ ಜನಗಣತಿಯಲ್ಲಿ ಈ ತಾಲ್ಲೂಕನ್ನು ಗ್ರಾಮೀಣ ಪ್ರದೇಶವೆಂದು ವರ್ಗೀಕರಿಸಲಾಗಿದೆ. ಏಕೆಂದರೆ ಈ ತಾಲ್ಲೂಕಿನಲ್ಲಿ ಯಾವುದೇ ಪಟ್ಟಣವಿರುವುದಿಲ್ಲ. ಒಟ್ಟು ಜನಸಂಖ್ಯೆಯಲ್ಲಿ ಪುರುಷರು ೬೭೮೯೩(ಶೇ೫೦.೨೮) ಮತ್ತು ಮಹಿಳೆಯರು ೬೭೧೩೩(ಶೇ೪೯.೭೮) ಪ್ರಮಾಣದಲ್ಲಿ ಇದ್ದಾರೆ ಲಿಂಗ ಪರಿಮಾಣದಲ್ಲಿ ಅಷ್ಟೇನು ವತ್ಯಾಸ ಕಂಡುಬರುವುದಿಲ್ಲ.

ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆ ೨೫೦೨೮. ಇವರು ಒಟ್ಟು ಜನಸಂಖ್ಯೆಯಲ್ಲಿ ಶೇ.೧೮.೫೩೧ ಇದ್ದಾರೆ ಪರಿಶಿಷ್ಟ ಪಂಗಡದವರು ೧೨೧೦. ಇವರು ಒಟ್ಟು ಜನಸಂಖ್ಯೆಯಲ್ಲಿ ಶೇ೦.೮೯. ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಸಾಕ್ಷರತೆಯ ಪ್ರಮಾಣ ಒಟ್ಟು ಜನಸಂಖ್ಯೆಯಲ್ಲಿ ಕೇವಲ ೫೦೦೨೬. ಇವರಲ್ಲಿ ಪುರುಷ ಸಾಕ್ಷರರು ೩೩೦೪೮. ಇವರ ಪ್ರಮಾಣ ಒಟ್ಟು ಜನಸಂಖ್ಯೆಯಲ್ಲಿ ಶೇ.೨೪-೪೭ ಇದೆ. ಒಟ್ಟು ಸಾಕ್ಷರರಲ್ಲಿ ಪುರುಷರು ಶೇ ೬೬.೦೬ ರಷ್ಟಿದ್ದಾರೆ ಮಹಿಳಾ ಸಾಕ್ಷರರು ೧೬೯೭೮ ಇದ್ದು, ಒಟ್ಟು ಜಸಂಖ್ಯೆಯಲ್ಲಿ ಶೇ ೧೨.೫೭ ಮಾತ್ರ. ಒಟ್ಟು ಸಾಕ್ಷರರಲ್ಲಿ ಮಹಿಳೆಯರ ಪ್ರಮಾಣ ಶೇ ೩೩.೪೩.

ಮಹಿಳೆಯರ ಹಾಗೂ ಪುರುಷರು ನಡುವಿನ ಸಾಕ್ಷರತೆಯ ಅಂತರ ಶೇ ೩೨.೧೩ರಷ್ಟಿದೆ ಈ ರೀತಿಯಲ್ಲಿ ಪುರುಷ ಮಹಿಳೆಯರ ನಡುವಿನ ಸಾಕ್ಷರತೆಯ ಪ್ರಮಾಣ ಆಗಾಧ ರೀತಿಯಲ್ಲಿ ವ್ಯತ್ಯಾಸವಿರುವುದು ಗೋಚರಿಸುತ್ತದೆ. ಎಲ್ಲಾ ವಿವರಗಳನ್ನು ಕೋಷ್ಟಕದಲ್ಲಿ ತಿಳಿದುಕೊಳ್ಳಬಹುದು ಜನಸಂಖ್ಯೆ ಸಾಂದ್ರತೆ ಪ್ರತಿ ಚ.ಕಿಮೀ. ೧೩೮ ಇದ್ದು ಜನಸಂಖ್ಯೆಯ ದಶಕದ ಬೆಳವಣಿಗೆ ಪ್ರಮಾಣ ಶೇ ೩೬ ಜಿಲ್ಲೆಯಲ್ಲಿ ಪ್ರಥಮ ಸ್ಥಾನದಲ್ಲಿದೆ.

**ಕೋಷ್ಟಕ ೨.೧**

**ಜನಸಂಖ್ಯೆ ಮತ್ತು ವಿಸ್ತೀರ್ಣದ ವಿವರ.**

| ಕ್ರ.ಸಂ. | ವಿವರ | ಒಟ್ಟು |
|---|---|---|
| ೧. | ವಿಸ್ತೀರ್ಣ | ೯೭೩.೯೨(ಚ.ಕಿಮೀ) |
| ೨. | ಕುಟುಂಬಗಳ ಸಂಖ್ಯೆ | ೨೨೪೪೦ |
| ೩. | ಒಟ್ಟು ಜನಸಂಖ್ಯೆ | ೧.೩೫.೦೨೬ |
| | ಅ)ಪುರುಷರು | ೬೭.೮೯೩ (೫೦.೨೮) |
| | ಆ)ಮಹಿಳೆಯರು | ೬೭೧೩೩ (೪೯.೨೧) |

| | | |
|---|---|---|
| ೪. | ಪರಿಶಿಷ್ಟ ಜಾತಿ | ೨೫೦೨೮<br>(೧೮.೫೩) |
| ೫. | ಪರಿಶಿಷ್ಟ ಪಂಗಡ | ೧೨೧೦<br>(೦.೮೯) |
| ೬. | ಒಟ್ಟು ಸಾಕ್ಷರರು | ೫೦೦೨೬<br>(೩೭.೦೪) |
| | ಅ)ಪುರುಷ ಸಾಕ್ಷರರು | ೩೩೦೪೮<br><br>(೨೪.೪೭)(೬೬.೦೬) |
| | ಆ)ಮಹಿಳಾ ಸಾಕ್ಷರರು | ೧೬೯೭೮<br>(೧೨.೫೭)(೩೩.೧೭) |

(ಮೂಲ ಜಿಲ್ಲಾ ಅಂಕಿ ಅಂಶಗಳ ನೋಟ ೧೯೯೫)

***ತಾಲ್ಲೂಕಿನ ಆರ್ಥಿಕ ಸ್ಥಿತಿಗತಿ**

ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ವ್ಯವಸಾಯ ಪ್ರಧಾನವಾದ ಉದ್ಯೋಗವಾಗಿದೆ. ಒಟ್ಟು ಭೌಗೋಳಿಕ ವಿಸ್ತೀರ್ಣದಲ್ಲಿ ಬಿತ್ತನೆಯಾಗಿರುವ ಪ್ರದೇಶ ೪೪೮೮೭ ಹೆಕ್ಟರ್. (ಜಿಲ್ಲಾ ಅಂಕಿ ಅಂಶಗಳ ನೋಟ ೧೯೯೫) ಒಟ್ಟು ವಿಸ್ತೀರ್ಣದಲ್ಲಿ ೨೫೨೭ ಹಕ್ಟೇರ್ ಪ್ರದೇಶವು ಸಾಗುವಳಿಗೆ ಯೋಗ್ಯವಲ್ಲದ (ಬಂಜರು) ಭೂಮಿಯಾಗಿದೆ. ೪೯೮೯ ಹೆಕ್ಟೇರ್ ಪಾಳುಭೂಮಿಯನ್ನು ಸಾಗುವಳಿಮಾಡಲಾಗಿದೆ. ೧೧೦೨೭ ಹೆಕ್ಟೇರ್ ಭೂಮಿಯನ್ನು ಒಂದಕ್ಕಿಂತ ಹೆಚ್ಚುಬಾರಿ ಬಿತ್ತನೆ ಮಾಡಲಾಗಿದೆ. ೧೯೯೧ರ ಜನಗಣತಿಯ ಪ್ರಕಾರ ತಾಲ್ಲೂಕಿನ ಜನಸಂಖ್ಯೆ ೧೩೦೨೬ ಇವರಲ್ಲಿ ೬೦೭೮೧ ಜನರು ಮಾತ್ರ ದುಡಿಯುವ ವರ್ಗದವರಾಗಿದ್ದಾರೆ. ಅಂದರೆ ಒಟ್ಟಾರೆಯಾಗಿ ತಾಲ್ಲೂಕಿನ ಶ್ರಮ ಶಕ್ತಿ ಶೇ ೪೫.೦೧ ರಷ್ಟಿದ್ದು ಒಟ್ಟು ಶ್ರಮಶಕ್ತಿಯಲ್ಲಿ ೫೧೬೭೪(ಶೇ ೮೫)ಜನರು ತಾಲ್ಲೂಕಿನ ಕೃಷಿ ಮತ್ತು ಕೃಷಿ ಅವಲಂಬಿತ ಶ್ರಮಿಕರಾಗಿದ್ದಾರೆ. ಒಟ್ಟು ಶ್ರಮಶಕ್ತಿಯ ಹೆಚ್ಚು ಭಾಗ ವ್ಯವಸಾಯ (ಪ್ರಾಥಾಮಿಕ) ರಂಗದಲ್ಲೇ ನಿರತವಾಗಿದೆ (ಶೇ ೮೫)ಈ ಎಲ್ಲಾ ಶ್ರಮ ಯಾವರೀತಿಯಲ್ಲಿದೆ ಎಂಬುನ್ನು ಕೋಷ್ಟಕದಲ್ಲಿ ನೋಡಬಹುದು.

| | ಕೋಷ್ಟಕ ೨.೨ | | |
|---|---|---|---|
| ಕ್ರ.ಸಂ | ವಿವರಗಳು | ಒಟ್ಟು | ಶೇಕಡ |
| ೧. | ಒಟ್ಟು ಶ್ರಮ ಶಕ್ತಿ | ೬೦೭೧೮ | (೪೫.೦೧) |
| ೨. | ಕೃಷಿ ಅವಲಂಬಿತ ಶ್ರಮಶಕ್ತಿ | ೫೧೬೭೪ | (೮೫.೦೦) |
| | ಅ) ಸಾಗುವಳಿದಾರರು | ೨೪೭೯೭ | (೪೦.೨೯) |
| | ಆ) ಕೃಷಿ ಕಾರ್ಮಿಕರು | ೨೬೮೧೧ | (೪೪.೨೧) |
| ೩. | ಹೈನುಗಾರಿಕೆ, ತೋಟಗಾರಿಕೆ, ಬೇಟೆ, ಮೀನುಗಾರಿಕೆ ಮುಂತಾದವು | ೭೯೨ | (೧.೩೦) |
| ೪. | ಗಣಿಗಾರಿಕೆ | ೮೮ | (೦.೧೪) |
| ೫. | ಕರಕುಶಲ ಮತ್ತು ಗುಡಿಕೈಗಾರಿಕೆ ಹಾಗೂ ರಿಪೇರಿ | ೨೨೬೭ | (೩.೭೨) |
| ೬. | ಮನೆ ನಿರ್ಮಾಣ(ಭೂಮಿ ಕೆಲಸ) | ೫೭೭ | (೦.೮೬) |
| ೭. | ವ್ಯಾಪಾರ ಮತ್ತು ವಾಣಿಜ್ಯ | ೨೭೬೩ | (೪.೫೪) |
| ೮. | ಸಾರಿಗೆ ಸಂಪರ್ಕ, ಉಗ್ರಾಣ | ೩೭೨ | (೦.೦೧) |
| ೯. | ಇತರೆ | ೨೩೦೪ | (೩.೭೮) |

(ಮೂಲ District Census Hand book, ೧೯೯೧ ಪುಟ ೪೦)

ಉ) ಆರ್ಥಿಕ ಸ್ಥಿತಿ-ಗತಿ:-

ಬಳ್ಳಾರಿ ಜಿಲ್ಲೆಯಲ್ಲಿಯೇ ಹಗರಿಬೊಮ್ಮನಹಳ್ಳಿ ತಾಲ್ಲೂಕು ಅತ್ಯಂತ ಕಡಿಮೆ ಜನಸಂಖ್ಯೆ ಇರುವ ತಾಲ್ಲೂಕಾಗಿದೆ. ಜನರು ಜೀವನಾದಾರಕ್ಕೆ ಹೆಚ್ಚಾಗಿ ಕೃಷಿ ಹಾಗೂ ಇತರೆ ಕಸಬುಗಳನ್ನು ಅವಲಂಭಿಸಿದ್ದಾರೆ. ದೊಡ್ಡ ಕೈಗಾರಿಕೆಗಳಿಲ್ಲದಿದ್ದರೂ ಮದ್ಯಮ ಹಾಗೂ ಚಿಕ್ಕ ಕೈಗಾರಿಕೆಗಳಿವೆ. ಕಾರ್ಮಿಕರ ಸಂಖ್ಯೆಯೂ ಸಾಕಷ್ಟಿದೆ. ಹೆಚ್ಚು ಜನರು ಜೀವನ ಮಟ್ಟ ಕಡಿಮೆಯಿದೆಯೆಂದರೆ ತಪ್ಪಾಗುವುದಿಲ್ಲ. ಅಂದರೆ ಶೇ ೫೨ರಷ್ಟು ಜನರು ಬಡತನ ರೇಖೆಗಿಂತ ಕೆಳಮಟ್ಟದ ಜೀವನ ನಡೆಸುತ್ತಿರುವುದು ಕಂಡುಬರುತ್ತದೆ. ಹಲವಾರು ಕುಟುಂಬಗಳು ಕೂಲಿಯನ್ನೇ ನಂಬಿ ಬದುಕುತ್ತಿರುವುದು ಸರ್ವೇ ಸಾಮಾನ್ಯ. ಅಂತೆಯೇ ಇಲ್ಲಿನ ಬಹುತೇಕ ದಲಿತರ ಕುಟುಂಬಗಳು

ಜೀವನ ಸಾಗಿಸುವುದಕ್ಕಾಗಿ ರಾಜ್ಯದ ಇತರೆ ಭಾಗಗಳಿಗೆ ವಲಸೆ ಹೋಗುತ್ತಿರುವುದು ಕಂಡುಬರುತ್ತದೆ.

*<u>ಹಣ ಕಾಸಿನ ಮೂಲಭೂತ ಸೌಲಭ್ಯಗಳು:-</u>

ತಾಲ್ಲೂಕಿನ ಕೃಷಿಕರಿಗೆ ಹಾಗೂ ವ್ಯಾಪರಸ್ಥರಿಗೆ ಅನುಕೂಲವಾಗುವ ಹಣಕಾಸಿನ ಸಂಸ್ಥೆಗಳನ್ನು ನಾವು ನೋಡಬಹುದಾಗಿದೆ. ತಾಲ್ಲೂಕಿನಲ್ಲಿ ಐದು ವಾಣಿಜ್ಯ ಬ್ಯಾಂಕ್ ಶಾಖೆಗಳಿವೆ. ಮತ್ತು ಗ್ರಾಮಗಳಲ್ಲಿ ಏಳು ಗ್ರಾಮೀಣ ಬ್ಯಾಂಕ್‌ಗಳ ಶಾಖೆಗಳಿವೆ ಒಟ್ಟು ೧೨ ಬ್ಯಾಂಕ್ ಶಾಖೆಗಳು ಕಾರ್ಯ ನಿರ್ವಹಿಸುತ್ತಿವೆ. ತಾಲ್ಲೂಕಿನಲ್ಲಿ ಒಂದು ಪ್ರಾಥಾಮಿಕ ಭೂ ಅಭಿವೃದ್ಧಿ ಬ್ಯಾಂಕ್ ಸಹ ಇದೆ. ಕೃಷಿ ಸಾಲ ನೀಡಿಕೆಗಾಗಿ ೧೫ ಸಹಕಾರಿ ಸಂಘಗಳಿವೆ ಮತ್ತು ೧೬ ಹಾಲು ಉತ್ಪಾದಕರ ಸಹಾಕಾರಿ ಸಂಘಗಳಿವೆ. ಇತರೆ ೨೫ ಕೃಷಿ ಉದ್ದೇಶಗಳಿಗಾಗಿ ಸಾಲ ನೀಡುವ ಸಂಸ್ಥೆಗಳಿವೆ ಬೇರೆ ತಾಲ್ಲೂಕುಗಳಿಗೆ ಹೋಲಿಸಿದರೆ ಮೇಲಿನ ಸೌಲಭ್ಯಗಳು ತುಂಬಾ ಕೆಳಮಟ್ಟದಲ್ಲಿವೆ.

**ಶೈಕ್ಷಣಿಕ ಸ್ಥಿತಿ**

ಹಗರಿಬೊಮ್ಮನಹಳ್ಳಿ ಶೈಕ್ಷಣಿಕ ಸ್ಥಾನಮಾನವು ಸಾಮಾನ್ಯವಾಗಿದೆ. ಇಲ್ಲಿನ ಸಾಕ್ಷರತೆ ಪ್ರಮಾಣವು ೧೯೯೧ರ ಜನಗಣತಿಯ ಆಧಾರದ ಮೇಲೆ ಶೇ೩೭ರಷ್ಟಿದ್ದರೆ ೨೦೦೧ರ ಜನಗಣತಿಯಲ್ಲಿ ಶೇ ೫೮.೧೦ರಷ್ಟು ಅಂದರೆ ೪೭೩೪೯ ಜನ ಸಾಕ್ಷರರು ಹೆಂಗಸರಲ್ಲಿ ಶೇ೪೫.೨೦ ಅಂದರೆ ೨೯೭೪ ಜನ ಸಾಕ್ಷರರಿದ್ದಾರೆಂದು ಹೇಳಬಹುದು.

ಈ ತಾಲ್ಲೂಕಿನಲ್ಲಿ ೧೩೮ ಪ್ರಾಥಾಮಿಕ ಶಾಲೆಗಳಿದ್ದು, ಅಲ್ಲಿ ೧೪೮೪೭ ಬಾಲಕರು. ೧೩೫೬೮ ಬಾಲಕೀಯರು ಅಭ್ಯಾಸಿಸುತ್ತಿದ್ದಾರೆ.

**ಶೈಕ್ಷಣಿಕ ವಿವರ**

ಈ ತಾಲ್ಲೂಕಿನಲ್ಲಿ ಒಟ್ಟು ೨೭ ಪ್ರೌಢಶಾಲೆಗಳಿದ್ದು ಅಲ್ಲಿ ೨೭೬೬ಬಾಲಕರು ಹಾಗೂ ೨೨೫೦ಬಾಲಕಿಯರು ವ್ಯಾಸಾಂಗ ಮಾಡುತ್ತಿದ್ದಾರೆ. ಅದೇ ರೀತಿ ೫ ಪದವಿ ಪೂರ್ವ ಕಾಲೇಜುಗಳಿದ್ದು ೫೫೩ ಹುಡುಗರು ೪೦೭ ವಿದ್ಯಾರ್ಥಿನಿಯರು ವ್ಯಾಸಾಂಗಮಾಡುತ್ತಿದ್ದಾರೆ.

ಮಾನವ ಮೂಲಭೂತ ಸೌಲಭ್ಯಗಳಲ್ಲಿ ಶಿಕ್ಷಣ ಬಹು ಮುಖ್ಯವಾದದ್ದು ಶಿಕ್ಷಣ ಪಡೆದವರು ಇತರ ಮೂಲಭೂತ ಸೌಲಭ್ಯಗಳನ್ನು ತಕ್ಕ ಮಟ್ಟಿಗೆ ಸರಿಪಡಿಸಿಕೊಳ್ಳಬಲ್ಲರು. ತಾಲ್ಲೂಕಿನಲ್ಲಿ ಏಳು ಶಿಶು ವಿಹಾರಗಳಿದ್ದು ಅದರಲ್ಲಿ ೪೨೦ ಮಕ್ಕಳಿವೆ. ೧೨೦ ಪ್ರಾಥಾಮಿಕ ಶಾಲೆಗಳಿದ್ದು ೨೬,೦೭೬ ಮಕ್ಕಳು ಓದುತ್ತಿದ್ದಾರೆ. ೧೬ ಪ್ರೌಢಶಾಲೆಗಳಿದ್ದು ೩೭೭೨ ವಿದ್ಯಾರ್ಥಿಗಳಿದ್ದಾರೆ. ಒಂದು ಪದವಿ ಕಾಲೇಜು ಇದ್ದು ೩೩೬ ವಿದ್ಯಾರ್ಥಿಗಳಿದ್ದಾರೆ ಯಾವುದೇ ತಾಂತ್ರಿಕ ವೈದ್ಯಕೀಯ

ಕಾಲೇಜುಗಳು ಇರುವುದಿಲ್ಲ ಇವು ೧೯೯೧ರ ಜನಗಣತಿಯ ಪ್ರಕಾರ ತಾಲ್ಲೂಕಿನಲ್ಲಿ ಒಂದು ಸರಕಾರಿ ಆಸ್ಪತ್ರೆ ಇದೆ. ಆರು ಪ್ರಾಥಾಮಿಕ ಆರೋಗ್ಯ ಕೇಂದ್ರಗಳು ಇವೆ. ಒಂದು ಕುಟುಂಬ ಕಲ್ಯಾಣ ಕೇಂದ್ರವಿದ್ದು ೧೪ ಉಪಕೇಂದ್ರಗಳಿವೆ. ಈ ರೀತಿ ಮೂಲಭೂತ ಸೌಕರ್ಯಗಳನ್ನು ಕಾಣಬಹುದಾಗಿದೆ.

**ಹಗರಿಬೊಮ್ಮನ ಹಳ್ಳಿ ತಾಲೂಕಿನ ಪರಿಶಿಷ್ಟ ಜಾತಿಗಳ ವಿವರ**

ಜಾತಿಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನಲೆಯನ್ನು ಈ ಕೆಳಕಂಡಂತೆ ವಿವರಿಸಲಾಗಿದೆ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಕಂಡುಬರುವ ದಲಿತರ ವಿವಿಧ ಜಾತಿಗಳಿದ್ದು, ಅವುಗಳಲ್ಲಿ ಪ್ರಮುಖವಾಗಿ ಆದಿ ಕರ್ನಾಟಕ, ಆದಿ ದ್ರಾವಿಡ (ಚಲವಾದಿ), ಲಂಬಾಣಿ, ಬೋವಿ(ವಡ್ಡ), ಸುಡುಗಾಡು ಸಿದ್ದರು, ಕೊರವರು, ಕಿಳ್ಳೆಕ್ಯಾತರು ಇವೆ ಮೊದಲಾದ ಜಾತಿಗಳು ನಿಯಾಮಾನುಸಾರ ಪರಿಶಿಷ್ಟ ಜಾತಿಗೆ ಸೇರಿದವುಗಳಾಗಿದ್ದು, ಪ್ರಸ್ತುತ ಅಧ್ಯಯನದಲ್ಲಿ ಈ ಜಾತಿಗಳು ವಿಶೇಷ ಘಟಕ ಯೋಜನೆಯಡಿಯಲ್ಲಿ ಪಡೆದುಕೊಂಡಿರುವ ಸೌಲಭ್ಯಗಳ ವಿವರಗಳು ಅದರಿಂದಾಗಿರುವ ಪ್ರಗತಿಯ ವಿವರಗಳನ್ನು ಮುಂದೆ ವಿವರಿಸಲಾಗಿದೆ.

**೧. ಆದಿ ಕರ್ನಾಟಕ ಜನಾಂಗ**

ಭಾರತೀಯ ಸಮಾಜದಲ್ಲಿ ಯಾವುದೇ ಜಾತಿಯ ಹೆಸರು ಅವರ ಕಸಬನ್ನು ಆಧರಿಸಿಯೋ ಅಥವಾ ಧಾರ್ಮಿಕ ಹಿನ್ನೆಲೆಯನ್ನೋ ಇಲ್ಲವೇ ಐತಿಹ್ಯಗಳ ಮುಲವನ್ನು ಸೂಚಿಸುವಂತೆಯೇ ಇರುತ್ತದೆ. ಅನೇಕ ಜಾತಿಗಳಿಗೆ ಈ ಮಾತನ್ನು ಅನ್ವಯಿಸಿ ನೋಡಬಹುದಾಗಿದೆ.

ಆದಿ ಕರ್ನಾಟಕ ಎನ್ನುವ ಪರ್ಯಾಯ ಜಾತಿಯ ಸೂಚಕ ಹೆಸರು ೧೯೨೫ ರಲ್ಲಿ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಆಡಳಿತಾತ್ಮಕ ಹಂತದಲ್ಲಿ ಚಾಲ್ತಿಗೆ ತಂದ ಹೆಸರಾಗಿದೆ. ಆದರೂ ಆದಿ ಕರ್ನಾಟಕ ಎನ್ನುವುದೂ ಅ ಜನ ಸಮುದಾಯದ ಪ್ರಾಚೀನತೆಯನ್ನೂ ಧ್ವನಿ ಪೂರ್ಣವಾಗಿ ಸೂಚಿಸುವಂತೆಯೆ ಇದೆ.

ಡಾ॥ ಬಿ. ಆರ್. ಅಂಬೇಡ್ಕರ್‌ರವರ ಅಭಿಪ್ರಾಯದಲ್ಲಿ ಜನಾಂಗಿಕವಾಗಿ ಭಿನ್ನಭಿನ್ನ ಅಂಶಗಳಿಂದ ಉಳಿದ ಜನಾಂಗಗಳೇ ಈ ನೆಲದ ಶ್ರೇಣಿಕೃತ ಜಾತಿ ವ್ಯವಸ್ಥೆಯನ್ನು ಭಿನ್ನ ಭಿನ್ನ ಸ್ಥರಗಳಲ್ಲಿ ಜಾತಿ ಘಟಕಗಳಾಗಿ ಛಿದ್ರಗೊಂಡಿರುವುದೇ ದಮನಕಾರಿ ಅಂಶದ ಮೊದಲ ಹೆಜ್ಜೆಯಾಗಿದೆ. ರಕ್ತ ಸಂಬಂಧವಿಲ್ಲದಿರುವುದು ಅಥವಾ ಅಂತರ್ಜಾತಿಯ ವಿವಾಹಕ್ಕೆ ಆಸ್ಪದವಿಲ್ಲದಿರುವುದೇ ನಿಜವಾದ ಜಾತಿ ಪದ್ಧತಿಯ ಒಳಗ್ರಹಿಕೆಯಾಗಿದೆ.

ಕನ್ನಡ ಭಾಷೆಯ 'ಹೊಲೆಯ' ತಮಿಳಿನಲ್ಲಿ 'ಪರೈಯನ್' ಎಂತಲೂ ಮಲೆಯಾಳವಲ್ಲಿ

'ಪುಲಯನ್' ಎಂತಲೂ ಮತ್ತು ತೆಲುಗಿನಲ್ಲಿ 'ಮೂಲ' ಎಂತಲೂ ಕರೆಯಲಾಗುತ್ತಿದೆ. ಈ ನಾಲ್ಕು ಜಾತಿ ಸೂಚಕ ಪದಗಳ ಇಂಡೋ ದ್ರಾವಿಡನ್ ಭಾಷಾ ವರ್ಗಕ್ಕೆ ಸೇರಿದ್ದವಾದ್ದರಿಂದ ಇವುಗಳ ನಡುವೆ ಏಕ ಅರ್ಥ ಸೂಚಕ ಸಂಬಂಧ ವಿರಲೇಬೇಕು ತಮಿಳಿನ 'ಪರಯ' ಕನ್ನಡದಲ್ಲಿ ಹಳೆಯ > ಹಳೆಯ > ಹೊಲೆಯ ಎಂದಾಗಿರುವ ಸಾಧ್ಯತೆಗಳಿವೆ. ಮಲೆಯಾಳದ ಪುಲಯನ್ ಕನ್ನಡದಲ್ಲಿ 'ಹೊಲಿಯನ್' ಎಂಬ ಸುಲಭ ಧ್ವನ್ಯಾಂತರಕ್ಕೆ ಒಳಪಡಬಲ್ಲಂತಿದೆ.

ಬ್ರಾಹ್ಮಣರು 'ಹೊಲೆಯ' ಎಂಬ ಶಬ್ದ 'ಹೊಲೆ' ಅಥವಾ 'ಕೊಳಕ' ಎಂಬ ಅರ್ಥ ಮೂಲದಿಂದಲೇ ನಿಷ್ಪತ್ತಿಗೊಂಡಿದೆಯೆಂದು ಭಾವಿಸಿದರೆ ಇತರರು 'ಹೊಲ' 'ಭೂಮಿ' 'ಮಣ್ಣು' ಎಂಬ ಪದದಿಂದ ಹೊಲೆಯ ಶಬ್ದ ನಿಷ್ಪತ್ತಿಗೊಮಡಿದೆಯೆಂದು ಭಾವಿಸುತ್ತಾರೆ. ಈ ಎರಡನೇಯ ಅರ್ಥ ಹೊಲೆಯರು ಹಿಂದೆಂದೂ ಈ ಮಣ್ಣಿನ ಒಡೆಯರಾಗಿದ್ದರ ಕುರುಹಾಗಿ ಪಕ್ಕಿಯರಲ್ಲಿ ಕಾಣಬರುವ ಅಚರಣೆ. ಪದ್ಧತಿಗಳನ್ನು ಗಮನಿಸಿ ನೀಡುವಂಥದ್ದು

ದಲಿತ ಪುರಾಣಗಳಲ್ಲಿ ಅವರ ಕಥನ ಮತ್ತು ಪದಗಳಲ್ಲಿ ಪ್ರಸ್ತಾಪವಾಗಿರುವ ಯುದ್ಧ ಸಂಬಂದ ಮಾಹಿತಿಗಳು, ವಿಚಾರಗಳನ್ನು ನೋಡಿದಾಗ ದಲಿತರಿಗೂ ಯುದ್ಧಕ್ಕೂ ಅತೀ ಹತ್ತಿರದ ನಂಟಿರುವಂತೆ ತೋರುತ್ತಿದೆ. ಯಾಕೆಂದರೆ ಯುದ್ಧಗಳ ಅನುಭವವಿರುವವರು ಮಾತ್ರ ಅಂತಹವರ ಸುಪ್ತ ಮನಸ್ಸುಗಳು ಮಾತ್ರ ಯುದ್ಧ ಸಂಬಂಧಿಯಾದ ಸಶಕ್ತ ಪುರಾಣ ಪ್ರತಿಮೆಗಳನ್ನು ಸೃಷ್ಟಿಸಲು ಸಾಧ್ಯ. ಪ್ರಾಚೀನ ಕಾಲದಿಂದಲೂ ಅಸ್ಪೃಶ್ಯ ಕುಲಗಳು ರಣಕಲಿಗಳಾಗಿದ್ದು ಒಂದು ಕಾಲದಲ್ಲಿ ಯುದ್ಧವನ್ನೇ ಕಸುಬಾಗಿಸಿಕೊಂಡಿದ್ದರೆಂಬ ಸತ್ಯ ತಿಳಿಯುತ್ತದೆ. ಯುದ್ಧಗಳಲ್ಲಾದ ಪರಾಭವ ಅವರನ್ನು ಅವರಿಂದ ಉನ್ನತ ಸಾಮಾಜಿಕ ಸ್ಥಾನಗಳಿಂದ ಪದಚ್ಯುತಗೊಳಿಸಿ ಗೆದ್ದವರ ಗುಲಾಮರನ್ನಾಗಿ ಬದುಕಿನ ಅನಿವಾರ್ಯತೆಗೆ ಕೀಳು ಕಸುಬುಗಳನ್ನು ಕೈಗೊಳ್ಳುವಂತೆ ಪ್ರೇರೆಪಿಸಬಹುದೆಂದು ನಾವು ಊಹಿಸಲು ಅವಕಾಶವಿದೆ. ಪುರಾಣಗಳು ಮುಸುಕು ಸರಿಸಿ ಚರಿತ್ರೆಯ ಬೇರುಗಳನ್ನು ಹಿಡಿಯಲು ವಿಶೇಷ ಧೈರ್ಯವೇ ಬೇಕಿರುವಂತೆ ಈ ಮಾರ್ಗವಲ್ಲದ ಬೇರೆ ಇನ್ಯಾವ ಮಾರ್ಗದಿಂದಲೂ ಅಸ್ಪೃಶ್ಯರ ಚರಿತ್ರೆಯ ಮೂಲ ಹಿಡಿಯುವುದು ಸಾಧ್ಯವಿಲ್ಲವೆಂದು ಅರಿಯಬೇಕಿದೆ.

ಹೊರ ಜಗತ್ತಿನ ಅರಿವಿಗೆ ಬಂದಿರುವ ಆದಿ ಕರ್ನಾಟಕ ಜನವರ್ಗದ 'ಹೊಲಗೇರಿ'ಯ ಸುತ್ತ ಆವರಿಸಿಕೊಂಡಂತಿರುವ ಸಾಮಾಜೀತೆಯೊಂಬುದು ಕೇವಲ ಮೇಲ್ವರ್ಗದ ಗ್ರಹಿಕೆಗಳಷ್ಟು ಮಾತ್ರ ಅವರ ಜೀತಗಾರಿಕೆ, ಕೃಷಿ ಕೂಲಿಗಳಾಗಿ ಸವೆಸುವ ಬದುಕು ಅವರ ನೀಗದ ಬಡತನ ಅವರು ಅನುಭವಿಸುವ ಅಸ್ಪೃಶ್ಯತೆಯನ್ನು ಮಾನಸಿಕ ಹಿಂಸೆ ಹಾಗೂ

ಅಪಮಾನಗಳು ದುಡಿಮೆಯೊಂದಿಗೆ ತಳುಕು ಹಾಕಿಕೊಳ್ಳುವ ಕುಡಿತ ಇತ್ಯಾದಿಗಳಷ್ಟೇ ದಲಿತ ಸಂಸ್ಕೃತಿಯಲ್ಲ. ಪ್ರಾಯಶಃ ಹಿಂದೆಂದೋ ಉನ್ನತ ಸಾಮಾಜಿಕ ಸ್ಥಾನ ಮಾನಗಳನ್ನನುಭವಿಸಿ ವಿಲಕ್ಷಣ ಸಾಂಸ್ಕೃತಿಕ ಸ್ವರೂಪದ ಪಲ್ಲಟಗಳಿಂದ ಇಂದಿನ ಈ ಕೆಳಸ್ತರದ ಸಾಮಾಜಿಕ ಬದುಕಿಗೆ ಅವರು ಒತ್ತರಿಸಲ್ಪಟ್ಟವರೆಂಬ ಚರಿತ್ರೆಯ ಅಜ್ಞಾತ ನಿಜಗಳನ್ನು ನಾವು ಅಧ್ಯಯನ ಚೌಕಟ್ಟಿಗೆ ತರಬೇಕಾಗುತ್ತದೆ.

ಬ್ರಾಹ್ಮಣೇತರ ಹಾಗೂ ಹಿಂದುಳಿದ ವರ್ಗಗಳಿಗೆ ಕಾನೂನು ಬದ್ಧವಾಗಿ ಸರ್ಕಾರಿ ಸವೆಯಲ್ಲಿ ಮೀಸಲಾತಿ ಒದಗಿಸುವುದು ಸೂಕ್ತ ಎಂಬ ಅಂತಿಮ ತೀರ್ಮಾನಕ್ಕೆ ಬಂದ ನಾಲ್ವಡಿ ಕೃಷ್ಣರಾಜ ಒಡೆಯರು ಅಂದಿನ ಮೈಸೂರು ಸಂಸ್ಥಾನದ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯದೀಶರಾಗಿದ್ದ ಸರ್. ತಿಸ್ಲಿ ಮಿಲ್ಲರ್‌ರವರ ಅಧ್ಯಕ್ಷತೆಯಲ್ಲಿ ದಿನಾಂಕ : ೨೩-೦೮-೧೯೧೮ ರಲ್ಲಿ. ಏಳು ಜನರ ಒಂದು ಆಯೋಗವನ್ನು ರಚನೆ ಮಾಡಿ ಆದೇಶ ಹೊರಡಿಸಿದರು. ಬ್ರಾಹ್ಮಣ ಸಮುದಾಯದ ಹೊರತಾಗಿ ಇತರೆ ಹಿಂದುಳಿದ ಸಮುದಾಯಗಳು ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರಿ ಉದ್ಯೋಗವನ್ನು ಪಡೆದುಕೊಳ್ಳುವ ನಿಟ್ಟಿನಲ್ಲಿ ಪ್ರೋತ್ಸಾಹಿಸಲು ಸರ್ಕಾರ ಏನು ಕಾರ್ಯಕ್ರಮ ಕೈಗೊಳ್ಳಬೇಕು ಎಂಬ ಬಗ್ಗೆ ಪರೀಶಿಲಿಸಿ. ತನ್ನ ವರದಿ ನೀಡುವಂತೆ ಸೂಚಿಸಿ ಆದೇಶ ನೀಡಿತು.

ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ 'ಆದಿ ಕರ್ನಾಟಕ ಜನಾಂಗವು ಪರಿಶಿಷ್ಟ ಜಾತಿಗೆ ಸೇರಿದ್ದು. ಸ್ಥಳೀಯವಾಗಿ ಇವರನ್ನು 'ಹರಿಜನ' 'ಮಾದಿಗ' ಜನಾಂಗವೆಂತಲು ಕರೆಯಲಾಗುತ್ತಿದೆ. ಹೆಸರಿನ ಹಿಂದೆ ಹೆಚ್ಚಿ ಬಹುಪಾಲು ಜನರು ಹರಿಜನ ಎಂಬ ಪದವನ್ನು ಬಳಸಿಕೊಳ್ಳುತ್ತಿರುವುದು ತಿಲಿದು ಬರುತ್ತದೆ. ಇವರು ಮೂಲತಹ ಕೃಷಿ ಕೂಲಿ ಕಾರ್ಮಿಕರಾಗಿದ್ದು ಜೀವನ ನಿರ್ವಹಣೆಗಾಗಿ ಕೂಲಿಯನ್ನೇ ಆಶ್ರಯಿಸಿ ಬದುಕುತ್ತಿದ್ದಾರೆ. ಅಂತೆಯೇ ಹಿಂದಿನ ಕಾಲದಿಂದಲೂ ತಮ್ಮ ಹಳೆಯ ವೃತ್ತಿಗಳಾದ ಊರಿನ ಸ್ವಚ್ಛತೆ ಮಾಡುವುದು . ಸತ್ತದನಕರುಗಳನ್ನು ಹೊರುವುದು. ಚರ್ಮಗಾರಿಕೆ ವೃತ್ತಿ ಮಾಡುವುದು ಇಂದಿಗು ಸಾಮಾನ್ಯವಾಗಿದೆ. ಅಂದರೆ ಇವರು ಸ್ವಾತಂತ್ರ ಬಂದು ೫೭ ವರ್ಷ ಕಳೆದರೂ ಅಸ್ಪೃಶ್ಯತೆಯ ಶಾಪದಲ್ಲಿ ಬಾಳುತ್ತಿರುವುದು ನಾಗರೀಕ ಸಮಾಜ ತಲೆ ತಗ್ಗಿಸುವಂತಾಗಿದೆ.

## ೨. ಲಂಬಾಣಿ ಜನಾಂಗ

ಲಂಬಾಣಿ(ಬಂಜಾರ) ಸಮಾಜದ ಇತಿಹಾಸ ತುಂಬಾ ಪುರಾತನ ಹಾಗೂ ಗೌರವ ಶಾಲಿಯಾಗಿದೆ. ರಾಜಸ್ತಾನದ ವಣಿಕ(ವ್ಯಾಪಾರಿ) ಸಮಾಜಕ್ಕೆ ಸೇರಿದ ಲಂಬಾಣಿಗರು ಯಾವುದೋ

ಕಾರಣಕ್ಕೆ ರಾಜಕೀಯ ಹಾಗೂ ಸಾಮಾಜಿಕ ಒತ್ತಡಕ್ಕೆ ಸಿಲುಕಿ ತಮ್ಮ ಮೂಲ ಸ್ಥಾನ ಬಿಟ್ಟು ಖಾದ್ಯ ಪದಾರ್ಥಗಳ ವ್ಯಾಪಾರ ಮಾಡುತ್ತಾ ಹಿಂದೂಸ್ತಾನದ ಮೂಲೆಗಳೆಲ್ಲಾ ಪಸರಿಸಿದರು. ಹೀಗೆ ತಾಯ್ನಾಡನ್ನು ತ್ಯಜಿಸಿದ ಜನ ತಂಡೋಪತಂಡವಾಗಿ ದನಕರುಗಳಮೇಲೆ ತಮ್ಮ ಖಾದ್ಯ ಪದಾರ್ಥಗಳನ್ನು ಏರಿಕೊಂಡು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಅಲೆಮಾರಿಗಳಾಗಿ ಸಂಚರಿಸಿದರು.

ಈ ವ್ಯಾಪಾರದ ಜೊತೆಗೆ ಸಾರಿಗೆ ಸೌಕರ್ಯವಿಲ್ಲದ ಲಂಬಾಣಿಗರು ಬಾರಿ ವಸ್ತುಗಳ ರಪ್ತು ಕಾರ್ಯಗಳನ್ನು ಮಾಡತೊಡಗಿದರು. ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೋಗುವ ಸಂದರ್ಭದಲ್ಲಿ ಮೊಗಲರಿಗೆ ಲಂಬಾಣಿಯರ ಧೈರ್ಯ ಶಾಲಿಗಳ ಅಗತ್ಯವಿತ್ತು ಲಂಬಾಣಿ ಜನರನ್ನು ನೇಮಿಸಿಕೊಂಡರೆಂದು ಕಾಣುತ್ತದೆ. ಬಹುದೂರದ ಶತೃ ಪ್ರದೇಶದಲ್ಲಿನ ಸೈನಿಕರಿಗೆ ನಿರ್ಭಯವಾಗಿ ಅಹಾರ ಸರಬರಾಜು ಮಾಡುತ್ತಿದ್ದರು ಎಂದು ಹೇಳಲಾಗುತ್ತದೆ.

ಹಿಂದೂಸ್ತಾನದ ಲಂಬಾಣಿಗರನ್ನು ಆಯಾ ಪ್ರಾಂತಗಳಲ್ಲಿ ವಿಭಿನ್ನ ರೀತಿಯಿಂದ ಗುರುತಿಸಿದ್ದು ಕೆಲವುಕಡೆ ಇವರು ಅಸ್ಪೃಶ್ಯರಾಗಿದ್ದಾರೆ. (untouchable)ಹಲವೆಡೆಗೆ ಪರಿಶಿಷ್ಠ ಪಂಗಡದವರಾಗಿ ಪರಿಶಿಷ್ಠ ಜಾತಿ(ಛಿ/ಣ)ಯವರಾಗಿ ಇನ್ನೂ ಕೆಲವೆಡೆ ಅಪರಾಧಿ ಪಂಗಡದವರಾಗಿ (Criminal)ಮತ್ತೆ ಕೆಲವು ಕಡೆ ಅವರ್ಗೀಕೃತ ಜಾತಿ(Denotified Tribe)ಯವರಾಗಿ ಪರಿಗಣಿಸಲ್ಪಟ್ಟು ಇತಿಹಾಸದ ಕಾಲಚಕ್ರಕ್ಕೆ ಸಿಲುಕಿದ ಲಂಬಾಣಿಗರ ಸ್ಥಿತಿ ತುಂಬಾ ಹೀನ ವ್ಯವಸ್ಥೆಯನ್ನು ತಲುಪಿತು ಈ ಸ್ಥಿತಿಯಿಂದ ಚೇತರಿಸಿಕೊಳ್ಳಲು ಲಂಬಾಣಿಗರಿಗೆ ಬಹುಕಾಲ ಬೇಕಾಯಿತು.

**ಲಂಬಾಣಿಗರ ಮೂಲ**

ಯಾವುದೇ ಜಾತಿ ಜನಾಂಗದ ಮೂಲವನ್ನು ತಿಳಿಯಲು ಅವರ ಸಂಸ್ಕಾರ, ಜನಪದ ಕಥೆ ಹಾಗೂ ಭಾಷೆ ಮುಂತಾದ ಮೂಲಕ ರೂಪಗಳು ವಿದಿತಪಡಿಸುತ್ತವೆ. ಅವರು ಮೂಲತಃ ಸಂಚಾರಿ ಜನಾಂಗದವರಾಗಿದ್ದಾರೆ. ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಂಚರಿಸುತ್ತಿದ್ದರು. ಅವರು ದಕ್ಷಿಣದ ಕರ್ನಾಟಕ ಆಂಧ್ರ ಹಾಗೂ ಮಹಾರಾಷ್ಟ್ರಗಳಲ್ಲಿ ಎಲ್ಲಿಂದ ಹಾಗೂ ಯಾವಾಗ ಬಂದವರೆಂಬುದರ ಬಗೆಗೆ ವಿದ್ವಾಂಸರಲ್ಲಿ ಅನೇಕ ಭಿನ್ನಾಭಿಪ್ರಾಯಗಳಿವೆ. ಆದರೆ ಲಂಬಾಣಿ ಕವಿಗಳಾದ ಚಾರಣ ಭಟ್(ಢಾಡಿ)ರ ಜನಪದ ಗೀತೆ ಹಾಗೂ ಕಥೆಗಳಲ್ಲಿ ಪೃಥ್ವಿರಾಜ್ ಚವ್ಹಾಣ್, ಅಲ್ಲಾಉದತ್ ಜಯಮಹಲ್ ಫತಮಲ್ ಮುಂತಾದ ವೀರಶಿರೋಮಣಿಗಳು ಶೌರ್ಯ-ಪರಾಕ್ರಮಗಳ ವರ್ಣನೆ ಬರುತ್ತದೆ. ಇದರಿಂದ ಲಂಬಾಣಿಗಳು ಮೂಲತಃ ಉತ್ತರ ಭಾರತೀಯ ಮೂಲದವರಾಗಿದ್ದವರು ಎಂದು ಸ್ಪಷ್ಟ ವಿದಿತವಾಗುತ್ತದೆ. ಈ ಜನರು ವೇಷ ಭೂಷಣ, ಭಾಷೆ, ಹಾಗೂ ಸಂಸ್ಕಾರ ಮುಂತಾದವುಗಳಿಂದ ಅವರು

ಗುಜರಾತ್ ಅಥವಾ ರಾಜಸ್ಥಾನದಿಂದ ಬಂದವರೆಂದು ತಿಳಿಯುತ್ತದೆ. ಅರ್ಥಾತ್ ಈ ಜನರು ಆಪ್ರಾಂತ್ಯಗಳ ಮೂಲನಿವಾಸಿಗಳೇ ಆಗಿದ್ದರೆಂದು ತಿಳಿದುಬರುತ್ತದೆ.

ಜಾತಿ ಉಪಜಾತಿ ಮತ್ತು ಅವರ ಸಂಸ್ಕೃತಿ, ಆಚಾರ, ವಿಚಾರ, ಇವುಗಳಬಗ್ಗೆ ವಿವರಿಸುವುದರಿಂದ ಈ ಗ್ರಂಥ ಸಂಶೋಧನಗೆ ತುಂಬಾ ಉಪಯುಕ್ತ ಮಾಹಿತಿಯನ್ನು ಒಳಗೊಂಡಿದೆ. ನನ್ನ ಸಂಶೋಧನೆಗೆ ಪೂರಕ ಮಾಹಿತಿಯನ್ನು ಒದಗಿಸುತ್ತದೆ.

**೩. ಕೊರವರು**

ಕೊರವರು ಕರ್ನಾಟಕದಲ್ಲಿ ಒಂದು ಸಾವಿರ ವರ್ಷಗಳಷ್ಟು ಇತಿಹಾಸ ಹೊಂದಿದ್ದಾರೆ. ಅಲೆಮಾರಿ ಬುಡಕಟ್ಟುಗಳಂತೇ ತಮ್ಮ ಮೂಲದ ಆಚಾರ ವಿಚಾರ, ಭಾಷೆ, ವೇಷ, ಮತ್ತು ಅವುಗಳ ಆಚರಣೆಗಳನ್ನು ಬಿಡದೇ ಉಳಿಸಿಕೊಂಡು ಬಂದಿದ್ದಾರೆ. ಕಂದಾಚಾರ ಮೌಢ್ಯಗಳಲ್ಲೇ ಬದುಕಿದ ಇವರು ಅನಕ್ಷರತೆ ಮತ್ತು ಪರಕೀಯತೆಗಳಿಂದ ನಲುಗಿ ಪ್ರಗತಿ ಕಂಡು ಕೊಳ್ಳುವಲ್ಲಿ ವಿಫಲರಾಗಿದ್ದಾರೆ.

ಕೊರಮರ ಮೂಲದ ಬಗ್ಗೆ ಇವರು ದಕ್ಷಿಣದವರು, ಇವರ ಮೂಲ ನೆಲೆ ತಮಿಳುನಾಡು ಎಂಬುದರಲ್ಲಿ ಎರಡು ಮಾತಿಲ್ಲ. ಇವರ ಬಗೆಗೆ ವಿದ್ವಾಂಸರು ಈವರೆಗೆ ದಾಖಲಿಸಿರುವ ಆದಾರಗಳು ಮತ್ತು ಅವರ ಭಾಷೆ ಅಂತೆಯೇ ಜನಾಂಗೀಯ ಲಕ್ಷಣ ಮುಂತಾದವುಗಳು ನೆಲೆಯನ್ನು ಕಂಡುಕೊಳ್ಳುವಲ್ಲಿ ಸಹಾಯಕವಾಗಿದೆ. ಈ ದೆಸೆಯಲ್ಲಿ ಶ್ರೀ ಪ್ರಾನ್‌ಸಿನ್ The Kormas are a gyosy tribe bound all over The Tamil country but chiefly in karnool salem, coimbotore and south arcot ಎಂದು ಅವರು ನೆಲಿಸಿದ ಸ್ಥಳಗಳ ಬಗ್ಗೆ ಹೇಳಿದ್ದಾರೆ.

ಈ ಗ್ರಂಥದಲ್ಲಿ ಕೊರಮರ ಹೆಸರುಗಳು ಈ ರೀತಿ ದಾಖಲಿಸಲಾಗಿದೆ. ಕೊರಮಶೆಟ್ಟಿ, ಕುಂಚಿಕೊರಮರು ಭಜಂತ್ರಿ, ಕೊರಚ, ಮುಂತಾಗಿ ಗುರುತಿಸುತ್ತಾರಾದರು ಇವರು ಅನುಸರಿಸುವ ವೃತ್ತಿಗೆ ಅನುಗುಣವಾಗಿ ಗುರುತಿಸುತ್ತಾರೆ.

ಕೊರಮ ಎಂಬುದು ಜಾತಿ ಸೂಚಕವಾದ ಪದ ಕೊರವಂಜಿ ಶಬ್ದ ಪ್ರಮುಖ ದ್ರಾವಿಡ ಭಾಷೆಗಳಲ್ಲಿ ಕಂಡುಬರುತ್ತದೆ. ತಮಿಳಿನ ಪುಲ್ಲಿಂಗ ರೂಪ ಕೊರವನ್ ಎಂದಾದರೆ ಕುರತ್ತಿ, ಕುರವಿ, ಕುರವಂಚಿ(ಜಿ) ಎಂಬ ಹಲವಾರು ಸ್ತ್ರೀ ರೂಪಗಳಿವೆ. ಇದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಕೊರವಂಜಿ' , ಕೊರವರೆ, ಕೊರವಿತ, ತೆಲುಗಿನಲ್ಲಿ ಕೊರವತಿ, ಕೊರವಂಜಿ ಮುಂತಾದ ರೂಪಗಳು ಪ್ರಯೋಗದಲ್ಲಿವೆ. ಕೊರಮರು

ತಮ್ಮ ಭಾಷೆಯನ್ನು ತಮ್ಮ ತಮ್ಮಲ್ಲಿಯೇ ಕೇಳುವ ಭಾಷೆ ಎಂದು ಕರೆಯುತ್ತಾರೆ. ತಮ್ಮನ್ನು ಕುಳುವರು ಎಂದು ಪರಿಚಯಿಸುತ್ತಾರೆ.

ಈಗ ದೊರೆತಿರುವ ಆಧಾರಗಳ ಮೇಲಿಂದ ಈ ಭಾಷೆಯನ್ನು ವಿವೇಚಿಸಿದರೆ ಇದು ಸ್ವತಂತ್ರ ಭಾಷೆಯಲ್ಲ ಎಂಬುದು ತಿಳಿಯುತ್ತದೆ. ಇದು ಪೂರ್ವದ ತಮಿಳಿನ ಒಂದು ಉಪಭಾಷೆ. ಈ ಭಾಷೆಯನ್ನು ಆಡುವಾಗ ತಮಿಳಿಗೆ ತೀರ ಹತ್ತಿರವಾಗುತ್ತವೆ.

ಕೊರಮರ ವೃತ್ತಿಯ ಬಗ್ಗೆ ಹೇಳುತ್ತಾ, ಲೇಖಕರು ಈ ಸಾವಿರಾರು ವರ್ಷಗಳಲ್ಲಿ ಅನುಸರಿಸಿಕೊಂಡು ಬಂದ ವೃತ್ತಗಳು ಹಲವಾರು. ಆದರೆ ಮೂಲದಲ್ಲಿ ಇವರು ಕಾಡಿನಲ್ಲಿ ವಾಸಮಾಡುತ್ತಾ, ಪಶುಪಾಲನೆ ಮತ್ತು ಬುಟ್ಟಿ ಹೆಣೆಯುವುದು, ಹೆಂಗಸರು ಕಣಿ ಹೇಳುವುದುರ ಬಗ್ಗೆ ಅನೇಕ ವಿದ್ವಾಂಸರು ದಾಖಲಿಸಿದ್ದಾರೆ. ಹೀಗೆ ವೃತ್ತಿಯ ಬಗ್ಗೆ ವಿವರಿಸಿದ್ದಾರೆ. ಕೊರವಂಜಿ ಮತ್ತು ಆಕೆಯ ಬದುಕಿನ ಬಗ್ಗೆ ವಿವರಣೆ ನೀಡುತ್ತಾರೆ. ಕೊರಮರ ಹೆಣ್ಣು ಮಗಳು ಕೊರವಂಜಿ ತನ್ನ ಕುಟುಂಬದ ಸೌಖ್ಯದ ಸಲುವಾಗಿ ನಿರ್ವಹಿಸುತ್ತಾ ಬಂದಿರುವ ಕಾರ್ಯಗಳು ಅನುಭವಿಸಿದ ಕಷ್ಟ ಪಡೆದ ಕೀರ್ತಿ ಅಪಕೀರ್ತಿಗಳು ಯಾರಿಗೂ ಬೆರಗನ್ನು ಮಾಡುತ್ತದೆ ಮತ್ತು ಆಕೆಯ ಕಷ್ಟ ಸಹಿಷ್ಣುತೆಯ ಬಗ್ಗೆ ಮನಸ್ಸು ಕರಗುತ್ತದೆ.

ಜನಪದದಲ್ಲಿ ಕೊರಮಂಜಿಯ ಹಿರಿಮೆ ಕೊರಮಂಜಿಯ ಜನಪದ ಸಾಹಿತ್ಯದಲ್ಲಿ ಮಹತ್ವದ ಪಾತ್ರ ವಹಿಸಿದ್ದಾಳೆ. ಹನ್ನೆರೆಡನೇ ಶತಮಾನದ ಆಧಿ ಭಾಗದಲ್ಲಿಯೇ ಕರ್ಣಪಾರ್ಯನು ತನ್ನ ನೇಮಿನಾಥ ಪುರಾಣದಲ್ಲಿ ಕೊರನಂಜಿಯನ್ನು ಪರಿಚಯಿಸುವುದನ್ನು ನೋಡಿದರೆ ಆಕೆ ಆ ಕಾಲಕ್ಕಾಗಲೆ ಜನಪದದಲ್ಲಿ ಸ್ಥಾನಗಳಿಸಿರುವುದು ಅರಿವಾಗುವುದು. ಇದೇ ಕಾಲಕ್ಕೆ ಸೇರಿದ ಶರಣರು ಕೊರವಂಜಿಯನ್ನು ಕುರಿತು ಹೇಳಿದ್ದಾರೆ. ಲೇಖಕರ ಈ ವಿವರವು ಅಧ್ಯಯನಕ್ಕೆ ಮಹತ್ವವಾದ ಪೂರಕ ಮಾಹಿತಿಯನ್ನು ಒದಗಿಸುತ್ತದೆ.

**೪. ಸುಡುಗಾಡು ಸಿದ್ದರು :**

ಕರ್ನಾಟಕದಲ್ಲಿ ವಾಸಿಸುತ್ತಿರುವ ಬುಡಕಟ್ಟು ವಿಭಿನ್ನ ಅಲೆಮಾರಿ ಭಿಕ್ಷುಕರಲ್ಲಿ ಸುಡುಗಾಡು ಸಿದ್ದರು ಒಬ್ಬರು. ಕರ್ನಾಟಕದಲ್ಲಿ ಅವರನ್ನು ಸಿದ್ದರು, ಸಡುಗಾಡು ಸಿದ್ದರು ಮಸಣದ ಸಿದ್ದರು ಜೋಗಿಗಳು ವೇಷಗಾರರು ಮತ್ತು ಸುಡುಗಾಡು ಸಿದ್ದರು ಆಂಧ್ರ ಮೂಲದವರಾಗಿದ್ದು ಒಂದೇ ಬಗ್ಗೆಯ ಬಿಕ್ಷೆಯ ಮೂಲದವರಾಗಿದ್ದಾರೆ. ಅವರ ಆಚಾರ,ಸಂಕೃತಿ,ವಿಚಾರ ಸಂಪ್ರದಾಯ ಮೊದಲಾದವುಗಳಲ್ಲಿ ಹೆಚ್ಚಿನ ಸೌಮ್ಯತೆಯನ್ನು ಪಡೆಯುತ್ತವೆ. ತಮ್ಮ ಹೊಟ್ಟೆ ಪಾಡಿಗಾಗಿ ವಿಭಿನ್ನ ಪ್ರದರ್ಶನಗಳನ್ನು ನೀಡುವ ಈ ಜನರಲ್ಲಿ ಒಂದು ಬಗ್ಗೆಯ ಅಂತರಿಕ ಮತ್ತು ಭಾವನತ್ಮಾಕ ಸಂಬಂಧವನ್ನು ಕಾಣಬಹುದಾಗಿದೆ.

ವಿಶಿಷ್ಟ ಸಂಸ್ಕೃತಿ ಪರಂಪರೆಯನ್ನುಳ್ಳ ಸುಡುಗಾಡು ಸಿದ್ದರು ಶತಮಾನಗಳು ಕಳೆದರು ಇನ್ನೂ ಯಥಾಸ್ಥಿತಿಯಲ್ಲಿಯೇ ಉಳಿದಿದ್ದಾರೆ.ಈ ಬುಡಕಟ್ಟಿನ ಜನರ ಆಚಾರ ವಿಚಾರ ಪರಂಪರೆ ,ಸಂಪ್ರಾದಯ,ಮದುವೆ ಮುಂಜಿ ಹಾಗೂ ರೀತಿ-ನೀತಿಗಳು ಬಹು ವಿಶಿಷ್ಟವಾಗಿವೆ. ಶತಮಾನಗಳಿಂದ ಕರ್ನಾಟಕದಲ್ಲಿ ಬೋದು ನೆಲಸಿದ್ದರೂ ಅವರ ಪ್ರಬಲವಾದ ಮತ್ತು ಪ್ರಮುಖವಾದ ಸಂಸ್ಕೃತಿಯ ನಡುವೆ ಭಾರತ ಅನೇಕ ಉಪಸಂಸ್ಕೃತಿಗಳು

ಶತಮಾನಗಳಿಂದಲೂ ತಮ್ಮ ಅಸ್ಥಿತ್ವವನ್ನು ಉಳಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ.

**ಭೌಗೋಳಿಕ ಪರಿಸರ ಹಾಗೂ ಜನಸಂಖ್ಯೆ :**

ಆಂದ್ರ ಮೂಲದವರೆನ್ನಲಾದ ಅಲೆಮಾರಿ ಗುಂಪಿನ ಸಡುಗಾಡು ಸಿದ್ದರು ಹೊಟ್ಟೆಪಾಡಿಗಾಗಿ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಪಸರಿಸಿದ್ದಾರೆ. ಅವರು ಹೆಚ್ಚಾಗಿ ಬಿಜಾಪುರ, ಗುಲ್ಬಗ, ಶಿವಮೂಗ್ಗ, ಹಾಸನ, ಚಿಕ್ಕಮಂಗಳೂರು, ಹಾಗೂ ದಾರವಾಡ ಜಿಲ್ಲೆಗಳಲ್ಲಿ ಹೆಚ್ಚಾಗಿರುವುದು ತಿಳಿದು ಬರುತ್ತದೆ.

ಕರ್ನಾಟಕದ ಇನ್ನುಳಿದ ಪ್ರದೇಶಗಳಲ್ಲೂ ಈ ಜನ ಕಂಡುಬರುತ್ತಿದ್ದು ತುಂಬಾ ಕಡಿಮೆ ಸಂಖ್ಯೆಯಲ್ಲಿ ಇದ್ದಾರೆ. ಕರ್ನಾಟಕದ್ಯಾದ್ಯಂತ ಪ್ರಸರಿಸಿರುವ ಜನರು ಇವರ ಜೀವನ ಆಚಾರ ವಿಚಾರ ಸಂಸ್ಕೃತಿ ಸಂಪ್ರಾದಾಯ ಆಚರಣೆಗಳು ಒಂದೇ ಬಗ್ಗೆಯಾಗಿವೆ. ಸಾಮಾನ್ಯವಾಗಿ ಊರಿನ ಹೊರಗೆ ತಮ್ಮದೇ ಆದ ಜೀವನ ವಿಧಾನವನ್ನು ಉಳಿಸಿಕೊಂಡು ಬರಲು ಸಾದ್ಯವಾಗಿದೆ.

ಸಡುಗಾಡು ಸಿದ್ದರ ಯಾವುದೇ ಹಟ್ಟಿಗೂ ಪ್ರತ್ಯೇಕವಾದ. ಯವುದೇ ಹೆಸರಿರುವುದು ಕಾಣುವುದಿಲ್ಲ. ಸಾಮನ್ಯವಾಗಿ ಆಯಾ ಊರುಗಳ ಪಕ್ಕದಲ್ಲಿಯೇ ಬಿಡುಬಿಟ್ಟಿರುವುದರಿಂದ ಊರುಗಳಿರುವ ಹೆಸರುಗಳಿಂದಲೇ ಅವರು ಪರಿಗಣಿಸಲ್ಪಡುತ್ತಾರೆ. ಈಗೀಗ ಅವರು ಮೊದಲಿನಂತೆ ಅಲೆಮಾರಿಗಳಾಗಿರದೆ ತಮ್ಮದೇ ಊರುಗಳನ್ನು ಕಟ್ಟಿಕೊಂಡು ಜೀವಿಸುತ್ತಿದ್ದಾರೆ. ಸುಗ್ಗಿ ಸಂದರ್ಬದಲ್ಲಿ ಈಜನರು ಊರಿಂದೂರಿಗೆ ಸಂಚರಿಸುತ್ತಾ ಅಲ್ಲಲಿ ಇಂದಿಗೂ ಡೇರೆ ಹಾಕಿರುವುದನ್ನು ಕಾಣಬಹುದಾಗಿದೆ. ಸಾಮಾಜಿಕವಾಗಿ ಅವರು ಕೀಳಮಟ್ಟದವರಾರುವುದರಿಂದ ತಮ್ಮನು ತಾವು ಬಹಿರಂಗವಾಗಿ ಸಂಸ್ಥಾಪಿಕೊಳ್ಳಲಾರರು.

**ಜನಸಂಖ್ಯೆ:**

ಅಲೆಮಾರಿಗಳಾದ ಸುಡುಗಾಡು ಸಿದ್ದರು ಜನಸಂಖ್ಯೆ ಬಗ್ಗೆಗೆ ನಮಗೆ ನಿಖರವಾಗಿ ತಿಳಿದು ಬರುವುದಿಲ್ಲ, ಕರ್ನಾಟಕದ ಹಿಂದುಳಿದ ವರ್ಗಗಳ ಆಯೋಗ (೧೯೭೫)ರ ವರದಿಯಲ್ಲಿ ಶ್ರೀ ಎಲ್.ಜಿ.ಹಾವನೂರ ಅವರು ೧೯೭೧ ಜನಗಣತಿಯನ್ನು ಆಧಾರವಾಗಿಟ್ಟುಕೊಂಡು ಕರ್ನಾಟಕದಲದಲ್ಲಿ ಸುಡುಗಾಡು ಸಿದ್ದರ ಜನಸಂಖ್ಯೆ ೩೧೨೩ ಎಂದು ಅಂದಾಜಿಸಲಾಗಿದೆ. ಈ ವರದಿಯಲ್ಲಿ ಬೀದರ್,ಗುಲ್ಬಾರ್ಗರಾಯಚೂರು,ಬಿಜಾಪುರ,ದಕ್ಷಿಣಕನ್ನಡ ಕೊಡಗು ಬಳ್ಳಾರಿ, ಜಿಲ್ಲೆಗಳಲ್ಲಿರುವ ಸುಡುಗಾಡು ಸಿದ್ದರ ಜನಸಂಖ್ಯೆಯನ್ನು ಜನಸಂಖ್ಯೆಯನ್ನು ನಮೂದಿಸಲಾಗಿಲ್ಲ. ವಾಸ್ತವಾಗಿ ಈ ಜಿಲ್ಲೆಗಳಲ್ಲಿಯೇ ಸುಡುಗಾಡುಸಿದ್ದರ ಜನಸಂಖ್ಯೆ ಹೆಚ್ಚಾಗಿದೆ.

೧೯೮೧ ರ ಭಾರತದ ಜನಸಂಖ್ಯೆಯ ವರದಿ ಪ್ರಕಾರ ಕರ್ನಾಟಕದ ಸುಡುಗಾಡು ಸಿದ್ದರ ಜನಸಂಖ್ಯೆ ೧೧೧೧೬ ಎಂದು ದಾಖಲಿಸಲಾಗಿದೆ.ಇದರಲ್ಲಿ ೫೬೪೧ ಗಂಡಸರು ೫೪೭೫ ಹೆಂಗಸರು ಎಂದು ದಾಖಲಿಸಲಾಗಿದೆ. ೧೯೯೧ ಭಾರತದ ಜನಸಂಖ್ಯೆ ಸುಮಾರು ೧೫ ರಿಂದ ೨೦ ಸಾವಿರವೆಂದು ಸದ್ಯದ ಮಟ್ಟಿಗೆ ಇಟ್ಟುಕೊಳ್ಳಬಹುದು. ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ನೆಲಸಿರುವ ಸುಡುಗಾಡ ಸಿದ್ದರು ತಮ್ಮ ಮೂಲ ವೃತ್ತಿಯನ್ನು ತೊರೆದು ಕೃಷಿ ಮೊದಲಾದ ವಿವಿದ ವೃತ್ತಿಗಳನ್ನು ಕೈಗೊಂಡು ಅಲ್ಲಲ್ಲಿ ನೆಲೆಯಾಗಿದ್ದಾರೆ. ಕೊಪ್ಪಳ ಬಿಡರೆಟ್ನಾಳ,ಕಿಳಕೋಲಿ, ಓಬಳಪುರ,ಹಂಪಾಪಟ್ಟಣ,ನಿಡಗುಂದಿ,ಬಿಜಾಪುರ, ಗೆದ್ದಲಮರಿ,

ಧಾರವಾಡ ಮಿಣಜಗಿ,ಕೂಡ್ಲಿಗಿ,ರಾಯಚೂರು,ಗಂಗಾವತಿ, ಗಾಣಗಾಪುರ,ಚಳ್ಳಕೆರೆ,ಕುಷ್ಟಗಿ ಇತ್ಯಾದಿ ಹೆಚ್ಚಾಗಿ ತೆಲಗು ಭಾಷಾ ಪ್ರದೇಶಗಳಲ್ಲಿ ಸಾಕಷ್ಟು ಪ್ರಬಲರಾಗಿರುವುದನ್ನು ಕಾಣಬಹುದಾಗಿದೆ.

**ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ:-**

ಸುಡುಗಾಡು ಸಿದ್ದರ ಕುಲ ವೃತ್ತಿ ಬೆಳಗಿ ಜಾವದಲ್ಲಿ ಊರ ಪ್ರದಕ್ಷಿಣೆ ಮಾಡುವುದು ಉಂಬಳಿಯಾರಾಗಿ ಮಾಡಿಕೊಂಡಿರುವ ಕೆಲವು ಹಳ್ಳಿಗಳಲ್ಲಿ ಅವರು ಬೆಳಗಿನ ಜಾವ ಸುಡುಗಾಡಕ್ಕೆ ಹೋಗಿ ಒಂದು ಶಂಖ ಊದಿ ಹರಕೆ ಮಾಡಿ ಊರ ಸುತ್ತಾಲ ಸಂಚರಿಸುತ್ತಾರೆ. ನೂರಾರು ಊರುಗಳನ್ನು ಸುತ್ತಿಸಿ ಹರಕೆ ಮಾಡುವರು ಮಲಗಿದ್ದ ಊರಿನ ಜನರನ್ನು ಬೆಳಗಾಯಿತೆಂದು ಎಚ್ಚಾರಿಸುತ್ತಾರೆ. ಬಿಕ್ಷಾಟನೆಯ ಸಂದರ್ಭದಲ್ಲಿ ಕುಲಕೊಟಿಯನ್ನು ರಕ್ಷಿಸುವಂತೆಯೂ ಕರುಣಿಸುವಂತೆಯೂ ಅವರು ದೇವರಲ್ಲಿ ಹರಕೆ ಮಾಡುತ್ತಾರೆ. ಕರ್ನಾಟಕದಲ್ಲಿ ಬಹುತೇಕ ಜಿಲ್ಲೆಗಳಲ್ಲಿ ವಾಸವಾಗಿರುವ ಸುಡುಗಾಡು ಸಿದ್ದರು ಬಿಕ್ಷಾಟನೆಯಿಂದಲೇ ಬದುಕನ್ನು ಸಾಗಿಸುತ್ತಾ ಬಂದಿದರು ಕೆಲವರು ಅಲ್ಲಲಿ ಪಡಭೂಮಿಯನ್ನು ಗೆಯ್ಯು ರೈತಾರಾಗಿ ಬಂದು ಕಡೆಗೆ ನೆಲಸಿ ಬದುಕನ್ನು ಸಾಗಿಸಿದ್ದಾರೆ. ಸಾಮನ್ಯವಾಗಿ ಮಳೆಗಾಲದಲ್ಲಿ ಸಿದ್ದರು ಬಿಕ್ಷಟಾನೆಗೆ ಹೋಗದೆ ತಮ್ಮ ಸಂಸಾರದ ಜೊತೆಗೆ ಒಂದೇ ಕಡೆಗೆ ವಾಸಮಾಡುತ್ತಾರೆ.ಈ ಸಮಯದಲ್ಲಿ ಮೀನು ಹಿಡಿಯುವುದು.ಬೇಟೆಯಾಡುವುದನ್ನು ಮಾಡುತ್ತಾರೆ.ಉಳಿದ ಸಮಯದಲ್ಲಿ ಹೆಂಗಸರನ್ನು ಬಿಟ್ಟು ತಿಂಗಳವರೆಗೆ ಬಿಕ್ಷಾಟನೆಗೆ ಹೋಗದೆ ಮನೆಯಲ್ಲಿ ಕುಳಿತು ಚಾಪೆಹೆಣೆಯುವುದು ಕೌದಿಹೊಲಿಯುವುದು ನೂಲುವುದನ್ನು ಮಾಡುತ್ತಾರೆ.ಹೀಗೆ ತಯಾರಿಸಿದ ಊರಲ್ಲಿ ತೆಗೆದುಕೊಂಡು ಹೋಗಿ ಮಾರಿ ಬದುಕು ಸಾಗಿಸುತ್ತಾರೆ ಕೆಲ ಹೆಂಗಸರು ಕೂಲಿ ಕೆಲಸಕ್ಕೆ ಹೋಗುತ್ತಾರೆ ಮಕ್ಕಳು ತಂದೆಯ ಹಿಂದೆಯೇ ಅಲೆಮಾರಿಗಳಾಗಿಯೆ ಹೋಗುತ್ತಾರೆ.ಹೆಚ್ಚು ಕಷ್ಟಪಟ್ಟು ದುಡಿದು ತಿನ್ನುವ ಪ್ರವೃತಿ ಸುಡುಗಾಡು ಸಿದ್ದರಲ್ಲಿ ಕಾಣದು. ಕೈಚಳಕ, ಯಂತ್ರ,ತಂತ್ರ ಮಂತ್ರ ಮಾಟಗಳನ್ನು ಮಾಡುವುದು ವಶೀಕರಣ, ಹಗಲು ವೇಷಗಾರಿಕೆ ಹಾಕುವುದು.

ಕಾಲಜ್ಞಾನ ಹೇಳುವುದು ಗಿಡಮೂಲಿಕೆಗಳನ್ನು ಕೊಡುವುದು ಈ ಮೊದಲಾದವುಗಳನ್ನು ಅವರ ಉಪಜೀವನ ಪ್ರವೃತ್ತಿಯಾಗಿದೆ.

ಜನಪದ ವೈದ್ಯ:-ಸಿದ್ದರ ಜೋಳಿಗೆಗಳಲ್ಲಿ ಸದಾಗಿಡ ಮೂಲಿಕೆ ಗಳಿರುತ್ತವೆ. ಅಲೆಮಾರಿಗಳಾದ ಅವರು ಕಾಡು ಮೇಡುಗಳಲ್ಲಿ ಸಂಚಾರಿಸಿ ಗಿಡಮೊಲಿಕೆಗಳನ್ನು ಸಂಗ್ರಹಿಸಿಕೊಂಡು ಊರಿನ ಜನರ ರೋಗರುಜಿನಗಳನ್ನು ಗುಣಪಡಿಸುತ್ತಾರೆ. ಅಸ್ತ್ರೆಗಳನ್ನೇ ಕಂಡರಿಯದ ಇವರು ಎಂಥ ರೋಗಗಳಿಗೂ ಔಷದಿ ಕೊಡುತ್ತಾರೆ. ಮಕ್ಕಳಿಗೆ ಕಾಯಿಲೆಯಾದರೆ ಕಾಲಧೂಳು ತೆಗೆಯುವುದು, ಕೆಂಡಹಾಕುವುದು, ರಂಚ್ಚುಮಾಡುವುದು, ಬಾಲಗ್ರಹ ಕಟ್ಟುವುದು ಮೊದಲಾದವುಗಳನ್ನು ಮಾಡುತ್ತಾರೆ.

**ಒಳಾಡಿಳತ ಪದ್ಧತಿ :**

ಸುಡುಗಾಡು ಸಿದ್ದರು ತಮ್ಮದೆ ಆದ ಒಳಾಡಿಳಿತ ಪದ್ಧತಿ ಹೊಂದಿರುತ್ತಾರೆ.ಸಮಾಜದ ಕಟ್ಟು ಪಾಡುಗಳನ್ನು ಪಾಲಿಸಿಕೊಂಡು ಹೋಗುವ ಮನೋಬಾವವನ್ನು ತಾಳಿರುತ್ತಾರೆ. ಅವರ ಬದುಕು ಅಸ್ತವ್ಯಸ್ತವಾದರು ಸಾಮಾಜಿಕ ವ್ಯವಸ್ಥೆ ಒಳಾಡಳಿತ ವ್ಯವಸ್ತೆ ಇಲ್ಲವೆ ಕಟ್ಟುಪಾಡುಗಳನ್ನು

ಕಟ್ಟುನಿಟ್ಟಾಗಿ ಪಾಲಿಸಿಕೊಂಡುಬರುತ್ತಾರೆ. ಹೀಗಾಗಿ ಜನ ಸಾಮಾಜಿಕ ಕಟ್ಟುಪಾಡುಗಳ ಎದುರಿನಲ್ಲಿ ತಲೆಬಾಗಿ ನೆಡೆಯುವುದರಿಂದ ಅವರಲ್ಲಿ ಒಳಾಡಳಿತ ವ್ಯವಸ್ಥೆ ಉಳಿದುಬರಲು ಸಾದ್ಯಾವಾಗಿದೆ. ಸುಡುಗಾಡು ಸಿದ್ದರ ಸಮಾಜದಲ್ಲಿ ಎಲ್ಲಾ ವ್ಯವಹಾರಗಳು ಹಟ್ಟಿಯ ಮುಕಂಡ ಅಥವಾ ನಾಯಕನ ಮೂಲಕ ನೇಡೆಯುತ್ತವೆ. ಪ್ರತಿಯೊಬ್ಬರಿಗೊ ನ್ಯಾಯ ಕಲ್ಪಿಸಲು ಜಾತಿ ಪಂಚಾಯಿತಿ ರಚನೆಯಲ್ಲಿ ಸಮಾಜದ ಯಾಜಮಾನ ಬುಧ್ಧಿವಂತ ತೆಲಿಗಾರ(ಭಂಡಾರಿ)ಮೊದಲಾದವರನ್ನು ನೇಮಿಸಿಕೊಂಡಿರುತ್ತಾರೆ.

ಸಡುಗಾಡು ಸಿದ್ದರು ತೀರ ಹಿಂದುಳಿದ ಜನಾಂಗದವರಾಗಿದ್ದಾರೆ ಭಿಕ್ಷಾಟನೆಯೇ ಅವರ ಮೂಲ ವೃತ್ತಿಯಾಗಿದೆ ಶಿವನ ಮಕ್ಕಳೆಂದು ಹೇಳಿಕೊಳ್ಳುವ ಅವರು ಸ್ಮಶಾನ ಕಾಯುವ ಹೊಣೆಗಾರಿಕೆಯನ್ನು ಶಿವನು ತಮಗೆ ದಯಾಪಾಲಿಸಿದನೆಂದು ಹೇಳಿಕೊಳ್ಳುವ ಅವರು ಸ್ಮಶಾನ ಕಾಂಯುವ ಹೊಣೆಗಾರಿಕೆಂಯುನ್ನು ಶಿವನು ತವುಗೆ ದಂಯುಪಾಲಿಸಿದನೆಂದು ಹೇಳಿಕೊಳ್ಳುತ್ತಾರೆ.ಊರುಗಳಿಂದ ಹಾಗೂ ಪಟ್ಟಣಗಳಿಂದ ದೂರದಲ್ಲಿ ಬಯನಾಕ ಸುಡುಗಾಡಿನಲ್ಲಿ ಇದ್ದು ಬದುಕನ್ನು ಸಾಗಿಸುವ ಅವರ ಬದುಕಿನ ರೀತಿ ನೀತಿಗಳು ಇನ್ನುಳಿದವರಿಗಿಂತ ವಿಚಿತ್ರವಾಗಿವೆ.

**೫. ಶಿಳ್ಳೆಕ್ಯಾತರು**

ಶಿಳ್ಳೆಕ್ಯಾತರನ್ನು ಕಿಳ್ಳೆಕ್ಯಾತರೆಂದು ತೆಲುಗಿನಲ್ಲಿ ಬೊಮ್ಮಲಾಟವುಳ್ಳು ಎಂದು ಕನ್ನಡದಲ್ಲಿ ತೊಗಲು ಬೊಂಬೆಯಾಟದವರು ಎಂದೂ ಹೆಸರಿದೆ. ಶಿಳ್ಳೆಕ್ಯಾತರ ಪೂರ್ವಜರು. ಕೃಷಿ ವೃತ್ತಿಯನ್ನು ಮಾಡುತ್ತಿದ್ದ ಮರಾಠರಿದ್ದಿರಬಹುದು.ಅವರು ಅಲೆಮಾರಿಗಳ ಮುಖ್ಯವಾಗಿ ಮೈಸೂರು ಭಾಗದಲ್ಲಿ ಕಂಡಬರುತ್ತಾರೆ. ಮೀನು ಹಿಡಿಯುವುದು ಮತ್ತು ತೊಗಲು ಬೊಂಬೆಯಾಟ ಇವರ ಸಂಪ್ರಾದಾಯಿಕ ಕಸಬು ಜಾನುವಾರು ಸಾಕಣೆ ಅವರ ಉಪ-ಕಸುಬು ಕೆಲವರು ಹಂದಿ ಸಾಕಣೆಯನ್ನು ಮಾಡುತ್ತಾರೆ ಅವರು ಹನುಮಾನ್ ಪೂಜಿಸುತ್ತಾರೆ ಅವರ ಕುಲದೇವರು ಮೂಡಲಗಿರಿ ತಿಮ್ಮಪ್ಪ ನೀರಬತ್ತಪ್ಪ ಮತ್ತು ಗೋಣಿ ಬಸಪ್ಪ ದೇವರುಗಳನ್ನಲ್ಲದೆ ದುರ್ಗಮ್ಮ ಮಾರಮ್ಮ ಪ್ಲೇಗಮ್ಮ ಚಾಮುಂಡಿ ಮುಂತಾದ ದೇವತೆಯರನ್ನು ಪೂಜಿಸುತ್ತಾರೆ.ಅವರಿಗೆ ತಮ್ಮವರೆ ಆದ ಪೂಜಾರಿಗಳಿದ್ದಾರೆ. ಈ ಜನರಲ್ಲಿ ಮೀನುಗಾರ ಶಿಳ್ಳೆಕ್ಯಾತರು ಮತ್ತು ಬೊಂಬೆ ಶಿಳ್ಳೆಕ್ಯಾತರು ಮತ್ತು ಬೊಂಬೆ ಶಿಳ್ಳೆಕ್ಯಾತರು ಎಂಬ ಎರಡು ಒಳ-ವಿವಾಹದ ಪಂಗಡಗಳಿವೆ.

ಒಡ್ಡ ಅಥವಾ ಭೋವಿ:- ಒಡ್ಡರನ್ನು ಭೂವಿಗಳೆಂದು ಕರೆಯುತ್ತಾರೆ. ಅವರಲ್ಲಿ ಮೂರು ಮುಖ್ಯ ವಿಭಾಗಗಳಿವೆ ಕಲ್ಲು ಒಡ್ಡರು,ಮಣ್ಣು ಒಡ್ಡರು ಮತ್ತು ಉಪ್ಪು ಒಡ್ಡರು ಈ ಪ್ರತಿಯೊಂದು ವಿಭಾಗಗಳಲ್ಲಿ ಹಲವು ಹೊರ ವಿವಾಹದ ಉಪವಿಭಾಗಗಳಿವೆ ಅವರು ಮೂಲತಃ ತೆಲಗು ಮಾತಾನಾಡುವ ಪ್ರದೇಶಕ್ಕೆ ಸೇರಿದವರಾಗಿರಬೇಕು ರಾಜ್ಯದ ಎಲ್ಲಾ ಭಾಗಗಳಲ್ಲಿಯೂ ಅವರು ಕಂಡು ಬರುತ್ತಾರೆ.

ಹಿಂದಿನ ಕಾಲದಲ್ಲಿ ರಾಜರು ಈ ಜನರನ್ನು ಕೋಟೆ ಮತ್ತು ಅರಮನೆಗಳನ್ನು ಕಟ್ಟುವ ಕೆಲಸಕ್ಕಾಗಿ ಇಟ್ಟುಕೊಳ್ಳುತ್ತಿದ್ದರು ಬಂಡೆಗಲ್ಲು ಆಗೆಯುವುದು ಮತ್ತು ಕಲ್ಲು ಕಟ್ಟುವುದು ಅವರ ಸಂಪ್ರಾದಾಯಿಕ ಉದ್ಯೋಗವಾಗಿರುತ್ತಿತ್ತು. ಬಾವಿ ತೋಡುವುದು ರಸ್ತೆ ನಿರ್ಮಾಣ ಮಾಡುವುದು ಮತ್ತು ಕೆರೆಗಳನ್ನು ಬಾವಿ ತೋಡುವುದು.ಮುಂತಾದ ಉದ್ಯೋಗಗಳಲ್ಲಿ ಕೂಡ

ಅವರು ತೊಡಗಿದ್ದಾರೆ. ಮಾರುತಿ ದುರ್ಗವ್ವ ದ್ಯಾಮವ್ವ ಮತ್ತುಯಲ್ಲವ್ವ ಅವರ ಮನೆ ದೇವರುಗಳು ತಿರುಪತಿಯ ವೆಂಕಟರಮಣನನ್ನು ವಿಶೇಷವಾಗಿ ಆರಾಧಿಸುತ್ತಾರೆ. ಅವರ ಪೋಷಕ ದೈವ ಗೊರಪ್ಪ, ಪ್ರೇತಾತ್ಮಗಳನ್ನು ಕೂಡಾ ಅವರು ನಂಬುತ್ತಾರೆ.ತಾವು ನಂಬಿ ಆರಾದಿಸುವ ವಿವಿಧ ದೇವ-ದೇವತೆಗಳ ಹೆಸರುಗಳನ್ನೆ ತಾವು ಇಟ್ಟುಕೊಳ್ಳುತ್ತಾರೆ. ಉದಾ: ಗಂಡಸರಿಗೆ ಗಿಡ್ಡ,ಹನುಮ,ನಾಗ, ದ್ಯಾಮ ಇತ್ಯಾದಿ ಹೆಸರುಗಳಿವೆ.ವಿವಾಹ ಮತ್ತಿತರ ವಿಶೇಷ ಪಾತ್ರವನ್ನು ಮನ್ನಿಸುತ್ತಾರೆ ಅವರಲ್ಲಿ ವಿಧವಾ ವಿವಾಹ ಮತ್ತು ವಿವಾಹ ವಿಚ್ಛೇದನಗಳನ್ನು ಅನುಮತಿಸುತ್ತಾರೆ ಅವರಲ್ಲಿ ಮೃತರನ್ನು ಹೂಳಲಾಗುತ್ತದೆ.

ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಇರುವ ಸಾಮಾಜಿಕ ವೈಪರೀತ್ಯಗಳು. ಅಲ್ಲಲ್ಲಿ ದಲಿತರ ಮೇಲೆ ನಡೆಯುತ್ತಿರುವ ದೌರ್ಜನ್ಯಗಳಬಗ್ಗೆ ಆಗಿರುವ ವರದಿಯ ವಿವರಗಳನ್ನು ಹಾಗೂ ಸದರಿ ತಾಲೂಕಿನಲ್ಲಿ ತಾಂಡವವಾಡುತ್ತಿರುವ ಅಸ್ಪೃಶ್ಯತೆಯ ಕಥಾನಕಗಳನ್ನು ಇದೇ ತಾಲೂಕಿನವರಾದ ದಲಿತ ಸಂಘರ್ಷ ಸಮಿತಿಯ ಜಿಲ್ಲಾ ಸಂಘಟನಾ ಸಂಚಾಲಕರಾದ ಶ್ರೀ ಹೆಚ್. ದೊಡ್ಡಬಸಪ್ಪ ಅವರು ತಮ್ಮ ಅಭಿಪ್ರಾಯಗಳನ್ನು ಈ ಕೆಳಕಂಡಂತೆ ನಿರೂಪಿಸಿದ್ದಾರೆ.

ಬಳ್ಳಾರಿ ಜಿಲ್ಲೆಯ ೮ ತಾಲೂಕುಗಳ ಪೈಕಿ ಸದ್ಯ ಏಳೆ ಏಳು ತಾಲೂಕುಗಳು ಅಂದರೆ ಹರಪನಹಳ್ಳಿ ತಾಲೂಕು ನೂತನವಾಗಿ ರಚನೆಗೊಂಡ ದಾವಣಗೇರೆ ಜಿಲ್ಲೆಗೆ ಸೇರ್ಪಡೆಯಾಗಿದೆ. ಉಳಿದ ಏಳು ತಾಲೂಕುಗಳು ಬಳ್ಳಾರಿ ಜಿಲ್ಲೆಯಲ್ಲಿವೆ. ಹೊಸಪೇಟೆ, ಸಂಡೂರು, ಕೂಡ್ಲಿಗಿ ಸಿರುಗುಪ್ಪ, ಹಗರಿಬೊಮ್ಮನಹಳ್ಳಿ ಹಾಗೂ ಹೂವಿನಹಡಗಲಿ ತಾಲೂಕುಗಳು ಮಾತ್ರಜಿಲ್ಲೆ ಬಳ್ಳಾರಿಯಲ್ಲಿಯೇ ಉಳಿದುಕೊಂಡಿವೆ. ಅಂದರೆ ಬಳ್ಳಾರಿ ತಾಲೂಕೊಂದನ್ನು ಕೂಡಿಕೊಂಡರೆ ಒಟ್ಟಾರೆ ಏಳು ತಾಲೂಕುಗಳು.

ಜಿಲ್ಲೆಯ ಹೊಸಪೇಟೆ, ಸಿರಗುಪ್ಪಾ ತಾಲೂಕುಗಳು ಅತೀ ಹೆಚ್ಚು ನೀರಾವರಿ ಸೌಲಭ್ಯ ಹೊಂದಿದ್ದರೆ, ಸಂಡೂರು ತಾಲೂಕು ವಿಶೇಷವಾಗಿ ಕಬ್ಬಿಣ ಅದಿರಿಗೆ ಖ್ಯಾತಿ ಹೊಂದಿದೆ. ಆದರೆ ಉಳಿದ ತಾಲೂಕುಗಳು ಇದಕ್ಕೆ ಹೊರತಾಗಿವೆ. ಅದರಲ್ಲೂ ಹಗರಿಬೊಮ್ಮನಹಳ್ಳಿ ತಾಲೂಕು ಇಡೀ ಜಿಲ್ಲೆಯಲ್ಲಿಯೇ ಹಿಂದುಳಿದ ತಾಲೂಕು ಎಂಬುದರಲ್ಲಿ ಎರಡು ಮಾತಿಲ್ಲ. ಅಂದ ಹಾಗೆ ತಾಲೂಕಿನಲ್ಲಿ ದಲಿತರನ್ನು ಅದರಲ್ಲೂ ಪರಿಶಿಷ್ಟ ಜಾತಿಯ ಎಡಗೈ ಹಾಗು ಬಲಗೈ ಎಂಬ ಮೂಲ ಮಂತ್ರದೊಂದಿಗೆ ಒಡೆದಾಳುವ ನೀತಿಗೆ ಇಂಬು ಕೊಟ್ಟಂಥ ಖ್ಯಾತಿ ಹ.ಬೊ.ಹಳ್ಳಿ ತಾಲೂಕಿನದು.

ಈ ಬಗ್ಗೆ ತಾಲೂಕಿನ ವಿವಿಧ ಹಳ್ಳಿಗಳ ಜೀವನ ಮಟ್ಟ ಆರ್ಥಿಕ ಸ್ಥಿತಿ ಗತಿ, ಶೈಕ್ಷಣಿಕ ಸ್ಥಿತಿ ಗತಿ ಹಾಗು ಸಾಮಾಜಿಕ ಸ್ಥಿತಿ ಗತಿಗಳ ಸ್ಥೂಲ ನೋಟ.

**ಗ್ರಾಮವಾರು ವಿವರ**

೧. ಗದ್ದಿಕೆರೆ :-ಈ ಗ್ರಾಮ ತಾಲೂಕು ಕೇಂದ್ರದಿಂದ ೧೪ ಕಿ.ಮೀ. ದೂರದಲ್ಲಿದೆ ಗ್ರಾಮದಲ್ಲಿ ಪರಿಶಿಷ್ಟ ಜಾತಿಯ ಸರಿ ಸುಮಾರು ೬೦ ಕುಟುಂಬಗಳು ಬದುಕು ಸವೆಸುತ್ತಿವೆ. ಇಲ್ಲಿ ಜಾತೀಯತೆ, ಗುಲಾಮ ಗಿರಿ, ಒಡೆದಾಳುವ ನೀತಿ ರಾರಾಜಿಸುತ್ತಿದೆ. ಏಕೆಂದರೆ ಇಲ್ಲಿ ರೆಡ್ಡಿ ಲಿಂಗಾಯತರದೇ ಪ್ರಾಬಲ್ಯ ಸರಿ ಸಮಾನಾಗಿ ಕುರುಬ, ವಾಲ್ಮೀಕಿ, ಬಾರಿಕ, ಹಾಗೂ ಪರಿಶಿಷ್ಟ ಜಾತಿಯ ಜನಾಂಗ ಸವಾಲೊಡ್ಡಿ ನಿಂತರೆ ಒಡೆದಾಳುವ ನೀತಿಗೆ ಬದ್ದರಾಗಿ ನಿಂತಿರುವ

ರಡ್ಡಿ ಲಿಂಗಾಯತರು ಏನೊಂದು ಮಾಡಲಿಕ್ಕಾಗದು. ಆದರೆ ಆರ್ಥಿಕವಾಗಿ ಹಿಂದುಳಿದಿರುವ ಪರಿಶಿಷ್ಟ ಜಾತಿಯ ಜನಾಂಗದವರಿಗೆ ಕುರುಬ, ವಾಲ್ಮೀಕಿ, ಬಾರಿಕ, ಜೊತೆಗೆ ಪಿಂಜಾರ ಸಮುದಾಯವು ವಿಶ್ವಕರ್ಮ ಜನಾಂಗವೂ ಅವರನ್ನು ಎದುರು ಹಾಕಿಕೊಂಡು ಸಾಧಿಸುವುದೇನಿದೆ ಹೇಳಿ ? ಹಾಗೇನಾದರೂ ಆದರೆ ಹೊಟ್ಟೆ ಮೇಲೆ ಬಂಡೆ ಹಾಕಿಕೊಳ್ಳಬೇಕಾಗುತ್ತದೆ. ಆದರೆ ಕೋಗಳಿ ಗ್ರಾಮದ ದಲಿತರಿಗೆ 'ಶಹಬ್ಬಾಸ್ ಗಿರಿ' ಹೇಳಲೇ ಬೇಕು ಏಕೆಂದರೆ ಇಂಥ ಸಂಕಷ್ಟ ಸ್ಥಿತಿಯಲ್ಲಿಯೂ ಸ್ವಾಭಿಮಾನ ಒತ್ತೆ ಇಟ್ಟಿಲ್ಲ , ಮಾರಿಕೊಂಡಿಲ್ಲ ಒಟ್ಟಾರೆ ಸ್ವಾಭಿಮಾನಿ ಬದುಕು ಅವರದು.

೭) ಮಗಿಮಾವಿನಹಳ್ಳಿ : ಇದು ತಾಲೂಕು ಕೇಂದ್ರ ೧೮ ಕಿ.ಮಿ. ದೂರದಲ್ಲಿದೆ. ಈ ಗ್ರಾಮಕ್ಕೆ ತಾಲೂಕು ಕೇಂದ್ರದ ನಂಟು ಕೊಂಚ ಕಡಿಮೆಯೇ ಈ ಗ್ರಾಮಕ್ಕೆ ಏನಿದ್ದರೂ ಮರಿಯಮ್ಮನಹಳ್ಳಿಯೇ ತಾಲೂಕು ಕೇಂದ್ರ ಇದ್ದಂತೆ. ಇಲ್ಲಿ ಸರಿ ಸುಮಾರು ೭೦ ದಲಿತ ಕುಟುಂಬಗಳಿವೆ. ಶೇ. ೨೦ ರಷ್ಟು ಮಾತ್ರ ಭೂಮಿಯುಳ್ಳವರು ಒಬ್ಬಿಬ್ಬರನ್ನು ಬಿಟ್ಟರೆ ಉಳಿದೆಲ್ಲರ ಭೂಮಿ ಮಳೆಯಾಶ್ರಿತ. ಶಿಕ್ಷಣದ ಗುಣಮಟ್ಟ ಶೇಕಡ ೧ ರಷ್ಟು ಮಾತ್ರ ಈ ಗ್ರಾಮದಲ್ಲಿ ಅಸ್ಪೃಶ್ಯತಾ ಆಚರಣೆಯಂಥ ಸಾಮಾಜಿಕ ಅನಿಷ್ಟಗಳು ನಿರಾತಂಕವಾಗಿ ನಡೆದೇ ಇದೆ. ಹೀಗಿದ್ದರೂ ದಲಿತರು ಇಂಥ ಅಮಾನವೀಯ ಪದ್ಧತಿಗಳನ್ನು ಶಿರಸಾವಹಿಸಿ ಪಾಲನೆ ಮಾಡುವುದಷ್ಟೇ ಇವರ ಕೆಲಸ ಏಕೆಂದರೆ ಇಲ್ಲಿಯೂ ಜೀತ, ಒಕ್ಕಲುತನ (ಮನೆಮಾದಿಗತನ) ಅಸಮಾನತೆ ಹೆಪ್ಪುಗಟ್ಟಿದೆ. ಏಕೆಂದರೆ ಇದೆಲ್ಲಕ್ಕೂ ದಲಿತರಲ್ಲಿ ಜಿಡ್ಡುಗಟ್ಟಿದ ಮೌಢ್ಯತೆಯೇ ಕಾರಣ. ಇಲ್ಲಿ ಕುರುಬ, ಲಿಂಗಾಯತ, ವಾಲ್ಮೀಕಿ , ಬಾರಿಕ ಜನಾಂಗದವರ ಒಕ್ಕೊರಲಿನ ಧ್ವನಿ, ದಲಿತ ಸಮುದಾಯದ ಧ್ವನಿ ಅಡಗಿಸಿದೆ. ಸುಮಾರು ವರ್ಷಗಳ ಹಿಂದೆ ಸಾಮಾಜಿಕ ಸಮಾನತೆಗೆ ಮುಂದಡಿ ಇಟ್ಟ ಯುವ ಸಮುದಾಯವನ್ನು ಯಾವ ಬೂದಿ ಎರಚಿ ಬಾಯಿ ಮುಚ್ಚಿಸಿದರೆಂಬುದು ಇಂದಿಗೂ ನಿಗೂಢ ! ಈಗಲೂ ಹೋಟೆಲ್‌ಗಳಲ್ಲಿ ಪ್ರವೇಶ ನಿಷಿದ್ಧ ! ಆಗ ಧ್ವನಿಯೆತ್ತಿದ ಯುವಕರು ತಾಲೂಕು ಕೇಂದ್ರದ ಸಂಪರ್ಕ ಕಡಿದುಕೊಂಡಿದ್ದಾರೆ. ಆದರೆ ಪ್ರತಿವರ್ಷವೂ ಸಂವಿಧಾನ ಶಿಲ್ಪಿ ಡಾ॥ ಬಿ. ಆರ್. ಅಂಬೇಡ್ಕರ್‌ವರ ಜಯಂತೋತ್ಸವಕ್ಕೆ ತಪ್ಪದೇ ಬರುತ್ತಾರೆ. ಇದು ಹೆಮ್ಮೆ ಪಡುವಂಥ ವಿಚಾರ. ಹೀಗಿದ್ದೂ ಕೂಡ ಸಾಮಾಜಿಕ ಅಸಮಾನತೆ ರಾರಾಜಿಸುತ್ತಿರುವ ಆ ಗ್ರಾಮದಲ್ಲಿ "ಸ್ವಾಭಿಮಾನ" ದ ಅಡಿಪಾಯ ಹಾಕಿ ಕೊಟ್ಟ ಡಾ॥ ಬಿ. ಆರ್. ಅಂಬೇಡ್ಕರ್‌ರವರ "ಸ್ವಾಭಿಮಾನ" ದ ಮಂತ್ರವನ್ನು ದಲಿತರು ಮರೆತು ಬಿಟ್ಟಿದ್ದಾರೆಯೇ ? ಪ್ರತಿಯೊಂದು ಗ್ರಾಮದಲ್ಲೂ ಸುಶಿಕ್ಷಿತ ಸವರ್ಣೀಯರು ದಲಿತರನ್ನು ಯಾವುದೇ ನೆಪದೊಂದಿಗೆ ಮಣಿಸುತ್ತಲೇ ಬಂದ ಪರಿಪಾಠದ ದ್ಯೋತಕವೇ? ಇದೇ ಕಾರಣದೊಂದಿಗೆ ಸವರ್ಣೀಯರು ದಲಿತರ ಅಮಾಯಕ ಮನೋಭಾವದ ದುರ್ಲಾಭ ಪಡೆದುಕೊಂಡು ಜಾತೀಯತೆಯ ಶೈತ್ಯಾಗಾರದಲ್ಲಿಟ್ಟು ಮರೆಯುತ್ತಿರುವುದು ಸತ್ಯ! ಈ ಕಾರಣದಿಂದಲೇ ಈ ಗ್ರಾಮದಲ್ಲಿ ಅಸ್ಪೃಶ್ಯತಾ ಆಚರಣೆ ಎಗ್ಗಿಲ್ಲದೇ ಮುಂದುವರಿದಿರುವುದಕ್ಕೆ ಮೂಲ ಪ್ರೇರಣೆ.

**೮) ಬಿ. ಜಿ.ಹಳ್ಳಿ – II :** ಇದು ತಾಲೂಕು ಕೇಂದ್ರದಿಂದ ೧೦ ಕಿ.ಮೀ ದೂರದಲ್ಲಿದೆ

ಸುಮಾರು ೪೦ ದಲಿತ ಕುಟುಂಬಗಳಿವೆ ಸರ್ವರೂ ಜಮೀನುವುಳ್ಳವರು. ಆದರೆ ಶೇ೫೦ ರಷ್ಟು ಕುಟುಂಬಗಳು ಭೂಮಿಯಿದ್ದಾಗ್ಯೂ ಕೂಲಿ ಕೆಲಸವೇ ಜೀವನಾಧಾರ. ಆದರೂ ಆರ್ಥಿಕವಾಗಿ ಚೇತರಿಕೆಯುಳ್ಳವರು, ಹೀಗಿದ್ದು ಶೈಕ್ಷಣಿಕ ಗುಣಮಟ್ಟ ಶೂನ್ಯ. ಸಾಮಾಜಿಕ ಪರಿಜ್ಞಾನ ಇವರಿಗೆ ನಿಲುಕದ ದುಬಾರಿ ಸರಕು. ಇದೇ ಇವರಿಗೆ ಶಿಕ್ಷಣ ವಂಚಿತರನ್ನಾಗಿ ಮಾಡಿದೆಯೆಂದರೆ ತಪ್ಪಾಗಲಾರದು. ಅಂದರೆ ಇವರಿಗೆ ಶಿಕ್ಷಣ ವಂಚಿತರನ್ನಾಗಿ ಮಾಡಿದೆಯೆಂದರೆ ತಪ್ಪಾಗದು ಅಂದರೆ ಇವರಿಗೆ ಸಾಮಾಜಿಕ ಪರಿಜ್ಞಾನ ಇಲ್ಲ ಎಂದಾದ ಮೇಲೆ ಸಾಮಾಜಿಕ ಸಮಾನತೆಯ ಮಾತು ಬಹು ದೂರವೇ. ಈ ದೌರ್ಭಲ್ಯವೇ ಸವರ್ಣೀಯರಿಗೆ ರತ್ನ ಗಂಬಳಿ ಹಾಸಿ ಕೊಟ್ಟಂತೆ ಹಾಗಾಗಿ ಈ ಗ್ರಾಮದಲ್ಲಿ ಅಸ್ಪೃಷ್ಯತೆ ಆಚರಣೆ ಅಡೆ ತಡೆ ಇಲ್ಲದೇ ಸಾಗಿದೆ ದಿ॥ ಚನ್ನ ಬಸವನ ಗೌಡರು ನೆಡೆದಾಡಿದ ನೆಲದಲ್ಲಿ ಸಾಮಾಜಿಕ ಅಸಮಾನತೆಯ ಸೋಂಕು ಅಂದರೆ ದಲಿತರ ಆತ್ಮ ಗೌರವ ಸ್ವಾಭಿಮಾನವನ್ನು ಬಿಟ್ಟು ಬದುಕುತ್ತಿರುವುದು ಅಸ್ಪೃಶ್ಯತೆ ಆಚರಣೆ ಅವ್ಯಾಹತವಾಗಿ ಮುಂದುವರೆದಿರುವುದಕ್ಕೆ ಮೂಲ ಕಾರಣ. ಇಲ್ಲಿಯೂ ಗೌಡಿಕೆ ಗತ್ತೂ ಇದೆ.ಕುರುಬರ ಅಬ್ಬರವೂ ಇದ್ದರೂ ಆರ್ಥೀಕವಾಗಿ ಸಬಲರಾದ ದಲಿತರು ಇದಾವುದನ್ನೂ ಗಣನೆಗೆ ತೆಗೆದುಕೊಂಡಿಲ್ಲ ಆದ್ದರಿಂದ ಈ ಗ್ರಾಮದಲ್ಲಿ ಸಾಮಾಜಿಕ ಘರ್ಷಣೆಗಳು ನಡೆಯುವುದು ವಿರಳ ನಡೆದರೂ ಸೂರ್ಯೋದಯದಾದಿಯಾಗಿ ಎಲ್ಲವೂ ಶಮನ. ಆದರೂ ಇಲ್ಲಿ ದಲಿತರು ಆತ್ಮಾಭಿಮಾನ, ಆತ್ಮ ಗೌರವಗಳನ್ನು ಬದಿಗೊತ್ತಿ ಜೀವನ ಸಾಗಿಸುತ್ತಿರುವುದು ಆಧುನಿಕ ಸಮಾಜದ ಅಣುಕು. ಇಂಥಹ ದಲಿತರ ದೌರ್ಬಲ್ಯಗಳು ದಲಿತ ಪರ ಸಂಘಟನೆಗಳಿಗೆ ಸವಾಲಾಗಿ ಪರಿಣಮಿಸುವುದರಲ್ಲಿ ಯಾವುದೇ ಸಂಶಯವಿಲ್ಲಾ, ದಲಿತರ ಸಾಮಾಜಿಕ ಬದಲಾವಣೆ ಅವರವರ ಕೈಯಲ್ಲೇ ಇದೆ ಅಂದಹಾಗೆ ಇಂಥವರ ಮಧ್ಯೆ ಇರುವ ದಲಿತಪರ ಚಿಂತಕರು ನಿಜಕ್ಕೂ ಅಸಹಾಯಕರು ಎಂಬುದರಲ್ಲಿ ಎರಡು ಮಾತಿಲ್ಲ.

**೯) ಮುತ್ತೂರು , ಕಿತ್ತನೂರು, ತೆಲಿಗೋಳಿ** : ಈ ಮೂರು ಗ್ರಾಮಗಳು ತಾಲೂಕು ಕೇಂದ್ರದಿಂದ ಸರಾಸರಿ ೨೫ ಕಿ.ಮೀ. ದೂರದಲ್ಲಿವೆ. ಪ್ರತಿ ಗ್ರಾಮದಲ್ಲಿ ಕ್ರಮವಾಗಿ ೪೦, ೬೦, ೫೦ ದಲಿತ ಕುಟುಂಬಗಳು ಬದುಕು ಸವೆಸುತ್ತಿವೆ. ಪ್ರಥಮವಾಗಿ ಮುತ್ತೂರು ಗ್ರಾಮದಲ್ಲಿ ದಲಿತರೆಲ್ಲರೂ ಭೂ ರಹಿತರೆನೂ ಅಲ್ಲ. ಎಲ್ಲರೂ ಆರ್ಥಿಕವಾಗಿ ಸಬಲರೇ ಆದರೆ ಶಿಕ್ಷಣ ವಂಚಿತರು, ಮೌಢ್ಯತೆಯನ್ನು ತಲೆಯಲ್ಲಿ ತುಂಬಿಕೊಂಡವರು ಸಾಮಾಜಿಕ ಪರಿವರ್ತನೆಯ ಗಂಧ ಗಾಳಿಯೂ ಇವರ ಬಳಿ ಸುಳಿದಾಡುವುದಿಲ್ಲ, ಅಷ್ಟೆಲ್ಲಾ ಆರ್ಥಿಕ ಸಬಲತೆ ಅವರಲ್ಲಿದ್ದರೂ ಮಕ್ಕಳ ಭವಿಷ್ಯ ಜೀವನದ ಬಗ್ಗೆ ಕಿಂಚಿತ್ತು ಕಾಳಜಿಯೇ ಇಲ್ಲ. ಅಂದಹಾಗೆ ಆ ಗ್ರಾಮದ ಸವರ್ಣೀಯರು ಭೂ ಮಾಲೀಕರು, ಜೊತೆಗೆ ಶ್ರಮವಿಲ್ಲದೇ ಬೆಳೆ ತೆಗೆಯುವ ತುಂಗಾಭದ್ರಾ ಜಲಾನಯನದ ಮುಳುಗು ಭೂಮಿಯ ಒಡೆಯರು ! ಅದರಲ್ಲಿ ದಲಿತರೂ ಪಾಲುದಾರರೇ. ಸುಶಿಕ್ಷಿತ ಸವರ್ಣೀಯರು ಬರುವ ಆದಯದಲ್ಲಿ ಶೇ ೫೦ ರಷ್ಟು ಮಕ್ಕಳ ಶೈಕ್ಷಣಿಕ ಭವಿಷ್ಯಕ್ಕೆ ವಿನಿಯೋಗಿಸಿದರೆ, ದಲಿತರು ಮಕ್ಕಳ ಶೈಕ್ಷಣಿಕ ಭವಿಷ್ಯಕ್ಕೆ ಶೇ. ೧೦ ರಷ್ಟು ಖರ್ಚು ಮಾಡಿದ್ದರೆ ದಲಿತ ಮಕ್ಕಳ ಬಾಳು ಹಸನುಗೊಳ್ಳುವುದರಲ್ಲಿ ಯಾವ ಸಂದೇಹವೂ ಇರುತ್ತಿರಲಿಲ್ಲ. ಅಲ್ಲಿಯೂ ಜೀತ, ಗುಲಾಮ ಪದ್ಧತಿ , ಒಕ್ಕಲುತನ (ಮನೆಮಾದಿಗತನ) ಆರ್ಥಿಕವಾಗಿ ಸಬಲರಾಗಿದ್ದೂ

ಶಿರಸಾವಹಿಸಿ ಪಾಲನೆ ಮಾಡಿಕೊಂಡು ಬಂದಿರುವುದು ಬೇಡದ ಸಂಗತಿ. ಆದರೂ ತುಂಬಾ ಚಾಣಾಕ್ಷರಾದ ಗ್ರಾಮದ ಸವರ್ಣೀಯರು ದಲಿತರ ಅಮಾಯಕ ಮನೋಸ್ಥಿತಿ ಕರಗತ ಮಾಡಿಕೊಮಡು ಅಸ್ಪೃಶ್ಯತಾ ಆಚರಣೆಯನ್ನು ಜೀವಂತವಾಗಿಟ್ಟು ಅಟ್ಟ ಹಾಸ ಮೆರೆಯುತ್ತಿರುವುದರ ಹಿಂದೆ ದಲಿತರ ದೌರ್ಬಲ್ಯ ಎದ್ದು ಕಾಣುತ್ತಿರುವುದು ಸ್ಪಷ್ಟ. ಇಲ್ಲಿಯೂ ತುಂಬಾ ಜಾಣ್ಮೆಯಿಂದ ದಲಿತರನ್ನು ಎಲ್ಲಿಡಬೇಕೋ ಅಲ್ಲಿಟ್ಟಿದ್ದಾರೆ. ಆದರೆ ಆರ್ಥಿಕ ಸಬಲರಿದ್ದೂ ಸಾಮಾಜಿಕ ಅನಿಷ್ಟ ಪದ್ಧತಿಗಳಿಗೆ ಇಂಬು ಕೊಡುವ ಮಕ್ಕಳ ಬವಿಷ್ಯವನ್ನು ಕತ್ತಲಲ್ಲಿಟ್ಟ ದಲಿತರಿಗೇನನ್ನಬೇಕು ? ಆದರೂ ಸಾರ್ವತ್ರಿಕ ಸ್ಥಳಗಳಲ್ಲಿ ದಲಿತರಿಗೆ ಪ್ರವೇಶ ನಿಷಿದ್ಧ ! ಮುತ್ತೂರು ಗ್ರಾಮದಲ್ಲಿ ಆರ್ಥಿಕವಾಗಿ ಸಬಲರಿದ್ದ ದಲಿತರನ್ನು ಕಟ್ಟಿ ಹಾಕಿದ ಸವರ್ಣೀಯರ ಕುತಂತ್ರ ಎಂಥಹದ್ದಿರಬಹುದು ? ಊಹಿಸಲೂ ಅಸಾಧ್ಯ !

ನಂತರ ಕಿತ್ತನೂರು ಹಾಗೂ ತೆಲಿಗೋಳಿ ಗ್ರಾಮದ ವಸ್ತು ಸ್ಥಿತಿಯೇ ಬೇಕೆಯೆಂದರೂ ಶೈಕ್ಷಣಿಕವಾಗಿ ತುಂಬಾ ಹಿಂದುಳಿದಿರುವ ಗ್ರಾಮಗಳು ಜೊತೆಗೆ ಮುತ್ತೂರು ಗ್ರಾಮದಂತೆ ಈ ಎರಡೂ ಗ್ರಾಮಗಳೂ ಹೊರತೇನಲ್ಲ. ಆದರೂ ಮುತ್ತೂರು ಗ್ರಾಮಕ್ಕೆ ಹೋಲಿಸಿದರೆ ಕಿತ್ತನೂರು ಹಾಗೂ ತೆಲಿಗೋಳಿ ಗ್ರಾಮಗಳು ಭಿನ್ನ ಏಕೆಂದರೆ ಕಿತ್ತನೂರು ಗ್ರಾಮ ಶೈಕ್ಷಣಿಕವಾಗಿ ಹಿಂದುಳಿದಿದ್ದರೂ ಸಾಮಾಜಿಕ ಬದಲಾವಣೆಗೆ, ಪರಿವರ್ತನೆಗೆ ಹಾತೋರೆದಂತ ಗ್ರಾಮ ಆ ಭಾಗ ವಾಗಿಯೇ ದನ ಕಾಯುವ ಹುಡುಗರು ಬೆಳೆದ ನಿಂತ ತೆನೆ ಮುರಿದು ಕೊಂಡದ್ದೇ ಸಾಕು, ಭೂಮಿಯ ಕುರುಬ ಜನಾಂಗದವರು ಕುಡುಗೋಲಿನಿಂದ ಬೆರಳು ಕಟ್ಟಾಗುವಂತೆ ಕತ್ತರಿಸಿ ಜಾತಿ ನಿಂದನೆ ಹಾಗೂ ದೌರ್ಜನ್ಯ ನಿರ್ಬಂಧ ಕಾಯ್ದೆಯಡಿ ಪ್ರಕರಣ ದಾಖಲಾಗಿ ನ್ಯಾಯಾಲಯಕ್ಕೆ ಅಲೆದಾಡಿದ್ದಾಯಿತು. ಇಷ್ಟೆಲ್ಲಾ ನಡೆದರೂ ಸಾರ್ವತ್ರಿಕ ಸ್ಥಳಗಳಲ್ಲಿ ಈಗಲೂ ದಲಿತರಿಗೆ ಪ್ರವೇಶ ನಿರ್ಬಂಧ ! ಇದಕ್ಕೆಲ್ಲಾ ರಾಜಕೀಯ ಪ್ರವೇಶವಾಗಿ ದಲಿತರ ಮಧ್ಯ ಒಡಕುಂಟು ಮಾಡಿದ ಸವರ್ಣಿಯರು ಮುಸಿ ನಗುವಿನಿಂದ ದಲಿತರನ್ನು ನೋಡುತ್ತಿರುವುದು ಸತ್ಯ. ಇಲ್ಲಿ ದಲಿತರ ಬನ್ನಚ್ಚು ಶಿಕ್ಷಣದ ಕೊರತೆಯ ದುರ್ಲಾಭ ಪಡೆಯುತ್ತಿರುವುದು ಸವರ್ಣೀಯರ ಸೌಭಾಗ್ಯವೇ ಸರಿ. ಇನ್ನೂ ತೆಲಿಗೋಳಿ ಗ್ರಾಮದಲ್ಲಿ ಪ.ಜಾತಿಯ ಆದಿಕರ್ನಾಟಕ ಜನಾಂಗವಿರಲಿ ಪ.ಜ ತಿಗೊಳಪಟ್ಟ ಚನ್ನದಾಸರು ಸ್ಪೃಶ್ಯರು ಆದರೂ ಇವರಿಗೂ ಹೋಟೆಲ್‌ಗಳಲ್ಲಿ ಪ್ರವೇಶ ನಿರ್ಬಂಧವೆಂದಾದ ಮೇಲೆ ಪ.ಜಾತಿಯ ಎಡಗೈ – ಬಲಗೈ ಜನಾಂಗದವರ ಪಾಡೇನು ? ಅಂದ ಹಾಗೆ ದಲಿತರು ಸಾಮಾಜಿಕ ಸಮಾನತೆಗಾಗಿ ಹಂಬಲಿಸುವುದರಲ್ಲಿ ಅರ್ಥವೇ ಇಲ್ಲವೆಂಬಂಥ ಸ್ಥಿತಿ ನಿಸ್ಸಂಶಯ, ಒಟ್ಟಾರೆ ಸವರ್ಣೀಯ ಕುಟಿಲ ತಂತ್ರ ಎಲ್ಲೆಲ್ಲೂ ಫಲಪ್ರದವಾಗುತ್ತಾ ಸಾಗಿರುವುದು ದುರಂತವೇ ಸರಿ.

ಇಷ್ಟೆಲ್ಲಾ ಗ್ರಾಮಗಳ ಸ್ಥಿತಿ – ಗತಿ ಅವಲೋಕಿಸಿದಾಗ ದಲಿತರು ಸ್ವತಂತ್ರವಾಗಿ ಬದುಕುವುದು ಮರೀಚಿಕೆಯೇ ಸರಿ, ಏಕೆಂದರೆ, ಆರ್ಥಿಕ ಸ್ಥಿತಿ ಉತ್ತಮಾವಿದ್ದರೂ, ಮಕ್ಕಳನ್ನು ಶಿಕ್ಷಿತರನ್ನಾಗಿ ಮಾಡದ ಪೋಷಕರ ನಿರ್ಲಜ್ಜೆ , ನಿರ್ಲಕ್ಷ್ಯ ಮನೋಸ್ಥಿತಿಗೆ ಹಿಡಿದ ಕನ್ನಡಿ ಒಂದೆಡೆಯಾದರೆ, ಆರ್ಥಿಕವಾಗಿ ತುಂಬಾ ಹಿಂದುಳಿದು ಒಪ್ಪೊತ್ತಿನ ಗಂಜಿಗೂ ಗತಿಯಿಲ್ಲದ ತಂದೆ – ತಾಯಿ, ಪೋಷಕರು ಮಕ್ಕಳ ಭವಿಷ್ಯದ ಹಿತದೃಷ್ಟಿಯಿಂದ ತಮ್ಮ ತನವನ್ನೇ ಧಾರೆಯೆರೆದ ನಿದರ್ಶನಗಳು

ನೂರಾರು ! ಈ ಎಲ್ಲಾ ಸತ್ಯ ಗೊತ್ತಿದ್ದ ದಲಿತ ಸಮುದಾಯ, ನಿರಂತರ ಶೋಷಣೆಗೆ, ಗುಲಾಮಗಿರಿಗೆ, ದೌರ್ಜನ್ಯಕ್ಕೆ , ಅಟ್ಟಹಾಸಕ್ಕೊಳಪಟ್ಟರೂ, ಅವರನ್ನು ಸಮಾಜಿಕ ಪರಿವರ್ತನೆಗೆ ಬಗ್ಗಿಕೊಳ್ಳುವಂಥ ಮನೋಸ್ಥಿತಿ ಏಕೆ ಬರುತ್ತಿಲ್ಲ ? ಇದೊಂದು ದಲಿತಪರ ಚಿಂತಕರಿಗೆ ಯಕ್ಷ ಪ್ರಶ್ನೆಯಾಗಿಯೇ ಉಳಿದಿರುವುದು ಶೋಚಿಗವೇ ?

ಈ ಎಲ್ಲಾ ಗ್ರಾಮಗಳು ಮೇಲ್ನೋಟಕ್ಕೆ ಅದರಲ್ಲೂ ಹೋಟೆಲ್ ಪ್ರವೇಶಕ್ಕೆ ಸೀಮಿತವಾಗಿದ್ದರೂ ಕೆಲವೊಂದು ಗ್ರಾಮಗಳು ಅಂದರೆ, ಪಿಂಜಾರ ಹೆಗ್ಡಾಳ್, ಬಿ.ಜಿ. ಹಳ್ಳಿ – ೨ನೆ , ವರದಾಪುರ , ಮರಬ್ಬಿಹಾಳ್, ಉಪನಾಯಕನಹಳ್ಳಿ , ದಶಮಾಪುರ, ನಾಣ್ಯಾಪುರ, ಮಾದೂರು ಗ್ರಾಮಗಳೂ ಇಂಥ ಅನಿಷ್ಠ ಪದ್ಧತಿಗಳಿಂದ ಹೊರತಾಗಿಲ್ಲ ಜೊತೆಗೆ ಕ್ಷೌರಿಕರೂ ದಲಿತರನ್ನು ದೂರವಿಟ್ಟ ಜ್ವಲಂತ ನಿದರ್ಶನಗಳಿಗೇನೂ ಕೊರತೆಯಿಲ್ಲಾವೆಂಬುದು ಇನ್ನೂ ಕಳವಳಕಾರಿ ಸಂಗತಿ

೧೦) **ಬೆಣ್ಣೆಕಲ್ಲು** : ಇದು ತಾಲೂಕು ಕೇಂದ್ರದಿಂದ ೧೫ ಕಿ.ಮೀ. ದೂರದಲ್ಲಿದೆ. ಸುಮಾರು ೭೦ ದಲಿತ ಕುಟುಂಬಗಳು ಜೀವನ ಸಾಗಿಸುತ್ತಿವೆ. ಇಲ್ಲಿ ಶೈಕ್ಷಣಿಕವಾಗಿ ಹಿಂದುಳಿದಿದ್ದರೂ ಸಾಮಾಜಿಕ ಸಮಾನತೆಗಾಗಿ ಹಂಬಲಿಸುತ್ತಿರುವ ವೈಚಾರಿಕ ಮನೋಭಾವವುಳ್ಳ ಯುವ ಪಡೆಯೇ ಇದೆ. ಆರ್ಥಿಕವಾಗಿ ಸದೃಢರಾಗಿದ್ದೂ ಶಿಕ್ಷಣಕ್ಕೆ ಒತ್ತು ಕೊಡದಿರುವುದು ದುರಂತವೇ ಸರಿ. ಆದರೆ ಒಂದು ಸಂಗತಿಯಂತೂ ಸತ್ಯ ಅದೇನೆಂದರೆ ಹಿಂದುಳಿದ ವರ್ಗ , ಪ. ಪಂಗಡಕ್ಕೆ ಸೇರಿದ ವಾಲ್ಮೀಕಿ ಜನಾಂಗದ ಪ್ರಾಬಲ್ಯವೇ ಹೆಚ್ಚೆಂದರೆ ತಪ್ಪಾಗಲಾರದು ಈ ಜನಾಂಗದವರೊಂದಿಗೆ ಮುಸ್ಲಿಂ ಸಮುದಾಯದ ಅಕಿಚೆಂದ ನಾಯಕರ ಪಾತ್ರವೂ ಇದೆ. ಹಾಗಾಗಿ ಪಕ್ಕಾ ಮಾದಿಗ ಜನಾಂಗದ ಯಾರೊಬ್ಬರಿಗೂ ಸ್ಪಂದಿಸದೇ ದಲಿತರ ಸಾಮಾಜಿಕ ಜೀವನದ ಜೊತೆ ಚಲ್ಲಾಟವಾಡುತ್ತಿದ್ದಾರೆ. ಕಾರಣವಿಷ್ಟೇ ದಲಿತರಾರು ಭೂ ಹೀನರಲ್ಲ, ಸ್ವಾವಲಂಬಿ ಬದುಕನ್ನು ಸಾಗಿಸುವವರು ಜೊತೆಗೆ ಶ್ರಮಿಜೀವಿಗಳೂ ಕೂಡ. ಅಂದರೆ ವ್ಯತ್ಯಾಸವಿಷ್ಟೇ, ಸಾಮಾಜಿಕ ಸಮಾನತೆಯ ಬೇಡಿಕೆ ಮುಂದಿಟ್ಟರೆಂಬ ಒಂದೇ ಕಾರಣಕ್ಕಾಗಿ , ಇಡೀ ದಲಿತ ಕುಟುಂಬಗಳು ಸವರ್ಣೀಯರಿಗೆ ಸಷ್ಯ ಬರಲಿಲ್ಲ. ಈಗ ಸುಮಾರು ಮೂರು ವರ್ಷಗಳಿಂದಲೂ ಇನ್ನಿಲ್ಲದ ತೊಂದರೆ ಕೊಡುತ್ತಲೇ ಬಂದಿದ್ದರೂ ಅದೂ ವಿಶೇಷವಾಗಿ ಗ್ರಾಮದ ಧಾರ್ಮಿಕ ಕಾರ್ಯಗಳು ಇದ್ದಾಗಲೇಯೆಂಬುದು ವಿಶೇಷ ! ಇದರರ್ಥ ಜಾತೀಯ ಮನೋಭಾವದ, ಮಡಿವಂತಿಕೆಯನ್ನು ಜೀವಿತಾವಧಿಯಿಂದಲೂ ಪರಿಪಾಲಿಸಿಕೊಂಡ ಬಂದ ಕೊಳಕು ಮನಸ್ಸಿನ ಜನರಿಂದ ಯೆಂಬುದು ಸ್ಪಷ್ಟ , ಅಂದರೆ ಸಾಮಾಜಿಕ ಸಮಾನತೆಯ ಪರಿಕಲ್ಪನೆ ಬರದೇ ದಾಸಾನುದಾಸರಾಗಿ ದಲಿತರು ಸವರ್ಣೀಯರ ಚಾಕರಿ ಮಾಡುತ್ತಲೇ ಇರಬೇಕೆ ? ಎಲ್ಲಿಯವರೆಗೆ ಈ ಶೋಷಣೆ ? ಪ್ರತಿಯೊಬ್ಬರಿಗೂ ತಾಳ್ಮೆ , ಸಂಯಮಕ್ಕೊಂದು ಮಿತಿಯುಂಟು ಅಂದರೆ ಈ ಸಾಮಾನ್ಯ ಜ್ಞಾ ನ ಸುಶಿಕ್ಷಿತ ಸವರ್ಣೀಯರಿಗೆ ಗೊತ್ತಿಲ್ಲವೆಂದಲ್ಲ ಶೋಷಿತ ಜನ ನಿರಂತರ ಶೋಷಣೆಗೊಳಪಡುತ್ತಲೇ ಇರಬೇಕೆನ್ನುವ ಧೈಯ ಅಥವಾ ಕಾಯಕ ಅವರದು ಹಾಗಾಗಿ ದಲಿತರು ಧ್ವನಿ ಅಡಗಿಸಿದ ಭಗೀರಥ ಪ್ರಯತ್ನದಲ್ಲಿ ನಿರತರಾಗಿ ಆಚರಣೆ ಇನ್ನೂ ಜೀವಂತವಾಗಿಯೇ ಬಳಿಸಿಕೊಂಡಿರುವುದು ನಾಗರೀಕ ಸಮಾಜ ತಲೆ ತಗ್ಗಿಸುವಂಥ ಕೆಲಸ

೧೧) **ಏಣಗಿ ಬಸಾಪುರ :** ಇದು ತಾಲೂಕು ಕೇಂದ್ರದಿಂದ ೧೮ ಕಿ.ಮೀ. ದೂರದಲ್ಲಿದೆ. ಸುಮಾರು ೩೦ ದಲಿತ ಕುಟುಂಬಗಳು ಜೀವನ ಸಾಗಿಸುತ್ತಿವೆ. ಇಲ್ಲಿ ಎಲ್ಲರಿಗೂ ಭೂಮಿಯುಂಟಾದರೂ ಅಶಕ್ತ ಕೆಲ ಕುಟುಂಬಗಳು ಬೇರೊಬ್ಬರ ಕೂಲಿ ಕೆಲಸ ಮಾಡುತ್ತ ಜೀವನ ಸಾಗಿಸುತ್ತಿರುವುದು ಸತ್ಯವಾದರೂ ರಾಜಕೀಯವಾಗಿ ಹರಿದು ಹಂಚಿಹೋಗಿ ತಮ್ಮ ತಮ್ಮಲ್ಲೇ ಆಗಾಗ ಘರ್ಷಣೆಗಿಳಿಯುತ್ತಿರುವುದು ಸ್ಪಷ್ಟ. ಅಂದರೆ ಎಮ್ಮೆ ಏರಿಗೆಳೆದರೆ ಕೋಣ ಕೆರೆಗೆಳೆಯಿತೆಂಬ ಗಾದೆ ಮಾತು ಅಕ್ಷರಕ್ಷ : ಸತ್ಯ ಅಂದರೆ ಅಲ್ಲಿ ಬಹು ಸಂಖ್ಯಾತ ಸವರ್ಣೀಯರ ಸಂಚಿನ ಫಲಶೃತಿ ದಲಿತ ಜನಾಂಗ ಇಬ್ಭಾಗವಾಗಲು ಮುಖ್ಯ ಕಾರಣ. ಅಂದರೆ ಸವರ್ಣೀಯರ ತಂತ್ರವೆಂದರೆ ಅಸ್ಪೃಶ್ಯತಾ ಆಚರಣೆ ನಿರಾತಂಕವಾಗಿ ಮುನ್ನೆಡೆಯ ಬೇಕೆಂಬುದು.

ಈ ಗ್ರಾಮದಲ್ಲಿಯೂ ಶೈಕ್ಷಣಿಕ ಮಟ್ಟ ಶೂನ್ಯ , ಸಾಮಾಜಿಕ ತಿಳುವಳಿಕೆ ಅಲ್ಪ ಸ್ವಲ್ಪ ಇದ್ದರೂ ಆ ಗ್ರಾಮದ ಸವರ್ಣೀಯರ ಮುಂದೆ ಏನೆಂದೂ ನಡೆಯದು. ಅಂದರೆ ಒಡೆದಾಳುವ ನೀತಿಗೊಳಪಟ್ಟ ದಲಿತ ಸಮುದಾಯ ಸಾಮಾಜಿಕ ಸಮಾನತೆಯಿಂದ ದೂರ ಉಳಿದು ಈಗಲೂ ಅಸ್ಪೃಶ್ಯತಾ ಆಚರಣೆಯಂಥ ಸಂಕೋಲೆಯನ್ನು ಕೊರಳಿಗೆ ಹಾಕಿಕೊಂಡಿರುವುದಂತೂ ಸತ್ಯ ! ಈ ಬಗ್ಗೆ ತಂಬ್ರಹಳ್ಳಿ ಠಾಣಾವ್ಯಾಪ್ತಿಯಲ್ಲಿ ಪ್ರಕರಣದಾಖಲಾಗಿದ್ದೂ ಉಂಟು. ಆದರೆ ಅದಾವುದೂ ಫಲಪ್ರದವಾಗಲಿಲ್ಲವೆಂಬುದು ಕಟು ಸತ್ಯ. ಒಟ್ಟಾರೆ ಈ ಗ್ರಾಮದ ದಲಿತರ ಬವಣೆಯ ಬದುಕು ನಿರಂತರವಾಗಿ ಸಡೆದೇ ಇದೆ.

# ಅಧ್ಯಾಯ ಮೂರು

## ಜನಪದರು ಮತ್ತು ದಲಿತ ಪರಿಕಲ್ಪನೆ

ಅ) ಜನಪದ, ಪದನಿಷ್ಪತ್ತಿ.
ಆ) ಜಾನಪದ.
ಇ) ವ್ಯಾಖ್ಯಾನಗಳು.
ಈ) ದಲಿತ ಪದದ ಅರ್ಥ.
ಉ) ದಲಿತ ವ್ಯಾಖ್ಯಾನಗಳು.
ಊ) ದಲಿತ ಸಾಹಿತ್ಯ.
ಋ) ದಲಿತ ಸಾಹಿತ್ಯದ ಉದ್ದೇಶ, ಸ್ವರೂಪ.

ಅಧ್ಯಾಯ ಮೂರು

# ಜನಪದರು ಮತ್ತು ದಲಿತ ಪರಿಕಲ್ಪನೆ

'ಜನ' ಅಂದರೆ ಕೊನೆ ಪಕ್ಷ ಒಂದಾದರು ಸಮಾನ ಅಂಶವನ್ನುಳ್ಳ ಜನರ ಒಂದು ಗುಂಪು. ಈ ಸಮಾನ ಅಂಶ ಯಾವುದಾದರು ಆಗಿರಬಹುದು .ಸಮಾನ ದರ್ಮವಾಗಿರಬಹುದು, ಬಾಷೆಯಾಗಿರಬಹುದು, ಜಾತಿಯಾಗಿರಬಹುದು, ಕಸುಬಾಗಿರಬಹುದು. ಯಾವುದೇ ಕಾರಣದಿಂದ ಈ ಜನ ಗುಂಪಾಗಿರಲಿ ಇವರಿಗೆ ತಮ್ಮದೆಂದು ಹೇಳಿಕೊಳ್ಳುವ ಒಂದು ಪರಂಪರೆ ಇರುತ್ತದೆ. ಗುಂಪಿನಲ್ಲಿಯ ಪ್ರತಿಯೊಬ್ಬರು ತಿಳಿದಿರುತ್ತಾರೆ ಎಂದಲ್ಲ, ಆದರೆ ತನ್ನ ಗುಂಪಿನ ಜೀವಕೇಂದ್ರ ಯಾವುದೆಂಬುದನ್ನು ಬಾಯ್ಬಿಟ್ಟು ಹೇಳಲಿಕ್ಕೆ ಬಾರದಿದ್ದರೂ ಅರಿತಿರುತ್ತಾರೆ. ಈಜೀವಕೇಂದ್ರ ಅಥವಾ ಪರಂಪರೆ ಆ ಗುಂಪಿನ ಆರಾಧನೆ, ಆಚಾರ, ವಿಚಾರ, ನಂಬಿಕೆ, ದೋರಣೆಗಳ ಮೂಲಕ ವ್ಯಕ್ತವಾಗುತ್ತವೆ. ಈ ಪರಂಪರೆ ಆ ಗುಂಪಿನವರಿಗೆಲ್ಲ ತಾವು ಇನ್ನೊಂದು ಗುಂಪಿನ ಜನರಿಗಿಂತ ಬೇರೆಯಾಗಿದ್ದೇವೆಂದು ಹೇಳಿಕೊಳ್ಳುವಂತ ಒಂದು ಸಮೂಹ ಪ್ರಜ್ಞೆಯನ್ನು ಕೊಡುತ್ತದೆ. ನಮ್ಮಲ್ಲಿಯೇ ಲಿಂಗಾಯಿತರ ಜಾನಪದ , ಒಕ್ಕಲಿಗರ ಜನಪದ ಬೇರೆ ಬೇರೆ ಯಾಗಿರುವುದು ಸಾದ್ಯ .ಹೀಗೆ ರೈತರ ಮತ್ತು ಗಿರಣಿ ಕೂಲಿಕಾರರ ಜಾನಪದಗಳೂ ಇರಬಹುದು , ಅಷ್ಟೇ ಏಕೆ ಕಾಲೇಜು ವಿದ್ಯಾರ್ಥಿಗಳದ್ದೇ ಒಂದು ಜಾನಪದವಿರಲೂ ಸಾದ್ಯ .ಬಹುಶಃ ಜಾನಪದದ ಒಂದು ಚಿಕ್ಕ ಗುಂಪು ಕುಟುಂಬವಾಗಬಹುದು, ಒಂದು ಕುಟುಂಬದ ಮೂಡನಂಬಿಕೆಗಳು, ಕುಲದೇವರು, ಆಮೂಲಕ ಆಚಾರ-ವಿಚಾರಗಳು ಬೇರೆ ಇರುವುದು ಸಾದ್ಯ. ಹೀಗೆ ಪ್ರತಿಯೊಂದು ಗುಂಪಿಗೂ ಒಂದಿಲ್ಲೊಂದು ರೀತಿಯ ಜಾನಪದವಿದ್ದೆ ಇರುತ್ತದೆ. ಆದ್ದರಿಂದ ಜಾನಪದ ತಜ್ಞನಿಗೆ ಯಾವ ಗುಂಪೂ ಅಧ್ಯಯನ ಯೋಗ್ಯವಾದುದು.

ಜಾನಪದದಲ್ಲಿ ಅನೇಕ ವಿಷಯಗಳು ಬರುತ್ತವೆ. ಒಂದೊಂದು ಗುಂಪಿನಲ್ಲಿ ಅನೇಕ ಜಾನಪದ ರೂಪಗಳಿರುತ್ತವೆ, ಪುರಾಣಗಳು, ಕಟ್ಟುಕತೆಗಳು, ಚೇಷ್ಟೆ, ಗಾದೆ, ಉಡುಪು, ಬೈಗಳು, ಆಣೆಮಾಡುವಾಗ, ಬೇಟಿಯಾದಗ ಹೇಳುವ ಮಾತುಗಳು, ಧಾರ್ಮಿಕ ವ್ಯಾವಹಾರಿಕ ನಡುವಳಿಕೆಗಳು, ಹಾಡು, ಕುಣಿತ, ಆಟಪಾಠಗಳು ಬಯಲಾಟ, ಸಂಗೀತ ಉಪಬಾಷೆ ಇತ್ಯಾದಿ. ದೇವರಿಗೆ ನಡೆದುಕೊಳ್ಳುವ ರೀತಿ, ಆಚರಿಸುವ ಆರಾದನೆಗಳು, ಉತ್ಸವ ಹಬ್ಬಹರಿದಿನಗಳು, ಮದುವೆ ಪದ್ದತಿಗಳು, ಹೆಂಗಸರಿಗೆ ಸಂಬಂಧಿಸಿದ ಆಚರಣೆಗಳು ಇದರಲ್ಲೇ ಸೇರುತ್ತವೆ.

ಇಷ್ಟಾಗಿಯೂ ಈರೂಪಗಳ ಪಟ್ಟಿ ಪೂರ್ಣವಾಯಿತೆಂದಲ್ಲ. ಈರೂಪ ವೈವಿಧ್ಯದಿಂದಾಗಿಯೇ ಇದನ್ನು ಯಾರು ಎಷ್ಟು ಅಧ್ಯಯನ ಮಾಡಿದರು ಕಡಿಮೆ. ಮನಶಾಸ್ತ್ರಜ್ಞರು, ಸಾಹಿತ್ಯಜ್ಞರು, ಮಾನವಶಾಸ್ತ್ರಜ್ಞರು, ಅರ್ಥಶಾಸ್ತ್ರಜ್ಞರು, ಸಮಾಜವಿಜ್ಞಾನಿಗಳು, ಭಾಷಾಶಾಸ್ತ್ರಜ್ಞರು–ಹೀಗೆ ಯಾರಿಗೂ ಇಲ್ಲಿ ವಿಷಯವಿದೆ.

ಜನಪದವು ಸಂಸ್ಕೃತಿಯ ಅಂಶವೇನಲ್ಲ, ಅಂದರೆ ಅದು ಮನುಷ್ಯನಿಗೆ ಕಲಿಕೆಯಿಂದ ಬಂದ ಸಂಪ್ರದಾಯಗಳ ಮತ್ತು ಅನುವಂಶಿಕ ಪರಂಪರೆಯ ಪ್ರಜ್ಞೆಯ ಪ್ರಮುಖವಾದ ಒಂದು ಭಾಗ. ಅದ್ದರಿಂದಲೇ ಅದರ ಅಧ್ಯಯನಕ್ಕೆ ನಮ್ಮ ಪೂರ್ವಸಿದ್ದತೆ ಎಷ್ಟಿದ್ದರೂ ಒಳ್ಳೆಯದು. ಇವೆಲ್ಲವುಗಳ ಜೊತೆಗೆ ತಾನೊಂದು ಮುಗಿದ ಪೂರ್ತಿಯಾದ  ಅಥವಾ ಸತ್ತ ಸಂಸ್ಕೃತಿಯ ಅಧ್ಯಯನ ನೆಡಸಿದ್ದೆನೆಂಬ ಭ್ರಮೆ ಇಟ್ಟುಕೊಳ್ಳಬಾರದು. ಎಕೆಂದರೆ ಜಾನಪದವು ಒಂದು ಸಂಸ್ಕೃತಿಯು ಮುಗಿದು ಪೂರ್ತಿಯಾದ ಅವ್ಯಸ್ಥೆಯಲ್ಲ

ಜೀವಂತವಾಗಿರುವ ಅವಸ್ಥೆ. ಆದ್ದರಿಂದ ಜಾನಪದವನ್ನು ಅಧ್ಯಯನ ಮಾಡುವಾಗ ಅದರ ಮುಂದುವರಿಕೆ ಪ್ರಮುಖ ಧರ್ಮವಾದ ತೋಂಡಿತನವನ್ನು ನಿರ್ಲಕ್ಷಿಸುವಂತಿಲ್ಲ. ಒಂದು ತಲೆಮಾರಿನ ನಂಬಿಕೆ ದೋರಣೆ, ಸಂಪ್ರಾದಯ ಪರಂಪರೆಗಳು, ತೋಂಡಿಯಾಗಿ(ಕ್ವಚಿತ್ತಾಗಿ ನಡುವಳಿಕೆಯ ಮಾದರಿಗಳಾಗಿ)ಮುಂದಿನ ತಲೆಮಾರಿಗೆ ಸಾಗಿಸಲ್ಪಡುತ್ತವೆ. ಜಾನಪದದ ಈ ಗುಣ ಧರ್ಮವೇ ಸಂಸ್ಕೃತಿ ಇನ್ನಿತರ ಅಂಗಗಳಿಂದ ಅದನ್ನು ಬೇರ್ಪಡಿಸುತ್ತದೆ. ಒಂದು ಸಂಸ್ಕೃತಿ. ಸಾಮಾಜಿಕ, ರಾಜಕೀಯ ಸಂಸ್ಥೆ, ಯಾಂತ್ರಿಕತೆ, ಧರ್ಮ, ಅರ್ಥವ್ಯೆವಸ್ಥೆ, ಕಲೆ ಮುಂತಾದ ಅನೇಕ ಅಂಗಗಳಿಂದ ಕೂಡಿರುತ್ತದೆ ಜಾನಪದವು ಮುಖ್ಯವಾಗಿ ಕಲೆಗೆ ಆಸಂಸ್ಕೃತಿಯ ಕಲಾತ್ಮಕ ಅಬಿವ್ಯಕ್ತಿಗೆ ಸಂಬಂಧಪಟ್ಟಿರುತ್ತದೆ. ಈಗ ಜಾನಪದವನ್ನು ಸ್ಥೂಲವಾಗಿ ಹೀಗೆ ವರ್ಣಿಸಬಹುದು. "ಜಾನಪದವನ್ನು ಸಂಸ್ಕೃತಿಯ ಒಂದು ಅಂಗ  ತೊಂಡಿಯಾಗಿ ಇಲ್ಲವೆ ಮೂಡನಂಬಿಕೆ, ಬಣ್ಣಗಾರಿಕೆ, ನಡುವಳಿಕೆ, ನ್ರತ್ಯಗಳಲ್ಲಿನಂತೆ ಮಾದರಿಯಾಗಿ ತಲೆಮಾರಿನಿಂದ ತಲೆಮಾರಿಗೆ ಸಾಗಿಸಲ್ಪಡುವಂತದ್ದು , ಅದು ಲಾವಣಿ.ಕಥೆ, ಪುರಾಣ .ಗಾದೆ .ಒಗಟು–ಹೀಗೆ ಶಾಬ್ದಿಕವಾಗಿ ಯಾವುದೇ ಆಗಿರಬಹುದು. ಶಾಬ್ದಿಕವಲ್ಲದ ಕಲಾರೂಪಗಳು ಅದರಲ್ಲಿದ್ದರೂ ಮುಖ್ಯವಾಗಿ ತೋಂಡಿ ಗುಣ ಧರ್ಮ ಅದರ ಉಸಿರು ಎಂದು ಹೇಳಬಹುದು. ಸ್ಥೂಲವಾಗಿ ಇದು ಇಂದಿನ ಜಾನಪದ ಕಲ್ಪನೆ .

ಜಾನಪದವನ್ನು ಪ್ರಸಿದ್ದವಾದ ವ್ಯಾಖ್ಯಾನಗಳನ್ನು ಇದರೊಂದಿಗೆ ವಿವರಿಸಲಾಗಿದೆ. ಇವುಗಳನ್ನು ಗಮನಿಸುತ್ತಾ ಹೋದಂತೆ ಜಾನಪದ ಕಲ್ಪನೆ ಹೇಗೆ ನಿರ್ದಿಷ್ಟವಾಗುತ್ತ .ಶಾಸ್ತ್ರೀಯವಾಗುತ್ತಾ ಬಂದಿದೆ ಎಂಬುದನ್ನು ಕಾಣಬಹುದು.

**ಅ) ಜನಪದ, ಪದನಿಷ್ಪತ್ತಿ:**

ಜಾನಪದ ಎನ್ನುವ ಪದ ಇಂಗ್ಲೀಷ್‌ನ 'Folklore,ಎಂಬ ಪದಕ್ಕೆ ಸಮಾನಾರ್ಥವಾಗಿ ಬಳಸಿರುವ ಕನ್ನಡ ಪದ Folklore ಎನ್ನುವುದು Folk & lore' ಎಂಬ ಎರಡು ಪ್ರತ್ಯೇಕ ಅರ್ಥಗಳನ್ನುಳ್ಳ ಪದಗಳ ಸಂಯೋಗದಿಂದ ಆಗಿದೆ 'Folk' ಎನ್ನುವುದಕ್ಕೆ ಕನ್ನಡದಲ್ಲಿ ಜನಪದ ಎಂತಲೂ lore ಗೆ ಜ್ಞಾನ ಎಂತಲೂ ಅರ್ಥವಿದೆ. ಒಟ್ಟಾಗಿ ಇದು ಜನಪದರ ಜ್ಞಾನ ಅಥವಾ ಜನಪದ ಜ್ಞಾನ ಎಂದಾಗುತ್ತಾದೆ. ಸೌಲಭ್ಯ, ಸಂಕ್ಷಿಪ್ತತೆ, ಹಾಗು ವೈಜ್ಞಾನಿಕ ಅಧ್ಯಯನಕ್ಕೆ ಸೂಕ್ತವೆಂಬ ದೃಷ್ಟಿಯಿಂದ 'ಜನಪದ ಜ್ಞಾನ' ಎಂಬ ಈವಿಷಯಕ್ಕೆ ಡಾ.ಹಾ.ಮಾ.ನಾಯಕರು ಕನ್ನಡದಲ್ಲಿ ಜಾನಪದ ಎಂಬ ಶಬ್ದವನ್ನು ಬಳಸಿದ್ದಾರೆ, ಜನಪದರ ಜ್ಞಾನವೇ 'ಜಾನಪದ'ಫೋಕ್ +ಲೋರ್=ಫೋಕ್‌ಲೋರ್ ಅಂದರೆ ಜನಪ್ರಿಯ ನಡಾವಳಿಗಳು (Popular anti qution )ಎಂಬುದಕ್ಕೆ ಬದಲಾಗಿ ಜಾನ್ ಥಾಮ್ಸ್ ಎಂಬ ಪ್ರಾಚೀನಾನ್ವೇಷಕನು ೧೮೪೬ ರಲ್ಲಿ Folklore ಪದವನ್ನು ಸೃಷ್ಟಿಸಿ ಚಲಾವಣೆಗೆ ತಂದನು. ಇದರಲ್ಲಿ Folk ಮತ್ತು lore ಎಂಬ ಎರಡು ಪದಗಳಿದ್ದು lore ಎಂದರೆ ಜ್ಞಾನ Folk ಎಂದರೆ ಜನರು ಎಂದು ಸಾಮನ್ಯ ಅರ್ಥವಿದೆ. ಆದರೆ ಫೋಕ್ ಲೋರ್ ಶಾಸ್ತ್ರದಲ್ಲಿ ವಿಶಿಷ್ಟವಾದ, ನಿರ್ದಿಷ್ಟವಾದ ಅರ್ಥದಲ್ಲಿ ಆದಿವಾಸಿಗಳ, ಅನಕ್ಷರಸ್ಥರ, ಗ್ರಾಮೀಣರ, ನಾಗರೀಕ ಸಮಾಜದ ಸಾಮನ್ಯ ಜನರ ಗುಂಪಿಗೆ ಮಾತ್ರ ಬಳಕೆಯಾಗುತ್ತದೆ. ಫೋಕ್‌ನ ನಂಬಿಕೆ, ಪದ್ಧತಿ, ಗಾದೆ ,ಒಗಟು, ಗೀತೆ, ಕತೆ, ದಂತಕಥೆ, ಪುರಾಣ, ಧಾರ್ಮಿಕಾಚರಣೆ ನೃತ್ಯ, ಸಂಗೀತ, ಮಾಟ,ಮಂತ್ರ ಇತ್ಯಾದಿಯಾಗಿ ಯಾವುದು ಅವರನ್ನು ಆಳುವುದೋ, ಯಾವುದು ಆಚರಣೆಯಲ್ಲಿ ಉಂಟೋ ಅವುಗಳೆಲ್ಲವನ್ನು ಕುರಿತ ಲೋರ್ –ಜ್ಞಾನ ಅಥವಾ ಕಲಿಕೆಯೇ ಫೋಕ್ ಲೋರ್. ಈ ಫೋಕ್ ಲೋರ್ ಬಗ್ಗೆ ನಮ್ಮ ದೇಶದವರ ಗಮನ ಹರಿದಾಗಿನಿಂದ ಫೋಕ್ ಲೋರ್ ಪದಕ್ಕೆ ಸಂವಾದಿಯಾದ ಪದವನ್ನು ಸೃಷ್ಟಿಸಿಕೊಳ್ಳಲು ವಿದ್ವಾಂಸರು ಪ್ರಯತ್ನಿಸಿದ್ದಾರೆ. ಲೋಕಾಯನ, ಲೋಕವಿಜ್ಞಾನ, ಲೋಕವಾಙ್ಮಯ ಮೊದಲಾದ ಪದಗಳನ್ನು ಸೃಜಿಸಿದ್ದಾರೆ, ಇಲ್ಲೆಲ್ಲ ಫೋಕ್ ಎಂಬುದಕ್ಕೆ 'ಲೋಕ' ಎಂದು; ಅರಿವು ಕಲಿಕೆ ಎಂಬರ್ಥದ ಲೋರ್ ಎಂಬುದಕ್ಕೆ ಆಯನ ವಿಜ್ಞಾನ ವಾಙಯ ಎಂಬ ಪದಗಳನ್ನು ಬಳಸಿರುವುದನ್ನು ಗುರುತಿಸಬಹುದಾಗಿದೆ. ಇದೇ ರೀತಿಯ ಪ್ರಯತ್ನ ೧೯೩೬ ಕನ್ನಡದಲೂ ಜರುಗಿತು. ಜಾನಪದ ಎಂದರೇನು ಎಂಬುವರ ಬಗ್ಗೆ ವಿದ್ವಾಂಸರಲ್ಲಿ ಖಚಿತವಾದ ಅಭಿಪ್ರಾಯ ಇನ್ನು ಮೂಡಿಬಂದಿಲ್ಲ ಮಾನವ ಶಾಸ್ತ್ರ ದೃಷ್ಟಿಯಿಂದ, ಕೆಲವರು ಸಾಹಿತ್ಯ ದೃಷ್ಟಿಯಿಂದ ಕೆಲವರು ಆವಿಷಯಕ್ಕೆ ವಿವರಣೆ ನೀಡಲು ಪ್ರಯತ್ನಿಸಿದ್ದಾರೆ. ಜಾನಪದ ಸಂಗ್ರಹ ಪಾಶ್ಚತ್ಯ ದೇಶಗಳಲ್ಲಿ ಐನೂರು ವರ್ಷಗಳಿಂದ ನಡೆಯುತ್ತಿದ್ದರೂ ಆ ಶಾಸ್ತ್ರಕ್ಕೆ ಹೊಸ ಹೆಸರೊಂದು ಸಿದ್ಧವಾದುದು ಕಳೆದ ಶತಮಾನದಲ್ಲಿ .ಜನಪ್ರಿಯ ಪಳೆಯುಳಿಕೆಗಳು (populer anti quities) ಹಾಗು ಜನಪ್ರಿಯ ಸಾಹಿತ್ಯ (populer literature) ಎಂದು ಕರೆಯಲ್ಪಡುತಿದ್ದ ವಿಷಯಗಳಿಗೆ 'Folklore' ಎಂಬ ಪದವನ್ನು ಡಬ್ಲ್ಯು.ಜೆ.ಥಾಮ್ಸ್ ೧೮೪೬ ರಲ್ಲಿ ಸೃಷ್ಟಿಸಿದ. ಈ ಹೆಸರಿನ ಸೃಷ್ಟಿ ತೀರ

ಇತ್ತೀಚಿನದಾದರೂ ಜಾನಪದ ಮಾನವನ ಉದಯದಷ್ಟೇ ಹಳೆಯದು ಅದರ ಅಧ್ಯಯನಕ್ಕೆ ಮೂರ್ನಾಲ್ಕು ಶತಮಾನಗಳ ಒಂದು ಇತಿಹಾಸವಿದೆ

## ಅ) ಜಾನಪದದ ವ್ಯಾಖ್ಯಾನಗಳು

ಜಾನಪದಕ್ಕೆ ಸಂಬಂದಿದಂತೆ ಅನೇಕ ವಿದ್ವಾಂಸರು ಹೀಗೆ ವ್ಯಾಖ್ಯಾನಿಸಿದ್ದಾರೆ. ರಿಚರ್ಡ್ ಹಾರ್ಸ್ನ್ ರವರ ಪ್ರಕಾರ "ಜಾನಪದ ಭೂತಕಾಲದ ಪ್ರತಿಧ್ವನಿಯಾಗಿರುವಂತೆ ವರ್ತಮಾನದ ಕಸುವುಳ್ಳ ಧ್ವನಿಯು ಹೌದು"

ಡಾ.ಹಾ.ಮಾ.ನಾಯಕರ ಪ್ರಕಾರ"ಜಾನಪದವು ಜನತೆಯ ಗ್ರಂಥಸ್ಥವಲ್ಲದ ಸಂಪ್ರಾದಯದ ಮೊತ್ತ, ಸಂಪ್ರದಾಯವನ್ನು ಕುರಿತ ಜ್ಞಾನ. ಯಾವುದೇ ಸಮಾಜದ ವಾಚಿಕ ಪರಂಪರೆಗಳ ಕಲೆ ಮತ್ತು ನಂಬಿಕೆಗಳ ಮೊತ್ತ".

ಎಪ್ಪಿನೋಸ್ ರವರ ಪ್ರಕಾರ"ಆದಿಮಾನವ ಮನಸ್ಸಿನ ನೇರವಾದ ಅಭಿವ್ಯಕ್ತಿಯೇ ಜಾನಪದ " ಇದು ದೊಡ್ಡ ಅನುಭವ ಭಂಡಾರ, ಮನುಕುಲದ ಅನ್ವೇಷಣಾಯಾತ್ರೆಯಲ್ಲಿ ಅನುಭವ ಪಡೆದ ಕಲಿತ ಹಾಗು ಆಚರಿಸಿಕೊಂಡು ಬಂದ ಜನಪ್ರಿಯ ಮತ್ತು ಸಾಂಪ್ರದಾಯಿಕ ಜ್ಞಾನ.

ಕೆನತ್ ಮತ್ತು ಮೇರಿಕ್ಲಾರ್ಕ್ ರವರು ಹೇಳುವಂತೆ "ಜಾನಪದ ಎನ್ನುವುದು ವಾತವರಣದಂತೆ ಸಾರ್ವತ್ರಿಕವಾದ ವಿಷಯ. ನಮ್ಮೆಲ್ಲರ ಬದುಕಿನ ಮೇಲೆ ಅಗೋಚರವಾದರೂ ಮಹತ್ತರವಾದ ಪ್ರಬಾವ ಬೀರುವಂತದ್ದು ಹಾಗು ವಾತವರಣದಂತೇಯೇ ಶಾಸ್ತ್ರೀಯವಾದ ಅಧ್ಯಯನಕ್ಕೆ ಒಳಪಡುವಂತದ್ದು".

ಸ್ಮಿತ್ ಥಾಮ್ಸನ್ ಅಭಿಪ್ರಾಯ ಪಡುವಂತೆ "ಜನರ ನೆನಪಿನ ಶಕ್ತಿಯಿಂದ, ನಿತ್ಯಾನುಭವದಿಂದ ಉಳಿದು ಬಂದದ್ದು".

Folklore ಕುರಿತ ಇದುವರೆಗಿನ ವಿವರಣೆಗಳಲ್ಲಿ Folk ಗಿಂತ Lore ನ್ನು ಕುರಿತ ವಿವೇಚನೆಗಳೇ ಹೆಚ್ಚಾಗಿವೆ. ಜಾನಪದದ ನಿರ್ಧಿಷ್ಟ ಸ್ವರೂಪವನ್ನು ಗುರುತಿಸುವಾಗ ಈ ಈಟಲಿಇ ಶಬ್ದ ಕೂಡಾ ಮುಖ್ಯವಾದುದೇ, ಇಂಗ್ಲೀಷಿನ ಪ್ರಸಿದ್ಧ ಅರ್ಥಕೋಶಗಳು 'Flok' ಎನ್ನುವುದಕ್ಕೆ ಅನೇಕ ಅರ್ಥಗಳನ್ನು ಕೊಡುತ್ತವೆ.

ಆಕ್ಸ್‌ಫರ್ಡ್ ಅರ್ಥಕೊಶದ ಪ್ರಕಾರ

೧) ಒಂದೇ ಮೂಲಕ್ಕೆ ಸೇರಿದ ತಮ್ಮದೇ ಆದ ಪ್ರದೇಶ ಅಥವಾ ರಾಜ್ಯವನ್ನು ಪಡೆದ ಜನಾಂಗಗಳ ಒಂದು ಗುಂಪು . ಮೂಲನಿವಾಸಿಗಳ ಸ್ಥಿತಿಯಿಂದ ರಾಜಕೀಯ ಅಥವಾ ಸಾಮಾಜಿಕ ವ್ಯವಸ್ಥೆಯತ್ತ ಹೊರಳುತ್ತಿರುವ ಜನ.

೨) ಜಾನಂಗ, ಭಾಷೆ ಧರ್ಮಗಳಲ್ಲಿ ಬದ್ಧರಾದ ಒಂದು ಪ್ರಜಾ ಸಮೂಹದ ಕೆಳಗಿನ ಸ್ಥರ. ತನ್ನದೇ ಆದ ಒಂದು ಸಮೂಹದ ಗುಣವನ್ನು ಪಡೆದುಕೊಂಡ, ತನ್ನದೇ ಆದ

ಸಂಪ್ರಾದಯ, ಕಲೆ, ಕೈಗಾರಿಕೆ, ಐತಿಹ್ಯ, ನಂಬಿಕೆಗಳನ್ನು ತಲೆಮಾರಿನಿಂದ ತಲೆಮಾರಿಗೆ ಬದಲಾಗದಂತೆ ಉಳಿಸಿಕೊಂಡು ಬಂದ ಜನಸಮೂಹ.

೩) ಒಂದು ರಾಜ್ಯದ ಒಂದು ದೈವದ, ಒಂದು ಮತದ, ಒಬ್ಬ ಸರ್ವಾಧಿಕಾರಿಯ, ಒಬ್ಬ ನಾಯಕನ ಪ್ರಭಾವ ವಲಯಕ್ಕೆ ಅಧಿಕಾರ ವ್ಯಾಪ್ತಿಗೆ ಒಳಗಾದ ಜನತೆಯ ಮೊತ್ತ.

೪) ದೇಶದ ಜನಪದ ಎಂದು ಕರೆಸಿಕೊಳ್ಳುವ ಪ್ರಜಾಸಮೂಹ.

೫) ಒಂದು ಕುಟುಂಬ ಸದಸ್ಯರು, ಬಂದು ಬಳಗ ಇತ್ಯಾದಿ.

'Folk' ಎನ್ನುವ ಈವಿವಿಧಾರ್ಥದ ವ್ಯಾಪಕ ಶಬ್ದದ ಬಳಕೆಯನ್ನು ಗಮನಿಸಿದಾಗ ಯಾವುದೋ ಒಂದು ಗೊತ್ತಾದ ಜನಸಮೂಹಕ್ಕೆ ಸಂಬಂದಿಸಿದಂತೆ ಅದರ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಬೇಕು ಇಲ್ಲವೆ ಕುಗ್ಗಿಸಿಕೊಳ್ಳ ಬೇಕು ಮೂಲನಿವಾಸಿಗಳ ಅಥವಾ ನಾಗರೀಕರ ಯಾವ ವರ್ಗವಾದರು'ಈಂಟಇ' ಆಗಬಹುದು. ಪರಸ್ಪರ ಸಂಬಂದವನ್ನು ಸಾಧಿಸಿಕೊಳ್ಳುವ ಸೂತ್ರವೊಂದರಿಂದ ಇವರೆಲ್ಲ ಬಂಧಿತರಾಗಬೇಕು. ಜಾನಪದ ಎನ್ನುವುದು ಕೇವಲ ಅಲಕ್ಷಿತ ಜನಾಂಗವೊಂದಕ್ಕೆ, ಆದಿವಾಸಿಗಳ ಗುಂಪೊಂದಕ್ಕೆ, ಗ್ರಾಮಂತರ ಜೀವನಕ್ಕೆ ಮಾತ್ರ ಸೀಮಿತವಾಗಬೇಕಾದ ಅಗತ್ಯವಿಲ್ಲ. ಅದರ ವ್ಯಾಪ್ತಿ ಬೆಟ್ಟಕಾಡಿನ ನಡುವಿನ ಹಟ್ಟಿಯೊಂದರಿಂದ ನಗರಕೇಂದ್ರದ ರಾಜಭವನದವರೆಗೆ ನಿಲ್ಲಬಹುದು. ಆದರೆ ಅದನ್ನು ಅನುಸರಿಸುವ ಅದರ ವ್ಯಾಪ್ತಿಯ/ರೇಖೆಯಲ್ಲಿ ಬರುವ ಗುಂಪುಗಳನ್ನೋ, ಜನಾಂಗವನ್ನೋ, ಸಾಮಾಜಿಕ ವರ್ಗವನ್ನೋ ಅದು ಅವಲಂಬಿಸಿರುತ್ತದೆ ಎಂಬುದು ನಿಜ. Alon dunds ಅವರ The term folk 'can rafer any group of people what soever who share at last one common factor, ಎಂಬ ಅಭಿಪ್ರಾಯ 'ಜನಪದ' ಸ್ಪಷ್ಟ ಕಲ್ಪನೆಯನ್ನು ನೀಡುತ್ತದೆ. ಈಸಂಬಂಧ ಸೂತ್ರ ಯವುದು ಎಂಬುದು ಮುಖ್ಯವಲ್ಲ ಅದೊಂದು ವೃತ್ತಿಯಾಗಬಹುದು, ಭಾಷೆಯಾಗಬಹುದು. ಆದರೆ ಈರೀತಿ ರೂಪಿತವಾದ ಗುಂಪಿಗೆ ತನ್ನದೇ ಆದ ಒಂದು ಸಂಪ್ರಾದಾಯ, ಎನ್ನುವುದಿರಬೇಕು ಈ ಗುಂಪಿನಲ್ಲಿ ಕೊನೆಯ ಪಕ್ಷ ಇಬ್ಬರಾದರೂ ಇರಬಹುದು. ಅಪಾರ ಸಂಖ್ಯೆಯ ಸದಸ್ಯರಿರುವ ಕಡೆ ವ್ಯಕ್ತಿಗಳಲ್ಲಿ ಪರಸ್ಪರ ಪರಿಚಯವಿಲ್ಲದಿದ್ದರೂ, ಅವರರವರ ಸಂಪ್ರದಾಯಗಳು ಮಾತ್ರ ಸ್ಪಷ್ಟವಾಗಿ ಗೊತ್ತಿರುತ್ತವೆ. ಈಗುಂಪಿನ ವ್ಯಾಪ್ತಿ ತನ್ನದೆ ಸಂಪ್ರದಾಯ ಸೂತ್ರದಿಂದ ಬಂಧಿತವಾಗಿ ಯಾವ ಮಟ್ಟಕ್ಕಾದರೂ ವಿಸ್ತರಿಸುವ ಅವಕಾಶವನ್ನು ಪಡಿದುಕೊಂಡಿದೆ.. ಕಾಡುಗೊಲ್ಲರ ನಾಲ್ಕು ಗುಡಿಸಲುಗಳ ಹನ್ನೆರಡು ಮಂದಿಯೇ ಒಂದು ಜಿಂಟಇ ಆಗಿ ಅವರ ಜಾನಪದ ಎಂದೇ ನಿರ್ದೇಶಿಸಬಹುದು , ಸಂಚಲಶೀಲರಾದ ಗೊಂಬೆ ರಾಮರ ಒಂದು ಕುಟುಂಬವೇ ಒಂದು ಜಿಂಟಇ ಆಗಿ ಅವರ ಜಾನಪದವೇ ಅಬ್ಯಾಸ ಯೋಗ್ಯವಾಗಬಹುದು ಇಬ್ಬರು ಬುಡುಬುಡುಕಿಯವರು, ಇಬ್ಬರು ಹಕ್ಕಿಪಿಕ್ಕಿಯವರು ಒಂದೆಡೆ ಕಲೆತರೆ ಅವರದೇ ಒಂದು ಜಾನಪದವಾಗಬಹುದು. "Even militory unit, college students community is a Folk" ಎಂಬ ಅಭಿಪ್ರಾಯ ಇಲ್ಲಿ

ಗಮನಾರ್ಹವಾದುದು. ಕಾಲೇಜಿಗೆ ಸಂಬಧಿಸಿದ ವಿದ್ಯಾರ್ಥಿ ಸಮುದಾಯಕ್ಕೆ ಕತೆಗಳು, ಗೀತೆಗಳು ಅನೇಕ ಸಂಪ್ರದಾಯಗಳು ಜಾನಪದವಾಗಬಹುದು ಎಂದು ಇತ್ತೀಚಿನ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಈಂಟಇಸಂಬಧಿಸಿದಂತೆ 'Folk religion' ಎಂಬ ಹೊಸ ಅರ್ಥದ ಮಾತೊಂದು ಬಳಕೆಯಾಗುತ್ತಿರುವುದನ್ನು ಈಸಂದರ್ಭದಲ್ಲಿ ನೆನೆಯಬಹುದು. ಶಿಷ್ಟ ಮತಗಳು ಧಾರ್ಮಿಕ ಗ್ರಂಥಗಳ, ಪಂಥಗಳ, ಮತ ಸಂಸ್ಥಾಪಕರ ಪ್ರಭಾವಕ್ಕೆ ನೇರವಾಗಿ ಒಳಗಾಗದ ಮತಗಳೆಲ್ಲವನ್ನು ಜನಪದ ಮತವೆನ್ನಬಹುದು.

ಹೀಗೆ 'Flok' ಶಬ್ದವನ್ನು ಅತ್ಯಂತ ಎಚ್ಚರಿಕೆಯಿಂದ ಸೂಕ್ಷ್ಮವಾಗಿ ಬಳಸುವ ಅಗತ್ಯವಿದೆ. ಡಾ. ಹಾ.ಮಾ.ನಾಯಕರು ನಿರ್ದರಿಸುನಂತ್ತೆ 'Flok'ಬಳಸುವ 'ಜನ, ಮಂದಿ, ಜನಾಂಗ, ಕುಲ, ಜನಸಾಮನ್ಯರ ಸಂಸ್ಕೃತಿಯನ್ನು ಬಯ್ಯುವ ಸಾಮಾಜಿಕ ವರ್ಗ ಅಥವಾ ಸಂಪ್ರದಾಯದೊಂದಿಗೆ ಹೆಣೆದ, ಸಮಾಜ ಹಳೆಯ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿರುವ ಜನ ಸಾಮನ್ಯರ ಸಮೂಹ, ಶಿಷ್ಟ ಮತಗಳ ಶೀರ್ಷಿಕೆಯಡಿಯಲ್ಲಿ ಜೈನ, ಬೌದ್ಧ, ಕ್ರೈಸ್ಥ ವೀರಶೈವ ಮುಂತಾದ ಮತಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡಿದಾಗ ಜಾನಪದದ ಪ್ರಭಾವ ಈಮತಗಳ ಮೇಲೂ ವಿಶೇಷವಾಗಿ ಆಗಿರುವುದನ್ನು ಕಾಣಬಹುದು. ಯಾವುದೋ ಧರ್ಮವನ್ನುಸ್ವೀಕರಿಸಿದ ಮಾತ್ರಕ್ಕೆ ಪರಂಪರಾನುಗತವಾಗಿ, ರಕ್ತಗತವಾಗಿ ಹರಿದುಬಂದ ಜಾನಪದ ಪ್ರವಾಹದಿಂದ ಸಂಪೂರ್ಣವಾಗಿ ಪಾರಗುವ ಸಂದರ್ಭಗಳು ತುಂಬ ಅಪರೂಪ ಜನಪದ ಸಂಪ್ರದಾಯ ನಂಬಿಕೆ, ಸಾಹಿತ್ಯ ,ಕಲೆಗಳ ಮೇಲೆ ಅಂಥ ಮಹತ್ವದ ಪ್ರಬಾವವನ್ನೇನೂ ಈಧರ್ಮಗಳು ಬೀರದೆ ಬಹುಮಟ್ಟಿಗೆ ಜಾನಪದ ಸೆಲೆಗಳನ್ನು ತೀವ್ರವಾಗಿಯಲ್ಲದಿದ್ದರೂ ಸೂಕ್ಷ್ಮವಾಗಿ ಗುರ್ತಿಸುವ ಅವಕಾಶವಿದೆ. ಕ್ರೈಸ್ಥ ಮತದ ಹಿನ್ನೆಲೆಯಲ್ಲಿ 'ಪ್ಯಾಗನ್' ಸಂಸ್ಕೃತಿಯ ಪಳೆಯುಳಿಕೆಗಳು ಈಗಲೂ ಯುರೋಪಿನ ಅನೇಕ ರಾಷ್ಟ್ರಗಳಲ್ಲಿವೆ.

ಜಗತ್ತಿನ ಜಾಗತಿಕ ವಿದ್ವಾಂಸರು ಪದವನ್ನು ಕುರಿತು ಪ್ರತ್ಯೇಕವಾಗಿ ವಿಚಾರ ಮಾಡದಿದ್ದರೂ ಈಂಟಇಟಂಡಿಜ ಜಾನಪದ ಎಂದರೇನೆಂಬುದನ್ನು ವಿವರಿಸಲು ವಿಪುಲ ಪ್ರಯತ್ನ ಮಾಡಿದ್ದಾರೆ ಥ್ಯಾಮ್ಸ್ ಈಮಾತಿನಲ್ಲಿ 'Folklore'ಎಂಬ ಟ್ಯೂಟನಿಕ್ ಮೂಲದ ಎರಡು ಪದಗಳು ಸೇರಿಕೊಂಡಾಗ ನಡುವೆ ಇದ್ದ ಗೆರೆ ಮುಂದೆ ಬಿದ್ದು ಹೋಯಿತು.

**ಇ) ದಲಿತ ಪದದ ಅರ್ಥ, ವಿವೇಚನೆ**

ದಲಿತ ಎನ್ನುವ ಪದ 'ದಲ' ಎಂಬ ಸಂಸ್ಕೃತ ಮೂಲದಿಂದ ಬಂದಿದ್ದು 'ದಲ'ಎಂದರೆ ಚೂರು,ತುಂಡು,ಭಾಗ, ತುಕಡಿ,ಸೈನ್ಯ ಎಂಬ ಅರ್ಥಗಳಿವೆ (ಗು.ಬೀ.ಜೋಶಿ ಮ ೩೪೧)ಅದರೆಕಿಟೆಲ್ ಕೋಶದಲ್ಲಿ ದಲಿತ ಪದಕ್ಕೆ Burst,split,untoled, blowen ಎಂಬ ಅರ್ಥಗಳಿವೆ.(ಕಿಟೆಲು ಕೋಶ ಪು೭೭೭.೧೯೮೩) ಕನ್ನಡ ಸಾಹಿತ್ಯಪರಿಷತ್ತು ಪ್ರಕಟಿಸಿದ ನಿಘಂಟಿನಲ್ಲಿ 'ದಲಿತ'ಎಂಬುದಕ್ಕೆ ಹಿಂದುಳಿದುದು,ದಮನಕ್ಕೆ ಒಳಗಾದುದು ,ಶೋಷಿತ ಜನ, ಸಾಮಾಜಿಕವಾಗಿ,ಆರ್ಥಿಕವಾಗಿಯೂ,ಧಾರ್ಮಿಕವಾಗಿಯೂ ಕೆಳಮಟ್ಟದವರೆಂದು ಗುರುತಿಕೊಂಡವರು ದಲಿತರೆನ್ನಬಹುದು. ಮುಂದೆ ದಲಿತ ಎಂಬ ಪದವನ್ನು

ಅಸ್ಪೃಶ್ಯರು,ಅಂತ್ಯದಸಾಯಿಗಳು, ದಸ್ಯು, ಅಥವು ಜನಾಂಗ, ತಿರುಕುಲತ್ತಾರ್, ಪಂಚಮರು,ಬಹಿಷ್ಕೃತರು, ಆದಿಕರ್ನಾಟಕ, ಅದಿ ದ್ರಾವಿಡ ಅನುಸೂಚಿತ, ಪರಿಶಿಷ್ಟ ಜಾತಿ,ಹರಿಜನ ಮುಂತಾಗಿ ಈಪದಕ್ಕೆ ಸಂವಾದಿಯಾಗಿ ಬಳಸಲಾಗುತ್ತಿದೆ,ಅದರೆ ಹರಿಜನ ಎಂಬ ಪದವು ಬಳಕೆಗೆ ಬಂದಿರುವುದು ಗಾಂದಿಜೀಯವರಿಂದಲೇ ಎಂಬ ಮಾತು ಸ್ಪಷ್ಟವಲ್ಲ; ಏಕೆಂದರೆ ೧೭ ನೇಶತಮಾನದಲ್ಲಿದ್ದ ಹರಿದಾಸರು ಅಸ್ಪಶ್ಯರನ್ನು 'ಹರಿಜನ'ರೆಂದು ಕರೆದಿರುವುದು ಉಲ್ಲೇಖನೀಯ ಇತಿಹಾಸದಲ್ಲಿ ಹುದುಗಿಹೋದ ಈ'ಹರಿಜನ'ಪದವನ್ನು ಗಾಂಧೀಜಿಯುವರು ಮತ್ತೆ ಬೆಳಕಿಗೆ ತಂದರು.'ಒಟ್ಟಾರೆಯಾಗಿ ದಲಿತ ಎಂಬ ಪದದ ಅರ್ಥವು ತುಳಿತಕೆ ಒಳಗಾದವ ಶೋಷಣೆಗೆ ಗುರಿಯಾದವ, ಸೋಲಿಸಲಾಗದವ, ಎಂಬುದಾಗಿ ಒಪ್ಪಿಕೊಂಡಿರುವುದು ಕಂಡುಬರುತ್ತದೆ.'ಈ ಪದವು ಪ್ರಗತಿ ಪಂಥದ ಬರಹಗಾರರಲ್ಲ ಬಳಕೆಗೆ ಬಂದರೂ ಪ್ರತೇಕವಾಗಿ ದಲಿತ ಬಂಡಾಯ ಎಂಬ ವೇದಿಕೆ ಕಾಣಿಸಿಕೊಂಡಗ ಎರಡೂ ಪದಗಳು ಒಂದಾಗಿ ಸಾಗಿದ್ದವು ಅದರೆ 'ದಲಿತರು' ಬಂಡಾಯಗಾರರನ್ನು ತೊರೆದು ಬಳಿಕ ಪ್ರತ್ಯೇಕ ಸ್ಥಾನವನ್ನು ಪಡೆಯಲು ಯತ್ನಿಸಿ ಸಫಲರಾಗಿ ದಲಿತ ಸಾಹಿತ್ಯ ಎಂದು ಗುರುತಿಕೊಂಡರು.

ದಲಿತ ಎಂಬ ಪದವು ಪ್ರಾಚೀನದಲ್ಲಿ ಅಸ್ಪೃಶ್ಯರು ಎಮಭುದಾಗಿ ಬಳಸಲ್ಪಟರಡ .ಶಾಸನವೊಂದರಲ್ಲಿ 'ಮಾದಿಗ, ಎಂಬುದಾಗಿ ಪ್ರಸ್ತಾಪವಾಗಿರುವುದು ಕಾಣಸಿಗುತ್ತದೆ.ಆದರೆ ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ 'ದಲಿತ ಸಾಹಿತ್ಯವು 'ತುಂಬಾ ಚರ್ಚೆಗೊಳಗಾಯಿತು. ಈ ಸಾಹಿತ್ಯವು ಮೊದಲಿಗೆ ಮರಾಠಿಯಲ್ಲಿ ಆರಂಭವಾಗಿ ಒಂದು ಸ್ಥಾನ ಪಡೆದ ನಂತರ ೭೦-೮೦ ರ ದಶಕದಲ್ಲಿ ಕರ್ನಾಟಕದಲ್ಲಿ ಬೆಳೆದು ಬಂದ ಬಗ್ಗೆ ಪುರಾವೆಗಳಿವೆ. ಆದರೂ ಅಂಬೇಡ್ಕರು ಹುಟ್ಟುವುದಕ್ಕಿಂತ ಪೂರ್ವದಲ್ಲಿ ಮರಾಠಿ ದಲಿತ ಲೇಖಕರು ತಮ್ಮನ್ನು ದಲಿತ ಸಾಹಿತಿಗಳೆಂದು ಗುರುತಿಸಿಕೊಳ್ಳಲು ಹಿಂಜರಿದರು, ಆದರೆ ಅಂಬೇಡ್ಕರರ ಮಾನವೀಯ ಚಿಂತನೆಗಳು ಆಸ್ಪೃಶ್ಯತೆ ವಿರುದ್ದ ಜರುಗಿದ ಹೋರಾಟಗಳು ಆಧುನಿಕ ಶಿಕ್ಷಣ ಹಾಗೂ ಆಫ್ರಿಕಾದ ಕಪ್ಪು ಸಾಹಿತ್ಯದ ಪ್ರಭಾವ ಇವುಗಳಿಂದ ಮಹಾರಾಷ್ಟ್ರ ಸಾಹಿತ್ಯದಲ್ಲಿ ಬಹಳಷ್ಟು ಮಾರ್ಪಾಡುಗಳಾದವು ಎಂಬುದು ಸರಜೂ ಕಾಟ್ಕರ್ ರವರ ಅಭಿಪ್ರಾಯವಾಗಿದೆ.1(ಡಾ. ಸರಜೂ ಕಾಟ್ಕರ್.ಪು೪೧) ಅಂದಿನಿಂದ ದಲಿತ ಸಾಹಿತ್ಯದಲ್ಲಿ ಅಭಿಮಾನವು ಹೆಚ್ಚಾಯಿತು. ತಾವು ಪಡುವ ನೋವುಗಳಿಗೆ ಪರಿಹಾರ ಕಂಡುಕೊಳ್ಳಲು ನ್ಯಾಯಕ್ಕೆ ಮೊರೆಹೋಗಿ ನ್ಯಾಯನ್ಯಾಯ ಪಡೆದುಕೊಳ್ಳುವ ಉತ್ಸಹವು ಅಧಿಕವಾಯಿತು. ಇದರಿಂದ ದಲಿತ ಸಾಹಿತ್ಯ ಸಂಘ.ದಲಿತ ಸಾಹಿತಿಗಳ ಸಮವೇಶಗಳು ೧೯೪೮ ಮತ್ತು ೧೯೫೩ರಲ್ಲಿ ಜರುಗುದರಿಂದ ದಲಿತ ಪದ ಪ್ರಯೋಗಕ್ಕೆ ಬಂದಿತು .ಅಲ್ಲದೆ ೧೯೫೮ರ ಮಾರ್ಚ್ ೮ರಂದು ಮಾತಾನಾಡಿ ಈಜಗತ್ತು "ಆದಿಶೇಷನ ಮಸ್ತಕದ ಮೇಲೆ ನಿಂತಿಲ್ಲ .ದಲಿತರ ಅಂಗೈ ಮೇಲೆ ನಿಂತಿದೆ" ಎಂದು ತಿಳಿಸಿದರು. ಆ ಸಂಕಿರಣದಲ್ಲಿ ದಲಿತ ಸಾಹಿತ್ಯಕಲ್ಕೆ ವಿಶ್ವವಿದ್ಯಾಲಯಗಳು ಪ್ರೋತ್ಸಹವನ್ನುನೀಡಬೇಕೆಂಬ ತೀರ್ಮಾನ ಕೈಗೊಳ್ಳಲಾಯಿತು.ಅಂದಿನಿಂದಲೇ ವಿವಿಧ ಸಂಘಟನೆಗಳು ಸ್ಥಾಪನೆಗೊಂಡು ದಲಿತರ ಪ್ರಗತಿಗಾಗಿ ಶ್ರಮಿಸುತ್ತಿವೆ ಎನ್ನಬಹುದು.

## ದಲಿತ ಪದದ ಪ್ರಾಚೀನತೆ

'ದಲಿತ' ಪದ ತೀರಾ ಇತ್ತೀಚಿಗೆ ಚಾಲ್ತಿಯಲ್ಲಿದ್ದರೂ ಸಹ ಅಸ್ಪೃಶ್ಯರು, ಮುಟ್ಟಿಸಿಕೊಳ್ಳಲಾರದವರು ಎಂಬ ಅರ್ಥಪಡೆದು ಒಂದು ವರ್ಗವು ಪುರೋಹಿತಶಾಹಿ ವರ್ಗದ ದಬ್ಬಾಳಿಕೆಗೆ ತುತ್ತಾಗಿ, ಯಾತನಾಮಯ ಜೀವನ ಸಾಗಿಸುತ್ತಿತ್ತು ಎಂಬುದು ಗಮನಾರ್ಹ. ಇದಕ್ಕೆ ವೇದಗಳು, ಪೂರಾಣಗಳಲ್ಲಿ ಅಸ್ಪೃಶ್ಯರ ಉಲ್ಲೇಖವಾಗಿರುವುದು ಕಂಡುಬರುತ್ತದೆ. ಪುರೋಹಿತರು ದರ್ಪದಿಂದ ಅಸ್ಪೃಶ್ಯರಿಗೆ  ನೀಡುವ ಹಿಂಸೆಯ ಪರಮಾವಧಿಯು ಕ್ರೂರವಾದುದಾಗಿದೆ. ಬಹುತೇಕವಾಗಿ ಮೂರು ವರ್ಗದವರಾದ ಬ್ರಾಹ್ಮಣ,ಕ್ಷತ್ರಿಯ,ವೈಶ್ಯ ಜನವರ್ಗದವರ ಹಿಂಸೆಗೆ ಗುರಿಯಾದವರೇ ಈಅಸ್ಪೃಶ್ಯರಾಗಿದ್ದಾರೆಂದು ತಿಳಿದು ಬರುತ್ತದೆ.

ಈ ಅಸ್ಪೃಶ್ಯರೇ ಭಾರತದ ಮೂಲನಿವಾಸಿಗಳಾದ ದ್ರಾವಿಡರೆಂಬುದು ಚರಿತ್ರೆಯಿಂದ ತಿಳಿದುಬರುತ್ತದೆ. ಅರ್ಯರು ಭಾರತಕ್ಕೆ ಬರುವ ಮುಚಿಂತವಾಗಿ ಇಲ್ಲಿ ಜೀವನ ಸಾಗಿಸುತ್ತಿದ್ದ ಅರ್ಯರು ಭಾರತಕ್ಕೆ ಬರುವ ಮುಂಚಿತವಾಗಿ ಇಲ್ಲಿ ಜೀವನ ಸಾಗಿಸುತ್ತಿದ್ದ ದ್ರಾವಿಡರೇ ಅಸ್ಪೃಶ್ಯರು ಅರ್ಯರ ಯಜಮಾನ್ಯ ಸಂಸ್ಕೃತಿಯು ಅಸ್ಪೃಶ್ಯರ ಮೇಲೆ ಹೇರಲ್ಪಟ್ಟಾಗ ಆಗಲೇ ಈಜನವರ್ಗವು ತಿರಸ್ಕರಿಸಿತು. ಅಂದಿನಿಂದಲೆ ಈ ಎರಡು ಜಾತಿಗಳು ಸಂಘರ್ಷಕ್ಕೆ ಇಳಿದವು ಆರ್ಯರಲ್ಲಿರುವ ದನಕರುಗಳನ್ನು ಹೆಂಗಸರನ್ನು ಈ ಮೂಲ ನಿವಾಸಿಗಳು ದೋಚುತ್ತಿದ್ದರು . ಕಾಲಕ್ರಮೇಣ ಆರ್ಯರೇ ಬಲಿಷ್ಟರಾಗತೊಡಗಿದರು. ಅಸ್ಪೃಶ್ಯರನ್ನು ತಮ್ಮ ಹತೋಟಿಯಲ್ಲಿರಿಸಿಕೊಂಡರು. ಅವರಿಂದ ಅನೇಕಹೀನಯವಾದ ಕೆಲಸಗಳನ್ನು ಮಾಡಿಸುತ್ತಾ ತಮ್ಮಿಂದ ದೂರವಿಡುವಲ್ಲಿ ಯಶಸ್ವಿಯಾದರು. ಈ ಜನವರ್ಗದ ಗುಂಪೆ ಅಸ್ಪೃಶ್ಯರಾದರು.

## ಪ್ರಾಚೀನ ಸಾಹಿತ್ಯದಲ್ಲಿ ಅಸ್ಪೃಶ್ಯತೆ ಪರಿಕಲ್ಪನೆ

ಕೃತಯುಗದಲ್ಲಿ ಒಂದೇ ವರ್ಗವಿರಬೇಕು. ಅಲ್ಲಿ ಬ್ರಾಹ್ಮಣನೋ ಇಲ್ಲವೆ ಚಂಡಾಲ ಅಥವಾ ಶೂದ್ರನೋ ಇರಬೇಕೆಂದು ತಿದುಬರುತ್ತದೆ.

ಮಾಂದಾಕ್ಯ ಚಕ್ರವರ್ತಿಗೆ ಯವನರನ್ನು ಅರ್ಯಸಮಾಜಕ್ಕೆ ಸೇರಿಸಿಕೊಳ್ಳುವಂತೆ ಇಂದ್ರನೆ ಹೇಳುತ್ತಾನೆ (ಯಲ್ಲಪ್ಪ ಬೂತಯ್ಯ ಸು.೩ ) ವೇದಗಳ ಕಾಲದಲ್ಲಿ ಆರ್ಯ ಮತ್ತು ದಾಸ ಜನರೆಂಬ ಎರಡೇ ವರ್ಗಗಳಿದ್ದವು.ಆಯಾ ವ್ಯಕ್ತಿಗಳ ಶ್ರೇಷ್ಟತೆಯು ಅವರ ಸಾಧನೆ ಗುಣ ಮತ್ತು ಮಾಡುವ ಕಾರ್ಯದಿಂದಲೇ ನಿರ್ಧರಿಸಬೇಕೆ ಹೊರತು ಆತನ ಜನ್ಮದಿಂದಲ್ಲ ಎಂದು ಪ್ರಸ್ತುತಪಡಿಸುವ ಶ್ಲೋಕವನ್ನು ಕಾಣಬಹುದು.

ಕರ್ಮಭಿಃ ಶುಚಿ ಭಿರ್ದೇವಿ ಶದ್ಧಾತ್ಮ ವಿಜಿತೇಂದ್ರಿಯಃ

ಶೂದ್ರೋಪಿ ದ್ವಜವತ್ಸೇವ್ಯಃ ಇತಿಬ್ರಹ್ಮಾ ಬ್ರವೀತ್ಸಯಂ (ಮಹಾಭಾರತ)

ಅಂತೇಯ ಕುಲದಿಂದ ಜಾತಿಯಿಂದಾಗಲೀ ಯಾರೇ ಅಗಲಿ ಬ್ರಾಹ್ಮಣರಾಗುವುದಿಲ್ಲ. ಉತ್ತಮ ನಡೆತೆಯುಳ್ಳ ಚಂಡಾಲನು ಬ್ರಾಹ್ಮಣನೆಂದೆ ತಿಳಿಯಬೇಕೆಜಂದು ಶ್ರೀಕೃಷ್ಣನು ಅರ್ಜುನನಿಗೆ

ಉಪದೇಶದ ಮೂಲಕ ತಿಳಿಸಿದ್ದಾನೆ. ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ ಎಂದಿದ್ದಾರೆ. (ಭಗವದ್ಗೀತೆ) ಇದರಿಂದ ಆಗ ವರ್ಣ ವಿಭಜನೆಗೆ ಜನ್ಮಪ್ರಧಾನವಲ್ಲವೆಂದು ತಿಳಿಯುತ್ತದೆ.

ಋಗ್ವೇದದ ಕೊನೆಯ ಮಂಡಲದಲ್ಲಿ ಬ್ರಾಹ್ಮಣ,ಕ್ಷತ್ರಿಯ,ವೈಶ್ಯ, ಶೂದ್ರ ಎಂಬ ವರ್ಗವು ಬಳಕೆಯಲ್ಲಿದ್ದವೆಂದು ಪ್ರಸ್ತಪವಾಗಿದೆ. ಆದರೆ ಇದು ಋಗ್ವೇದದ ಆರಂಭಕಾಲದಲ್ಲಿ ಇರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಶತಪಥ ಬ್ರಾಹ್ಮಣ ಶ್ರೇಷ್ಠರಾಜ ಆಳುವುದು, ಬ್ರಾಹ್ಮಣ ಕೊಟ್ಟವ ಅಧಿಕಾರದಿಂದ ಎಂದು ತಿಳಿಯುತ್ತದೆ (ಋಗ್ವೇದ ಸಂಹಿತೆ ೯ ೧೧೨ )ಅಲ್ಲದೆ ಯರ್ಜುವೇದದಲ್ಲಿ ಬ್ರಾಹ್ಮಣನ ಪ್ರತಿಷ್ಠೆ ಗರಿಮೆಯ ಬಗ್ಗೆ ತಿಳಿಸುತ್ತದೆ..ಶೂದ್ರ ಹೆಣ್ಣು ಕೇವಲ ಬೋಗದ ವಸ್ತುವಾಗಿಯೇ ಹೊರತು ಉದಾತ್ತ ಕಾರ್ಯಕ್ಕಲ್ಲ ಎಂಬ ಆಶಯ ಶತಪಥ ಬ್ರಾಹ್ಮಣದಿಂದ ತಿಳಿಯುತ್ತದೆ.

ಯರ್ಜುವೇದದಲ್ಲಿ ನಾಲ್ಕು ವರ್ಗಗಳ ಜನರು ಯಾವ ಯಾವ ಸ್ಥಾನಗಳಿಂದ ಜನಿಸಿದರೆಂಬುದಕ್ಕೆ ಶ್ಲೋಕವೊಂದನ್ನು ನೋಡಬಹುದು

ಬ್ರಾಹ್ಮಣಶಸ್ಯ ಮುಕಮಾಸೀತ್ ಬಾಹು ರಾಜನ್ಯಃಶೃತಃ ।

ಊರು ತದ ಸ್ಯಯದೇ ವೈಶ್ಯಃ ಪದ್ಬಾಂಶೂದ್ರೋ ಅಜಾಯತ್॥

(ಯಜುರ್ವೇದ ೩೧-೧೧)

ಬ್ರಾಹ್ಮಣನು ಮುಖದಿಂದ, ಕ್ಷತ್ರಿಯನು ಬಾಹುಗಳಿಂದ ವೈಶ್ಯತೊಡೆಯಿಂದ ಮತ್ತು ಶೂದ್ರ ಪಾದದ ಮೂಲಕ ಜನಿಸಿರಬೇಕೆಂದು ಈಶ್ಲೋಕದಿಂದ ತಿಳಿದು ಬರುತ್ತದೆ.

ಯರ್ಜುವೇದದ ನಂತರ ಕೃತಿಗಳಲ್ಲಿ ಪ್ರತಿಲೋಮ ವಿವಾಹದ ಪ್ರಸಂಗವೊಂದನ್ನು ತಿಳಿಸಲು ಸ್ಪಷ್ಟಪಡಿಸುತ್ತದೆ. ಶೂದ್ರತಂದೆಯೊಬ್ಬನಿಗೆ ಬ್ರಾಹ್ಮಣ ತಾಯಿ ಜನಿಸಿದ್ದಕ್ಕೆ ಚಂಡಾಲರೆಂಬ ಪದ ಬಳಕೆಯಾಗಿರುವುದು ಸ್ಪಷ್ಟ. ಈ ಚಂಡಾಲರೊಂದಿಗೆ ಅಂತ್ಯ ವಸಾಹಿಗಳೆಂಬ ಮತ್ತೊಂದು ವರ್ಗವಿತ್ತು. ಅದರೂ ನಿಷಾದ ಹೆಣ್ಣಿಗೆ ಚಾಂಡಾಲ ಗಂಡನಿಂದ ಹುಟ್ಟಿದವರೆಂದು ವೇದೋತ್ತರ ಯುಗದ ಬ್ರಾಹ್ಮಣ್ಯಗಳು ತಿಳಿಸುತ್ತವೆ. ಈ ಅಂತ್ಯಾವಸಾಹಿಗಳೆ ಅಸ್ಪೃಶ್ಯರಾಗಿರಬೇಕು.

ಐತರೇಯ ಬ್ರಾಹ್ಮದಲ್ಲಿ ದಾಸಿಯಾಗಿದ್ದ ಇಲೂಷಳ ಮಗನಾದ ಕವಷನು ಬ್ರಾಹ್ಮಣ ಪೂರೋಹಿತನಾಗಿದ್ದಾನೆಂದು ತಿಳಿದು ಬರುತ್ತದೆ. ಪತಂಜಲಿಯು ಅರಸರಾಗಿದ್ದ ಬ್ರಾಹ್ಮಣರ ವಿವರಣೆ ಕೊಟ್ಟಿದ್ದರೆ, ಮನುವು ಶೂದ್ರರಾದ ರಾಜರುಗಳನ್ನು ಕುರಿತು ತಿಳಿಸುತ್ತಾನೆ.ನಂದರು, ಮೌರ್ಯರು ಮತ್ತು ಗುಪ್ತರು ಕ್ಷತ್ರಿಯರಲ್ಲದಿಂದರೂ ಸಾಮ್ರಾಜ್ಯವನ್ನು ಸ್ಥಾಪಿಸಿ ರಾಜ್ಯಾಡಳಿತ ನಡೆಸಿದರೆಂಬುದಕ್ಕೆ ಚರಿತ್ರೆ ದಾಖಲೇ ಒದಗಿಸುತ್ತದೆ. ಕ್ರಿ.ಶ.ಸು.೪೦೦ರಲ್ಲಿ ಗೋಹತ್ಯೆಯು ಅಪರಾಧವೆಂದು ಗುಪ್ತ ದೊರೆಗಳು ರಾಜಾಜ್ಞೆಯಿತ್ತರು, ಅಂದಿನಿಂದಲೇ ಅಸ್ಪೃಶ್ಯತೆಯೆಂಬುದು ಚಾಲನೆಗೆ ಬಂದಿರಬೇಕೆಂದು ಡಾ.ಡಿ.ಆರ್.ಭಂಡಾರ್ಯರ್ ಅಭಿಪ್ರಾಯ ಪಡುತ್ತಾರೆ.

ಬೌದ್ಧ ಯುಗದ ನಂತರ ಅಸ್ಪೃಶ್ಯರ ಲಕ್ಷಣಗಳ ಕುರುತಾಗಿ ವಿವರಣೆ

ಕಾಣಸಿಗುತ್ತದೆ.ಬ್ರಾಹ್ಮಣನನ್ನು ಕೊಂದವನು ಚಂಡಾಲ ಸಮಾನ, ಈಚಂಡಾಲರು ಊರಿನ ಹೋರಗಡೆಯದ್ದು ವಾಸ ಮಾಡಬೇಕೆಂದು ಬೌದ್ಧ ಯುಗದ ಈಚಿನ ಗ್ರಂಥಗಳಲ್ಲಿ ತಿಳಿಸಲಾಗಿದೆ. ಈಅಸ್ಪೃಶ್ಯತೆಯೂ ಸಮಾಜದಿಂದ ತೊಡೆದುಹಾಕಲು ಸಾಧ್ಯವಾಗಿಲ್ಲದಿರುವುದಕ್ಕೆ ತನ್ನದೇಆದ ಮೂಲವನ್ನು ಒಳಗೊಂಡಿದೆ.

ಇದು ಜಾತಿವ್ಯವಸ್ಥೆಯ ಅವಿಭಾಜ್ಯಅಂಗವಾಗಿ ಬೇಲೇದು ಬರುವುದರೊಂದಿಗೆ ಕ್ರಿ.ಪೂ.೩ ನೆಯ ಶತಮಾನದಿಂದಲೂ ಆಚರಣೆಯಲ್ಲಿತ್ತು ಇದರಿಂದ ಭಾರತದಲ್ಲಿ ಮೊತ್ತ ಮೊದಲಿಗೆ ಅಸ್ಪೃಶ್ಯರ ಪರವಾಗಿ ಹೋರಾಟ ಮಾಡಿದವರಲ್ಲಿ ಗೌತಮ ಬುದ್ಧನೇ ಪ್ರಮುಖ ವ್ಯಕ್ತಿಯಾಗಿ ಕಾಣಸಿಗುತ್ತಾನೆ.

ಮಧ್ಯಕಾಲಿನ ಯುಗದಲ್ಲಿ ಬಸವಣ್ಣನಂಥ ಸಮಾಜಸುಧಾರಕರು ಕೈಗೊಂಡ ಚಳುವಳಿಯ ಜಾತಿಬಂಧನ ಸಂಕೋಲೆಯನ್ನು ಹೊಡೆಯುವಲ್ಲಿ ಪ್ರಮುಖ ಪಾತ್ರವಹಿಸದ್ದರು. ಬ್ರಾಹ್ಮಣನಾಗಿ ಹುಟ್ಟಿದ ಬಸವಣ್ಣ, ಬ್ರಾಹ್ಮಣರ ವಿರುದ್ಧ ಸೆಡ್ಡು ಹೊಡೆದು ನಿಂತು ಆ ಕಾಲದ ಸಾಮಾಜಿಕ ಧಾರ್ಮಿಕ ಚಳುವಳಿಗೆ ಒಂದು ಸಂಘಟನೆ ರೂಪಿಸಿ ತಳಪಾಯ ಹಾಕಿಕೊಟ್ಟನು ಎಂಬುದರಲ್ಲಿ ಸಂದೇಹವಿಲ್ಲ ಸವಾಜದ ಕೆಳಸ್ತರದ ಜನವರ್ಗವನ್ನು ತನ್ನ ಸಂಘಟನೆಯಲ್ಲಿ ಒಗ್ಗೂಡಿಸಿಕೊಂಡಿರುವುದು ಗಮನಾರ್ಹ. ಇಷ್ಟಲ್ಲದೆ ತಲತಲಾಂತರದಿಂದಲೂ ಶಿಕ್ಷಣದಿಂದ ವಂಚಿತವಾಗಿದ್ದ ಜನಸಮುಹಕ್ಕೆ ಅಕ್ಷರಜ್ಞಾನ ಉಂಟು ಮಾಡಿದ್ದರಲ್ಲದೆ,ತಮ್ಮ ಸಮಸ್ಯೆಗಳ ವಿರುದ್ಧ ಪ್ರತಿಕ್ರಿಯಿಸಲು ಹಾಗೂ ಸಾಹಿತ್ಯ ರಚನೆಗೆ ನೀಡಿದ ನೆರವು ಐತಿಹಾಸಿಕವಾಗಿ ಮಹತ್ವದ್ದಾಗಿದೆ.ಬಸವಣ್ಣ ಮಾಡಿದ ಆಗಿನ ಸುಧಾರಣೆಗಳೆಂದರೆ ಅಂತರ್ ಜಾತಿ ವಿವಾಹ, ಸಹಪಂಕ್ತಿ ಬೋಜನ, ಕಾಯಕ ನಿಷ್ಠೆ, ಸಂಪತ್ತಿನ ಕ್ರೂಡಿಕರಣ ಸ್ತ್ರೀ ಸಮಾನತೆ ದಲಿತರಲ್ಲಿ ಹೊಸ ಅರಿವು ಚೈತನ್ಯಗಳನ್ನು ನೀಡಿದವು .

ಹರಿಹರ ತನ್ನ ಕಾವ್ಯದಲ್ಲಿ ನಾಯಕರು ಕೆಳವರ್ಗದವರನ್ನೇ ಆಯ್ಕೆ ಮಾಡಿಕೊಂಡು ಸಾಹಿತ್ಯರಚಿಸಿರುವುದು ಕ್ರಾಂತಿಕಾರಿ ಬದಲಾವಣೆಯೇ ಸರಿ ಆನಂತರ ಜನಸಾಮನ್ಯರಲ್ಲಿ ಹುದುಗಿರುವ ಜಾತಿ ಕಲ್ಪನೆಗೆ ಕೊಡಲಿ ಪೆಟ್ಟು ನೀಡಿದವರೆಂದರೆ ದಾಸರು, ಸರ್ವಜ್ಞ ಮುಂತಾದವರನ್ನು ಗುರಿತಿಸಬಹುದಾಗಿದೆ.

ಆಧುನಿಕ ಕಾಲದಲ್ಲಿ ಬ್ರಿಟಿಷರ ಆಳ್ವಿಕೆಯಿಂದಾಗಿ ಚಾಲ್ತಿಯಲ್ಲಿ ಬಂದ ಹೊಸ ಶಿಕ್ಷಣ ನೀತಿಯು ಸಂಪ್ರಾದಾಯಿಕ ಜನಜೀವನದ ಮೇಲೆ ಗುರುತರವಾದಪರಿಣಾಮ ಉಂಟಾಯಿತು. ಕ್ರೈಸ್ತ ಮಿಶನರಿಗಳು ಭಾರತಕ್ಕೆ ಆಗಮಿಸಿ ದಲಿತರ ಪಾಲಿಗೆ ವರಾವಾಗಿ ಪರಿಣಾಮಿಸಿತು. ಕ್ರೈಸ್ತ ಪಾದ್ರಿಗಳು ದಲಿತರ ಶಿಕ್ಷಣಕ್ಕೆ ಹೆಚ್ಚಿನ ಒಲವು ನೀಡಿದರು. ಇಲ್ಲಿನ ಶೋಷಿತ ಜನರ ಬಗ್ಗೆ ಕಾಳಜಿ ವಹಿಸಿ, ಸುಧಾರಣೆ ಮಾಡಿದವರೆಂದರೆ ರಾಜರಾಮ್ ಮೋಹನ್ ರಾಯ್, ಬಾಲಗಂಗಾಧರ ತಿಲಕ್ ರಂಥ ಸಮಾಜಸುಧಾರಕರು ಸಮಾಜದಲ್ಲಿನ ಅನಿಷ್ಟ ಪದ್ಧತಿಗಳ ವಿರುದ್ಧ ಅನೇಕ ಚಳುವಳಿಗಳನ್ನು ಮಾಡಿ ಯಶಸ್ವಿಯಾದರು. ಇಂತಹ ಸಾಮಾಜಿಕ ಸಂಕ್ರಮಣ ಕಾಲದಲ್ಲಿಯೇ ಗಾಂಧಿಜೀಯವರ ಹರಿಜನೋದ್ಧಾರದ ಕಲ್ಪನೆ ಗರಿಗೆದರಿತು. ಆದರೆ ಶೋಷಿತರ

ಪರವಾಗಿ ಹೋರಾಡಿದ ಮತ್ತೊಬ್ಬ ಮಾನವತಾ ವಾದಿಯೆಂದರೆ ಅಂಬೇಡ್ಕರ್. ದಲಿತರ ವರ್ಗದಿಂದಲೇ ಹುಟ್ಟಿ ಬಂದು ಸಾವಿರಾರು ವರುಷಗಳಿಂದಲೂ ಅನುಭವಿಸದವರಾಗಿದ್ದರು .ಶಿಕ್ಷಣ ಪ್ರೇಮಿಯಾಗಿ ,ವಿಚಾರವಾದಿಯಾ, ಸಮಾಜವಾದಿಯಾಗಿ ಶೋಷಿತ ವರ್ಗಗಳ ಪ್ರತಿನಿಧಿಯಾಗಿ ಅಂಬೇಡ್ಕರ್ ದಲಿತರ ಏಳ್ಗೆಗಾಗಿ ಹಲವಾರು ಚಳುವಳಿಗಳನ್ನು ನಡೆಸಿದರಲ್ಲದೆ ಆದಿಕ್ಕಿನಲ್ಲಿ ಯಶಸ್ವಿಯಾದರು.

ಶಾಸನಗಳನ್ನು ಆಸ್ಪೃಶ್ಯರು ;ಸೊರಬ ತಾಲೂಕಿನ ಹನುವಳ್ಳಿ ಗ್ರಾಮದ ಕಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿರುವ ಕಲ್ಲಿಗೆ ಕೆತ್ತಿರುವ ಶಿಲಾಶಾಸನವು ಕ್ರಿ.ಶ.೯೬೪ ರದ್ದು ಎಂದು ತಿಳಿದುಬರುತ್ತದೆ. ಈ ಶಾಸನದ ವಿವರದಲ್ಲಿ ಮಾದಿಗ ಜಾತಿಯವನೊಬ್ಬ ಬ್ರಾಹ್ಮಣನಿಂದ ಗೋವುಗಳನ್ನು ಪಡೆದ ಬಗ್ಗೆ ತಿಳಿಸುತ್ತದೆ.

ಹೀಗೆ ಆರ್ಥಿಕಾವಾಗಿಯೂ, ಸಾಮಾಜಿಕವಾಗಿಯೂ, ಧಾರ್ಮಿಕವಾಗಿಯೂ ಶೋಷಣೆಗೊಳಗಾದ ಆಸ್ಪೃಶ್ಯರೆ 'ದಲಿತ'ರು ಎಂಬ ಮಾತು ಸ್ಪಷ್ಟವಾದ ಬಳಿಕ ಈ ದಲಿತ ಪರ ಅಪಾರ ಕಾಳಜಿಗಳನ್ನು ಇರಿಸಿಕೊಂಡ ಅನೇಕ ವಿದ್ವಾಂಸರು ವ್ಯಾಖ್ಯಾನಗಳನ್ನು ನೀಡಿದ್ದಾರೆ.

**ಈ) ದಲಿತ ಪದದ ವ್ಯಾಖ್ಯಾನಗಳು**

ದಲಿತರು ಯಾರು ಎಂಬ ಬಗ್ಗೆ ವಿವಿಧ ವಿದ್ವಾಂಸರು ತಮ್ಮದೇ ಆದ ವ್ಯಾಖ್ಯಾನಗಳನ್ನು ನೀಡಿದ್ದಾರೆ.

ದಲಿತರು ಯಾರು? ದಲಿತ ಸಾಹಿತ್ಯ ಎಂದರೇನು? ದಲಿತ ಎಂಬ ಪದದ ವಿವರಣೆಯು ತುಂಬಾ ಸುಲಭವಾದುದಲ್ಲ. ಈ ವ್ಯಾಖ್ಯಾನಗಳು ಸಂಕೀರ್ಣವಾದವುಗಳು ಹಾಗೂ ಪರಸ್ಪರ ವಿರೋಧದಿಂದ ಕೂಡಿದವೂ ಆಗಿವೆ. ಈ ಪದವು ಈಗಾಗಲೇ ಚರ್ಚಿತವಾದ್ದರಿಂದ ಅದರ ಬಗೆಗಿನ ವಿಶ್ಲೇಷಣೆಗಳನ್ನು ಈಗ ಪರಿಶೀಲಿಸಬಹುದು. ಯಾರು ಶೋಷಣೆಗೆ ಗುರಿಯಾಗಿರುವರು ಅವರು ಆಯಾಊರಿನ ಕೊನೆಗೆ ವಾಸಿಸುವ ಜನವಸತಿಯನ್ನೇ ದಲಿತರು ಎಂತಲೂ ಕರೆಯಬಹುದಾಗಿದೆ. ಈಮೇಲಿನ ಅರ್ಥವನ್ನೆ ಶ್ರೀಕಲ್ಲೇಶಿವೋತ್ತಮರಾಯರು ಸ್ಪಷ್ಟಪಡಿಸುತ್ತಾರೆ

**ಗಂಗಾಧರ ಪಟವಾಣೆ**: ದಲಿತ ಎನ್ನುದು ಒಂದು ಜಾತಿ ಅಷ್ಟೇ ಅಲ್ಲ ಪ್ರದೇಶದ ಸಂಪ್ರದಾಯದ ಚೌಕಟಿನಲ್ಲಿ ಆರ್ಥಿಕವಾಗಿ, ಸಾಮಾಜಿಕವಾಗಿ ಶೋಷಿಸಲ್ಪಡುವನನ್ನು ದಲಿತರೆನ್ನಬಹುದು ಎಂದಿದ್ದಾರೆ.

**ಜಿ.ಎಸ್. ಶಿವರುದ್ರಪ್ಪ**: ದಲಿತರು ಕೇವಲಶೋಷಿತರಷ್ಟೇ ಅಲ್ಲ.ಶೋಷಣೆಯ ಜೊತೆ ಜೊತೆಗೆ ಅಮಾನವೀಯವಾದ ಹಿಂಸೆ ಕೌರ್ಯಗಳಿಗೆ ಒಳಗಾದವರು.

**ಸಿ.ವೀರಣ್ಣ**: ಎಲ್ಲಾ ಜಾತಿಗಳಲ್ಲಿಯೂ ತುಳಿತಕೆ ಒಳಗಾಗಿರುವವರ ನ್ನೆಲ್ಲಾ ದಲಿತರು ಎಂದುಕರೆಯಬಹುದಾಗಿದೆ.

**ಗಾಂಧಿಜೀ**: ಒಂದು ನಿರ್ದಿಷ್ಟ ಸ್ಥಿಯಲ್ಲಿ ಅಥವಾ ಕುಟುಂಬದಲ್ಲಿ ಹುಟ್ಟಿದ ಕಾರಣಕ್ಕಾಗಿ

ಕೆಲವರುವ್ಯಕ್ತಿಗಳು ಹುಟ್ಟುವುದರಿಂದುಂಟಾಗು 'ಮಾಲಿನ್ಯ'ದ ಬಗ್ಗೆ ಪ್ರಗತಿಪರವಾಗಿ ಚಿಂತನೆ ಮಾಡಿದ್ದಾರೆ.

**ಡಾ.ಅಂಬೇಡ್ಕರ್** :ಭಾರತಕ್ಕೆ ಹೊರಗಿನಿಂದ ಬಂದ ವಿದೇಶಿಯರು ದಮನ ಮಾಡಿದ ದೇಶಿಯ ಜನರೇ ಈಗಿನ ಅಸ್ಪೃಶ್ಯರೆಂದು.ಅವರನ್ನು ಗೆದ್ದವರು ತಮ್ಮ ಕಾವಲುಗಾರರನ್ನಾಗಿ ಮಾಡಿಕೊಂಡುದರ ಪರಿಣಾಮವೇ ಅಸ್ಪೃಶ್ಯತೆಗೇ ಕಾರಣವೆಂಬ ಅಭಿಪ್ರಾಯವಿದೆ.

**ಟಿ.ಎಸ್ ಸತ್ಯನಾಥ:** ದ್ರಾವಿಡರೂ ಕೂಡ ಅರ್ಯರಂತೆ ಬಹುಶಃ ಕ್ರಿ.ಪೂ.೨೦೦೦ದ ವೇಳೆಗೆ ಹೊರದೇಶದಿಂದ ಬಂದವರು. ದ್ರಾವಿಡರಲ್ಲಿ ಜಾತಿವ್ಯವಸ್ಥೆ ಅರ್ಯರ ವಲಸೆಗಿಂತಲು ಮೊದಲೆ ಇತ್ತು ಎಂಬುದಕ್ಕೆ ದಾಖಲೆಗಳಿವೆ. ಎಂದು ಹೇಳಿ ಜಾತಿ ಪದ್ಧತಿ ದ್ರಾವಿಡ ಮೂಲದ್ದು ಅಥವಾ ಆರ್ಯ ದ್ರಾವಿಡರು ಒಟ್ಟಾಗಿ ಕೂಡಿ ಇಲ್ಲೇ ರೂಪಿದ್ದು ಎಂಬ ತೀರ್ಮಾನಕ್ಕೆ ಬರುತ್ತಾರೆ.

**ಕೃಷ್ಣ ಪರಮೇಶ್ವರಭಟ್:** ಅಸ್ಪೃಶ್ಯತೆ ಉಗಮದ ಬಗ್ಗೆ ಬೇರೆ ಕಾರಣವನ್ನು ಊಹಿಸುತ್ತಾರೆ.ಅಸ್ಪೃಶ್ಯರು ದ್ರಾವಿಡರು ಬರುವುದಕ್ಕೆ ಮೊದಲೆ ಇಲ್ಲಿದ್ದರೆಂದು ಗುಡ್ಡಾಗಾಡಿನ ಜನರಿಗಾಗಿಯೇ ಉಳಿದಿಂದಾರೆಂದೂ ದ್ರಾವಿಡರು ಬಂದ ನಂತರದಲ್ಲೂ ದ್ರಾವಿಡರಿಂದ ಹಾಗೂವ್ಯವಸಾಯದಿಂದ ದೂರವೇ ಉಳಿದಿದ್ದರೆಂದೂ ಊಹಿಸಬೇಕಷ್ಟೆಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

**ಡಾ.ಅರವಿಂದ ಮಾಲಗತ್ತಿ :** ಮನುಷ್ಯ ಸಮಾಜದೊಂದಿಗೆ ಬದುಕಲಾಗದೆ ಊರ ಹೊರಗೆ ವಾಸಿಸಿ ಕೀಳು ವೃತ್ತಿಗೆ ಅವಲಂಬಿರಾಗಿ ಹೆಸರು ಹೇಳಿಕೊಳುಲು ನಾಚಿಕೆ ಪಡುವ ಅಸ್ಪೃಶ್ಯರು ಅಥವಾ ಬಹಿಷ್ಕೃತರೆನಿಸಿಕೊಂಡವರೆಲ್ಲ ದಲಿತರೆನಿಸಿಕೊಳ್ಳುತ್ತಾರೆ

**ದೇವಯ್ಯಹರವೆ:** ಅಸ್ಪೃಶ್ಯ ಜನಾಂಕ್ಕೆ ಇಂಡಿಯಾದಾದ್ಯಂತ ಹೊಂದಿಕೆಯಾಗಬುದಾದ ಒಂದೇ ಒಂದು ಪದವೆಂದರೆ'ದಲಿತ' ಮಾತ್ರ ಎಂದು ತಿಳಿಸಿದ್ದಾರೆ.

**ಎಲ್.ಹನುಮಂತಯ್ಯ:** ಸಂಘಟನಾತ್ಮಕ ಹೋರಾಟ ದೃಷ್ಟಿಯಿಂದ ಈ ಪದದ ವ್ಯಾಪ್ತಿಯನ್ನು ದೊಡ್ಡದು ಮಾಡಿ ಆರ್ಥಿಕವಾಗಿ, ಸಾಮಾಜಿಕವಾಗಿ ಶೋಷಿತರಾದೆಲ್ಲ ಜನಾಂಗವನ್ನು ಸೇರಿಸಿದರೂಸಾಹಿತ್ಯಿಕವಾಗಿ ಅಸ್ಪಷ್ಟತೆಯನ್ನು ನಿವಾರಿಸಲು ಅಸ್ಪೃಶ್ಯರು ಮತ್ತು ಇವರಷ್ಟೇ ಶೋಷಣೆಗೆ ಒಳಗಾದ ಕೆಳವರ್ಗದ ಜನರು ದಲಿತರಾಗುತ್ತಾರೆ.

**ಕೆ.ನಾರಾಯಣಸ್ವಾಮಿ:** ಪರಂಪರೆಯಿಂದ ಯಾರನ್ನು ಅಸ್ಪೃಶ್ಯರು ಚಾಂಡಾಲರು.ಪಂಚಮರೆಂದು ಕರೆಯುತ್ತ ಬರಲಾಗಿದೆಯೋ ಅವರೆಲ್ಲ ದಲಿತರು.

**ಪು.ಲ..ದೇಶಪಾಂಡೆ:** ಅನ್ಯಾಯದ ವಿರುದ್ಧ ಪ್ರತಿಭಟಿಸುವ ಶೋಷಣೆಯ ವಿರುದ್ಧ ಹೋರಾಟದ ನೋವು ತಳಮಳಗಳ ಒಂದು ಉದ್ದಾತ್ತ ಸ್ವರೂಪವೇ ದಲಿತ ಸಾಹಿತ್ಯವಾಗುತ್ತದೆ ಎಂದಿದ್ದಾರೆ.

**ಬಾಬುರಾವ್‌ಬಾಗಲೂರ್‌ರವರು :** ಯಾವ ಸಾಹಿತ್ಯ ಅಮ್ಯಕ್ ಪರಿವರ್ತನೆಯು

ಜರೂರಿಯಿಂದ ಕ್ರಾಂತಿಗೆ ಮುಖಿದೋರುವುದೋ ಅದು ದಲಿತ ಸಾಹಿತ್ಯವಾಗುತ್ತದೆ ಎಂದಿದ್ದಾರೆ.

ಮೇಲಿನ ವ್ಯಾಖ್ಯಾನಗಳು ಅಸ್ಪೃಶ್ಯತೆಗೆ ಒಳಗಾದ ಮತ್ತು ಹೀನ ವೃತ್ತಿಗಳಿಗೆ ಅವಲಂಬಿತರನ್ನಾಗಿಸಿದ ಜನಗಳು ಮಾತ್ರ ದಲಿತರೆಂದು ಗುರುತಿಸುವುದು ಗಮನಾರ್ಹ. ಕೀಳರಿಮೆಗೆ ಒಳಗಾದವರಲ್ಲಿ ಬ್ರಾಹ್ಮಣೇತರರೆಲ್ಲರೂ ಸೇರುತ್ತಾರೆಂದು ಇಟ್ಟುಕೊಂಡರೂ ಅವರ ಪರಿಸ್ಥಿತಿಗಳು ಅಸ್ಪೃಶ್ಯರಿಗಿಂತ ಸುದಾರಿತ ಮಟ್ಟದಲ್ಲಿವೆ.

**ಉ) ದಲಿತ ಸಾಹಿತ್ಯ**

ಸಾವಿರಾರು ವರುಷದಿಂದಲೂ ಸಾಮಾಜಿಕವಾಗಿಯೂ, ಆರ್ಥಿಕವಾಗಿಯೂ, ಧಾರ್ಮಿಕವಾಗಿಯೂ ಶೋಷಣೆಗೆ ಗುರಿಯಾಗಿ ಮುಟ್ಟಿಸಿಕೊಳ್ಳಲಾರದೆ ಇರುವ ಅಸ್ಪೃಶ್ಯ ಜನ ಸಮೂಹವೇ ದಲಿತರು ಎನ್ನಬಹುದು. ಈ ದಲಿತರನ್ನುUntouchables ಎಂತಲೂ ಕರೆಯುವರು ಶೋಷಣೆ ಇಂದು ನೆನ್ನೆಯದಲ್ಲ. ಇದು ಜಗತ್ತಿನ ಉದ್ದಗಲಕ್ಕೂ ಹರಡಿದೆ ಎಂಬ ನಿರ್ದಶನಗಳುಂಟು. ಭಾರತದಲ್ಲಿದ್ದ ಅಸ್ಪೃಶ್ಯರ ಸ್ಥಿತಿಗತಿ ಗುಲಾಮ ಪದ್ಧತಿಗಿಂತಲೂ ಹೀನಾಯವಾಗಿತ್ತೆಂಬುದು ಚರಿತ್ರೆಯಿಂದ ತಿಳಿದುಬರುತ್ತದೆ. ದಲಿತರು ಈ ಶೋಷಣೆಯ ಸಂಕೊಲೆಯಿಂದ ಹೊರ ಬರಲು ಪ್ರಯತ್ನಪಟ್ಟದ್ದು ಮಾನವ ಇತಿಹಾಸದುದ್ದಕ್ಕೂ ಪ್ರಯತ್ನಗಳು ನಡೆದಿವೆ. ಇವರ ಪ್ರಗತಿಗಾಗಿ ಶ್ರಮಿಸಿದವರೆಂದರೆ ಸಮಾಜ ಸುಧಾರಕರು, ಧಾರ್ಮಿಕ ಮುಖಂಡರು, ರಾಜಕೀಯ ಮುತ್ಸದ್ದಿಗಳೆಂದು ಗುರುತಿಸಬಹುದು. ಅದರೆ ಸಾಹಿತ್ಯವು ಸಹ ತನ್ನದೇ ಆದ ನಿಟ್ಟಿನಲ್ಲಿ ಪ್ರಮುಖ ಪಾತ್ರವಹಿಸಿದೆ. ಅದರೂ ದಲಿತರನ್ನು ಕೇಂದ್ರವಾಗಿಟ್ಟುಕೊಂಡು ಸಾಹಿತ್ಯ ರಚನೆ ವಿರಳ ಎಂಬ ಮಾತು ಗಮನಾರ್ಹ.

ದಲಿತರನ್ನು ಪ್ರಾಸಂಗಿಕವಾಗಿ ಸಾಹಿತ್ಯದಲ್ಲಿ ಗುರ್ತಿಸಿದವರೆಂದರೆ ವಾಲ್ಮಿಕಿರಾಮಾಯಣ ಕಾವ್ಯದಲ್ಲಿ ವ್ಯಾಸ ಮಹಾಭಾರತ ಕಾವ್ಯದಲ್ಲಿ ದಲಿತ ಸಂವೇದನೆಗಳನ್ನು ಗುರ್ತಿಸಿ ಪ್ರತಿಭಟಿಸಿ ಸೋಲನ್ನು ಅನಿಭವಿಸಿರುವ ಘಟನೆಗಳು ಪ್ರಮುಖ ಪ್ರಮಾಣಗಳೂ ಆಗಿವೆ. ಇವರ ನಂತರ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಪಂಪ, ಬಸವಣ್ಣ, ಹರಿಹರ ರಾಘವಾಂಕರ ಕಾವ್ಯಗಳಲ್ಲಿ ದಲಿತರನ್ನು ಕುರಿತಾದ ಚಿತ್ರಣಗಳನ್ನು ಮನಗಾಣಬಹುದು. ಹರಿಹರ ಕವಿಯು ದಲಿತರನ್ನೇ ತಮ್ಮ ಕಾವ್ಯದ ನಾಯಕನ್ನಾಗಿಸಿಕೊಂಡಿರುವುದು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಅಪೂರ್ವವಾದುದು.

'ದಲಿತ' ಸಾಹಿತ್ಯ ಕುರಿತಾಗಿ ವಿಭಿನ್ನ ವ್ಯಾಖ್ಯಾನಗಳು ಚಾಲ್ತಿಯಲ್ಲಿವೆ. ಅದರೂ ಹಲವಾರು ವರ್ಷದಿಂದಲೂ ಹಿಂಸೆಗೆ ಗುರಿಯಾಗಿ ಮುಟ್ಟಿಸಿಕೊಳ್ಳಲು ಅನರ್ಹರೆಂಬ ಕಟ್ಟುಪಾಡಿಗೆ ಒಳಗಾದ ಅಸ್ಪೃಶ್ಯರೇ ದಲಿತರು ಎಂದು ಈಗಾಗಲೇ ಒಪ್ಪಿತವಾದ ವಿಚಾರ. ಅದರೆ ಈಗಾಗಲೆ ರಚಿತವಾಗಿರುವ ಸಾಹಿತ್ಯದಲ್ಲಿ ಸಮಾಜದ ಕೆಲವೇ ಕಲವು ಜನಗಳ ಭಾವನೆಗಳು ಮಾತ್ರ ದಾಖಲಾಗಿದ್ದು ಬಹುತೇಕ ಕೆಳವರ್ಗದ ಜನಗಳ ಭಾವನೆಗಳು ಅಕ್ಷರ ಮಾಧ್ಯಮದಲ್ಲಿ ದಾಖಲಾಗದೇ ಉಳಿದಿದ್ದು, ಅಂತಹ ಅಕ್ಷರ ಮಾಧ್ಯಮಕ್ಕೆ ವಂಚಿತವಾದ ಜನಗಳ ಬದುಕು ಸಾಹಿತ್ಯದಲ್ಲಿ ದಾಖಲಾಗಬೇಕೆಂಬ ಒತ್ತಾಸೆಯೊಂದಿಗೆ ದಲಿತ ಸಾಹಿತ್ಯ ಉಗಮವಾಯಿತು.

### ಊ) ದಲಿತ ಸಾಹಿತ್ಯದ ಉದ್ದೇಶ

ದಲಿತಸಾಹಿತ್ಯವು ತುಳಿಯಲ್ಪಟ್ಟವರ ಮನಸ್ಸಿನಲ್ಲಿರುವ ಕ್ರೋದವನ್ನು ವ್ಯಕ್ತಪಡಿಸುವ ಸಿಟ್ಟಿನ ಸಾಹಿತ್ಯ. ಅದರೆ ಸಾಹಿತ್ಯವು ಮನುಷ್ಯನಿಗೆ ಅರ್ಥವಾಗದಂತೆ ರಚನೆಯಾಗಿರಬಾರದು. ಮೇಲ್ಜಾತಿಯ ಖಾಸಗಿ ಸೊತ್ತು ಆಗಬಾರದು. ಸಂಪ್ರದಾಯವಾದಿಗಳಾದ ಮಡಿವಂತಿಕೆ ಸಾಹಿತಿಗಳು ಹೆಚ್ಚಾಗಿ ಕೇಲವೆ ಕೆಲವು ವಿಷಯಗಳ ಮೇಲೆ ಸಾಹಿತ್ಯ ರಚನೆಗೆ ತೊಡಗಿರುವುದು ಸ್ವಷ್ಪ. ದೇವರು, ಮತ ಧರ್ಮ, ವೇದ, ಪುರಾಣ, ರಾಜರ ಜೀವನ ವಿಧಾನ, ಸ್ವಾತಂತ್ರ್ಯ ಚಳುವಳಿಗಾರರ ಬವಣೆ, ಪ್ರಾಕೃತಿಕ ಸೌಂದರ್ಯ, ಸ್ತ್ರೀಯರ ಸೌಂದರ್ಯದ ಬಗ್ಗೆ ಕೃತಿಗಳಲ್ಲಿ ಬಳಸಿರುವುದು ಕಂಡುಬರುತ್ತದೆ. ಅದರೆ ಮನುಷ್ಯನ ನೋವಿನ ಬಗ್ಗೆ ಬರೆದಿರುವ ಸಾಹಿತ್ಯಗಳು ಅತ್ಯಲ್ಪ ಎಂಬುದಂತೂ ಸತ್ಯ.

ದಲಿತಸಾಹಿತಿಯು ಭಾಷೆಯ ಬಳಕೆಯಲ್ಲಿ ಜಾತಿಪದ್ಧತಿಯನ್ನು ವ್ಯಕ್ತಪಡಿಸುತ್ತಾನೆ ಎಂದು ಮರಾಠಿ ಸಾಹಿತಿ ಪು.ಲ.ದೇಶಪಾಂಡೆಯವರು ಅಭಿಪ್ರಾಯಪಟ್ಟಿದ್ದಾರೆ "ಸಾವಿರಾರು ವರ್ಷಗಳಿಂದ ಮೂಕವಾಗಿದ್ದ ಜನಾಂಗವೊಂದು ನಿಧಾನವಾಗಿ ಮೈಕೊಡವಿಕೊಂಡು ಎದ್ದು ಮಾತಾಡಲಾರಂಭಿದ್ದೇ ಕನ್ನಡ ಸಾಹಿತ್ಯದಸಂದರ್ಭದಲ್ಲಿ. ಅಲ್ಲಿ ಅದು ಹೊಸ ಅಲೆಯನ್ನು ಎಬ್ಬಿಸಿರುವುದು ಚಾರಿತ್ರಿಕ ಸತ್ಯವಾಗಿದೆ" ಎಂಬ ಮಾತು ಸ್ವಷ್ಪವಾಗಿದೆ. (ಯು.ರಾಘವೇಂದ್ರರಾವ್.ಪು೨)ಕಾಲಗಳು ಉರುಳಿದಂತೆಲ್ಲಾ ನಮ್ಮ ನಮ್ಮಲ್ಲಿ ಹುದುಗಿರುವ ಮನಸ್ಸುಗಳು ಬದಲಾಗಬೇಕಾದ ಅನಿವಾರ್ಯ ಸ್ಥಿತಿ ನಿರ್ಮಾಣವಾಗಿದೆ." ದಲಿತರ ಸಾಹಿತ್ಯವನ್ನು ಅಸಹ್ಯ ಎಂದು ಎಲ್ಲಿಯವರೆಗೆ ಕರೆಯುವುದನ್ನು ಬಿಡುತ್ತೇವೆಯೋ ಅಲ್ಲಿಯವರೆಗೆ ದೇಶದಲ್ಲಿ ಸ್ವತಂತ್ರವಾದ ಸಾಹಿತ್ಯ ಹುಟ್ಟಲು ಸಾದ್ಯವಿಲ್ಲ ಎಂದು ಹೇಳಿದ ಪು.ಲ..ದೇಶಪಾಂಡೆಯವರ ಮಾತು ಸ್ವಷ್ಪವಾಗಿದೆ.



ದಲಿತರ ಪರಂಪರೆಯ ಸಾಹಿತ್ಯವನ್ನು ವಾಸ್ತವಿಕ ನೆಲಗಟ್ಟಿನಲ್ಲಿ ನಿಂತು ನೋಡುವ ಅರ್ಥೈಸುವ ವಿಮರ್ಶಿಸುವ ಕೆಲಸ ಮಾಡಿದ್ದಾರೆ, ಮಾಡುತ್ತಿದ್ದಾರೆ. ಇದು ದಲಿತ ಸಾಹಿತ್ಯ ಪರಂಪರೆಗೆ ನೀಡಿದ ಕೊಡುಗೆ ಎನ್ನಬಹುದು. ಆಯಾ ಪರಂಪರೆಗೆ ಸ್ಥಾನವನ್ನು ನೀಡುವ ಕಾರ್ಯವು ತುಂಬಾ ಉದಾತ್ತವಾದುದಾಗಿದೆ. ತಮ್ಮ ತನವನ್ನು ಕಂಡುಕೊಳ್ಳುವುದು ಎಂದರೆ. ಆ ಸಾಹಿತ್ಯದ ಆಕರ ಸಾಮಾಗ್ರಿಯಿಂದಲೇ ತಮ್ಮ ಪೂರ್ವದ ಇತಿಹಾಸವನ್ನು ಕಟ್ಟುವ ಕ್ರಿಯೆಗೆ ಬಳಸುವುದಾಗಿದೆ. ಈ ರೀತಿ ಮಾಡಿದಾಗ ಮಾತ್ರ ಪರಂಪರೆಯನ್ನು ಗೌರವಿಸಿದಂತಾಗುತ್ತದೆ. ಇದಕ್ಕೆ ಪೂರಕವಾಗಿ ಬರುವ ಮತ್ತೊಂದು ಅಂಶವೆಂದರೆ ಪ್ರತಿ ಸಮಾಜದ ಹುಟ್ಟುವಿಕೆ ಮತ್ತು ಅದರಹುಡುಕಾಟದ ವಿಚಾರವು ಪ್ರಮುಖವಾಗಿದೆ ಇದರಿಂದಲೇ ಮೂಲ ಸಂಸ್ಕೃತಿಯ ಹುಡುಕಾಟ, ಇತಿಹಾಸವನ್ನು ಕಟ್ಟುವ ಕ್ರಿಯೆ ಇವೆಲ್ಲವು ಹೊಸ ಸಮಾಜದ ಕನಸುಗಾರಿಕೆಗೆ ಅಡಿಪಾಯವಾಗಿದೆ. ದಲಿತ ಸಾಹಿತ್ಯ ನವ್ಯರ ಮಣ್ಣಿನ ವಾಸನೆಯನ್ನು ಹಿಡಿದುಕೊಡುವಲ್ಲಿ ಯಶಸ್ವಿಯಾಯಿತು. ಯಾವುದು ತನ್ನ ದಮನಕ್ಕೆ ಕಾರಣೀಭೂತವಾಗಿತ್ತೋ ಅದರ ವಿರುದ್ಧ ಅಕ್ಷರಗಳಲ್ಲಿ ಸಮರ ಸಾಧಿಸಲು ಸಜ್ಜಾಯಿತು. ಆ ದಮನದಿಂದ ತಾನು ಬಿಡುಗಡೆ

ಹೊಂದಬೇಕಿರುವ ಅನಿವಾರ್ಯತೆಗಳನ್ನು ತನ್ನ ಅಭಿವ್ಯಕ್ತಿಯಲ್ಲಿ ಮೂಡಿಸಿತು.

ಈ ರೀತಿ ದಮನಕ್ಕೆ ಒಳಗಾದ ಜನಸಮುದಾಯ ಇಷ್ಟೊಂದು ಬೃಹತ್ ಪ್ರಮಾಣದಲ್ಲಿ ಸಾಹಿತ್ಯದ ಬಳಿಕ ಇದೇ ಮೊದಲು ಎನ್ನಬಹುದು. ಸಾಮಾಜಿಕವಾಗಿ ಸಂಘರ್ಷದ ಮೂಲಕ ಕೆಳ ಜಾತಿಗಳು ಮಾತನಾಡಲು ಧೈರ್ಯ ತುಂಬಿರುವುದು ಆ ಸಾಹಿತ್ಯದ ಕೃತಿಕಾರರು ಎಂಬುದರಲ್ಲಿ ಸಂಶಯವಿಲ್ಲ .

ಇಷ್ಟಾದರೂ ದಲಿತ ಸಾಹಿತ್ಯ ಪೂರ್ಣಪ್ರಮಾಣದಲ್ಲಿ ರಚನೆಯಾಗಿಲ್ಲ. ಸೃಜನ ಕ್ರಿಯೆಯಲ್ಲಿ ಹೊಸ ಹೊಸ ವಿಚಾರಗಳ ಹೊಸ ಅನುಭವ ನೀಡಬಲ್ಲ ಬರಹಗಾರರು ಬರಬೇಕಾಗಿದೆ ಎಂಬ ನಿಲುವು ಸ್ಪಷ್ಟ.. ಹೀಗಾದಾಗ ಮಾತ್ರ ಕನ್ನಡ ದಲಿತ ಸಾಹಿತ್ಯವು ಮತ್ತುಷ್ಟು ಶ್ರೀಮಂತವಾಗುತ್ತದೆ.

## ದಲಿತ ಸಾಹಿತ್ಯದ ಸ್ವರೂಪ

### ದಲಿತ ಸಾಹಿತ್ಯ, ದಲಿತೇಯ ಸಾಹಿತ್ಯ, ಅಂಶಿಕ ದಲಿತ ಸಾಹಿತ್ಯ

**ದಲಿತ ಸಾಹಿತ್ಯ:** ಪ್ರಗತಿಪರ ದಲಿತೇತರರು ದಲಿತ ಪ್ರಜ್ಞೆಯಿಂದ ದಲಿತರನ್ನುಕುರಿತು ಬರೆದ ಸಾಹಿತ್ಯವೇ ದಲಿತೇಯ (ಅದಲಿತೇಯ)ಸಾಹಿತ್ಯ ಎಂದು ಪ್ರತಿಪಾದಿಸಿರುವುದು ಒಪ್ಪಬಹುದಾದರೂ ಈ ವಿವರಣೆಯು ತುಂಬಾ ಸುದೀರ್ಘ ವಾಗಿದೆಯೆನ್ನ ಬಹುದು.(ಅರವಿಂದ ಮಾಲಗತ್ತಿ.ಪು.೮)ಈ ವಾದವನ್ನು ವಿರೋಧಿಸಿದ ವಿದ್ವಾಂಸರು ಸಾಹಿತ್ಯದಲ್ಲಿ ದಲಿತ ಸಾಹಿತ್ಯವೆಂದು ವರ್ಗೀಕರಿಸುವುದು ಸೂಕ್ತವಲ್ಲ ಎಂಬ ಅಭಿಪ್ರಾಯವು ಒಪ್ಪತಕ್ಕದಲ್ಲ. ಆದರೂ ಮೇಲಿನ ವಿವರಣೆಗೆ ಮುಂದುವರಿಸಿ ಹೇಳುವುದಾದರೆ ದಲಿತರು ಊರ ಹೊರಗೆ ಜೀವಿಸಿದ್ದರೂ ಊರಿನ ಸಂಪರ್ಕದೊಂದಿಗೆ ಬಾಳಿದ್ದಾರೆ ಎಂಬುದಂತೂ ಸ್ಪಷ್ಟ. ಇದರಿಂದಲೆ ದಲಿತರು ಬರೆದ ಸಾಹಿತ್ಯವೇ ದಲಿತ ಪ್ರಜ್ಞೆಯಿಂದ ಬರೆದ ಸಾಹಿತ್ಯವು ದಲಿತ ಸಾಹಿತ್ಯವಾಗುತ್ತದೆ ಎಂಬ ಮಾತು ಒಪ್ಪತಕ್ಕದ್ದಾಗಿದೆಯಾದರೂ ವಿಶಾಲ ದೃಷ್ಟಿಕೋನದಿಂದ ಮಾತ್ರವೇ ಅದಕ್ಕೆ ಗಟ್ಟಿತನ ಬರುತ್ತದೆ ಎಂಬುದರಲ್ಲಿ ಸಂದೇಹವಿಲ್ಲ.

ದಲಿತ ಜನಾಂಗದ ರೂಪವನ್ನು ಎಲ್.ಹನುಮಂತಯ್ಯರವರು ಮೂರು ತಲೆಮಾರುಗಳಲ್ಲಿ ಗುರುತಿಸಲು ಪ್ರಯತ್ನಿಸಿದ್ದಾರೆ.

### ೧. ಸ್ವಾತಂತ್ರ್ಯ ಪೂರ್ವದ ತಲೆಮಾರು

ದಲಿತರು ಸಂಪೂರ್ಣವಾಗಿ ಗುಲಾಮ ಗಿರಿಯನ್ನು ಒಪ್ಪಿಕೊಂಡು, ಅನಕ್ಷರ ಕುಕ್ಷಿಗಳಾಗಿ ಒಳಲಿ ಬೆಂಡಾಗಿ, ಜೀವಂತ ಶವಗಳಾಗಿ ಬದುಕಿದ್ದರು. ಇವರಲ್ಲಿ ಯಾವುದೇ ರೀತಿಯ ಬೆಳವಣಿಗೆ ಕಾಣಲು ಸಾಧ್ಯವಿಲ್ಲ. ಆಗ ದಲಿತರು ಸಮಾಜದ ಸೇವಕರೆಂದು ಜೀವನ ಸಾಗಿಸುತ್ತಿದ್ದರು

೨. ಭಾರತ ಸ್ವಾತಂತ್ರ್ಯ ಪಡೆದ ಕಾಲದ ತಲೆಮಾರು

ಭಾರತ ಸ್ವಾತಂತ್ರ್ಯ ದೊರೆತ ಸುಸಂದರ್ಭದಲ್ಲಿ ದಲಿತರು ಅಕ್ಷರ ಕಲಿಯಲು ಆಸ್ಪದ ನೀಡಿದಂತಾಯಿತು. ಆಗ ಅಸಮಾನತೆಯನ್ನು ಒಪ್ಪಿಕೊಂಡರು. ಪ್ರತಿಭಟಿಸುವ ಮನಸ್ಸಾದರೂ ಸೊಲ್ಲೆತ್ತದೆ ಸುಮ್ಮನಾದರು. ಕೆಲವರು ಶಿಕ್ಷಣದ ಸೌಲಭ್ಯದಿಂದ ಸರ್ಕಾರಿ ಸೇವೆಗೆ ಸೇರಿ ತಮ್ಮ ಜನಾಂಗದಿಂದ ಬೇರ್ಪಟ್ಟರು.

೩. ಆಧುನಿಕ ಚಿಂತನೆಯ ಮೂರನೇಯ ತಲೆಮಾರು

ಅಕ್ಷರ ಜ್ಞಾನ ಪಡೆದು ಸಾಮಾಜಿಕ ವ್ಯವಸ್ಥೆಯ ವಿರುದ್ಧ ಸಿಡಿದೇಳಲು ಬಯಸಿದರೂ ಒಡಲಲ್ಲಿ ಆಕ್ರೋಶನಿಟ್ಟನ್ನು ತುಂಬಿಕೊಂಡು ಬದುಕಲು ತೊಡಗಿದರು ಸಮಾಜದ ಬದಲಾವಣೆಗಾಗಿ ಬಯಸಿ ಕನಸಿನ ಸಾಕಾರ ಪಡೆಯಲು ಪ್ರತಿಭಟನೆ ಪ್ರಮುಖ ಅಸ್ತ್ರವಾಗಿಸಿಕೊಂಡರು (ಎಲ್ ಹನುಮಂತಯ್ಯ:ಪು.೬೮)

ಇಲ್ಲಿ ನೀಡಿರುವ ರೂಪವು ಅಸ್ಪೃಶ್ಯತೆ ನೋವಿನ ವಿವಿಧ ಮಜಲುಗಳನ್ನು ಬಿಚ್ಚಿ ತೋರಿಸಿದಂತಾಗಿದೆ. ದಲಿತರ ಎದುರಾಳಿಯ ಮನಸ್ಸನ್ನು ಕಲಕುವ ಅತ್ಮ ವಿಮರ್ಶೆಗೆ ಹಚ್ಚುವ ವಸ್ತುವಿನ ಅಯ್ಕೆ ಮತ್ತು ಬರವಣಿಗೆಯ ಶೈಲಿಯು ಪ್ರಧಾನವಾಗಿ ಕಂಡುಬಂದಿದೆ. ದಲಿತ ಸಾಹಿತ್ಯಗಳು ಬಹುತೇಕವಾಗಿ ಪ್ರತಿಭಟನೆಯು ಕಾವ್ಯದಲ್ಲಿ ವ್ಯಕ್ತವಾಗಿದೆ.ಅದರೆ ಇದು ಗದ್ಯದ ಬರವಣಿಗೆಯಲ್ಲಿಲ್ಲ ಕಾವ್ಯದಷ್ಟು ಮೂಡಿ ಬರಲಿಲ್ಲ. ಇದರಿಂದಲೇ ದಲಿತ ಗದ್ಯ ಕೃತಿಗಳು ವಿವಾದಕ್ಕೆ ಎಡೆಮಾಡಿದವು.

ನಗರೀಕರಣ ಜೀವನಕ್ಕಿಂತ ಗ್ರಾಮೀಣ ಜನಜೀವನದ ಚಿತ್ರಣವೆ ಪ್ರಮುಖ ಕೇಂದ್ರವಾಗಿ ಗದ್ಯಕೃತಿಗಳಲ್ಲಿ ಪ್ರಸ್ತಾಪವಾಗಿವೆ. ಇಲ್ಲಿ ವರ್ಣಸಂಕರಕ್ಕಾಗಿ ಹಾತೊರೆಯುತ್ತದೆ. ದಲಿತರು ಸಾಂಸ್ಕೃತಿಕ ಸಂಘರ್ಷದ ಬದಲಾವಣೆಯ ಆತುರತೆ ಇಲ್ಲಿ ಪ್ರಮುಖ ಘಟ್ಟವಾಗಿದೆ. ಇದರಿಂದಲೇ ನಾವು ಶೋಷಣೆಗೆ ಒಳಗಾದವರು ಎಂಬ ಭಾವವನ್ನು ಹೆಜ್ಜೆ ಹೆಜ್ಜೆಗೂ ಮೂಡಿಸುತ್ತದೆ.

ದಲಿತ ಸಾಹಿತ್ಯದಲ್ಲಿ ಭಾಷೆಯ ಪ್ರಸ್ತಾಪಕ್ಕೆ ಬಂದಾಗ ಭಿನ್ನ ಸ್ವರೂಪವನ್ನು ಬಳಸಿದ್ದಾರೆ ಇಲ್ಲಿ ದೇಶಿಯತೆಯ ಆಡುಮಾತಿನ ಸೊಗಡನ್ನು ಅಸ್ತ್ರದಂತೆ ಬಳಸಿಕೊಂಡಿದ್ದಾರೆ. ಮುಂದೆ ಸಾಂಸ್ಕೃತಿಕವಾಗಿ ಪ್ರತೇಕವಾಗಿ ಬಳಸಲ್ಪಟ್ಟರು. ಇದರಿಂದಲೇ ಅರವಿಂದ ಮಾಲಗತ್ತಿಯವರು "ಯಾವುದು ಗಮತ್ ಭಾಷೆಯೆಂದು ಕರೆಯಲಾಗುತ್ತಿತ್ತೋ ಅದೇ ಗರಮಾ ಗರಮ್ ಭಾಷೆಯಾಗಿ ನಿಂತಿದೆ ಎಂಬ ಅಭಿಪ್ರಾಯವು ಸ್ಪಷ್ಟವಾಗಿದೆ(ಅರವಿಂದ ಮಾಲಗತ್ತಿ)

**ಕನ್ನಡ ದಲಿತ ಸಾಹಿತ್ಯ** ದಲಿತ ಸಾಹಿತ್ಯವು ಪ್ರಾಚೀನ ಭಾರತ ಹಾಗೂ ಆದುನಿಕ ಭಾರತದಲ್ಲಿ ದಲಿತ ಸಾಹಿತ್ಯವೆಂದು ಗುರುತಿಸಬಹುದಾಗಿದೆ.

ಪ್ರಾಚೀನ ಕನ್ನಡ ಸಾಹಿತ್ಯಕ್ಕೆ ಸಂಸ್ಕೃತದ ರಾಮಾಯಣ ಮಹಾಭಾರತಗಳೆ ಪ್ರಮುಖ ಅಕರಗಳಾಗಿವೆ ಅದರೆ ಮೂಲ ಕಥೆಯನ್ನೆ ಯಥವತ್ತಾಗಿ ಅನುಸರಿಸಿದೆ ಕನ್ನಡದ ಕವಿಗಳು ಸಮಕಾಲೀನ ಪ್ರಜ್ಞೆಯೊಂದಿಗೆ ಕೃತಿಗಳನ್ನು ರಚಿಸಿರುವುದು ಗಮನಾರ್ಹ."the concept of

Dalit literature is not to India, what is new is the militance that came to the forefront because of modern education and western thoughts " ಎಂಬ ಮಾತು ಸಮರ್ಥನೀಯ. ಇದರಿಂದ ದಲಿತ ಸಾಹಿತ್ಯ ಪರಂಪರೆಯು ಇಂಡಿಯಾಕ್ಕೇನೂ ಹೊಸದಲ್ಲ.

ಭಾರತದಲ್ಲಿ ಮೊದಲಿಗೆ ಜೈನ ಮತ್ತು ಬೌದ್ಧ ಅಂದೋಲನಗಳು ಅಗಾಧವಾದ ದಲಿತಸಾಹಿತ್ಯವನ್ನು ಸೃಷ್ಟಿ ಮಾಡಿದವು. ಈ ಧರ್ಮಗಳು ವೈದಿಕ ಧರ್ಮದ ವಿರುದ್ಧ ಬಂಡಾಯವೆದ್ದ ಎರಡೂ ಹೊಸ ಪಂಥಗಳಾಗಿವೆ. ಜನಸಾಮನ್ಯರಿಗೆ ಅರ್ಥವಾಗುವ ರೀತಿಯಲ್ಲಿ ಬದಿಗೊತ್ತಿ ರಚಿತವಾದವು. ಇದಾದ ಬಳಿಕ ಪಂಪನ "ವಿಕ್ರಮಾರ್ಜುನವಿಜಯು" ವ್ಯಾಸಭಾರರತವನ್ನೆ ಆಕರವಾಗಿ ಸ್ವೀಕರಿಸಿದ್ದರೂ ಮೂಲಭಾರತದಲ್ಲಿಲ್ಲದ ವಿಷಯಗಳನ್ನು ಅಭಿವ್ಯಕ್ತಪಡಿಸಿದನು. ಪಂಪನು ರಾಜರ ಅಧಿಕಾರಶಾಹಿತ್ವವನ್ನು ಅದಕ್ಕೆ ಗುರಿಯಾಗುವ ದುರ್ಬಲರ ಯಾತನೆಯನ್ನು ವಿಕ್ರಮಾರ್ಜುನವಿಜಯದಲ್ಲಿ ಖಂಡಿಸಿರುವುದನ್ನು ಗಮನಿಸಬಹುದು. ನೆನೆಯ ದಿರಣ್ಣ ಭಾರತದೊಳ್ ಪೆರರಾರುಮನ್ ಏಕಚಿತ್ತದಿಂ ನೆನೆಯೊಡೆ ಕರ್ಣನಂ ನೆನೆಯೆ" ಎಂಬ ಚರಮ ವಾಕ್ಯ ಹೇಳಿ 'ಕರ್ಣರಸಾಯನ ಮಲ್ತೆ ಭಾರತಂ' ಎಂಬ ದಲಿತಪರ ಚಿಂತನೆಯು ವ್ಯಕ್ತವಾಗುತ್ತದೆ.

ಆನಂತರದ ೧೨ ನೇ ಶತಮಾನದ ವಚನ ಸಾಹಿತ್ಯವು ಸಾಮಾಜಿಕವಾಗಿ ಕ್ರಾಂತಿಯನ್ನೆ ಮಾಡಿತು. ಸಾಮಾಜಿಕವಾಗಿ ಅನಿಷ್ಟಗಳ ವಿರುದ್ಧ ವಚನಕಾರರು ಚಳುವಳಿಯನ್ನೆ ಅರಂಬಿಸಿದರು. ಕೆಳವರ್ಗದ ಜನರ ಸಂಘಟಿಸಿ ಅವರ ಹಕ್ಕುಗಳನ್ನು ರಕ್ಷಿಸಿಕೊಡುವಲ್ಲಿ ವಚನ ಚಳುವಳಿ ಪ್ರಮುಖ ಪಾತ್ರ ನಿರ್ವಹಿಸಿತು. ಕುಲದ ಮೇಲ್ಮೈಯನ್ನೆ ಮೆರೆತು ಬಸವಣ್ಣ "ಆನು ಹಾರುವನೆಂದರೆ ಕೂಡಲ ಸಂಗಮದೇವ ನಗುವನಯ್ಯ" ಎಂಬವಾಕ್ಯವು ಕೆಳವರ್ಗದ ಜನರಿಗೆ ಮಾರ್ಗದರ್ಶಿಯಂತೆಯೇ ಪರಿಣಮಿಸಿತು.

ಇಡೀ ಕನ್ನಡ ಸಾಹಿತ್ಯದಲ್ಲಿ ಹೊಸದೊಂದು ಕ್ರಾಂತಿ ಎಸಗಿದ ಕವಿಗಳೆಂದರೆ ಹಂಪೆಯ ಹರಿಹರನನ್ನು ಗುರುತಿಸಬಹುದು. ಜನಸಾಮಾನ್ಯರನ್ನು ಕಾವ್ಯನಾಯಕರನ್ನಾಗಿಸಿಕೊಂಡು ಕೃತಿ ರಚನೆಗೆ ತೊಡಗಿರುವುದು ಕ್ರಾಂತಿಕಾರಕ ಹೆಜ್ಜೆಯಾಗಿದೆ. ಇದರಿಂದ ಹರಿಹರ ಕವಿಯು ಪ್ರಗತಿಪರ ಕವಿಯೆಂದು ಗುರ್ತಿಸಿಕೊಂಡನು. ಹರಿಹರನ ಜಾಡಿನಲ್ಲೇ ರಾಘವಾಂಕ ಕವಿಯು ಕೆಳವರ್ಗದ ಸಂವೇದನೆಗಳನ್ನು ವ್ಯಕ್ತಪಡಿಸಿರುವುದು ಕಂಡುಬರುತ್ತದೆ. ಈತನ "ಹರಿಶ್ಚಂದ್ರ ಕಾವ್ಯದಲ್ಲಿ ಜಾತಿ ಸಮಸ್ಯೆಗೆ ಸಂಬಂಧಪಟ್ಟಂತೆ ಹೊಲತಿಯರ ಪ್ರಸಂಗವಂತೂ ಉದಾತ್ತ ಚಿತ್ರಣವಾಗಿದೆ." ಹೊಲತಿಯರು ಅರಸನನ್ನೆ ವಿವಾಹವಾಗು ಎಂದು ಪಟ್ಟು ಹಿಡಿಯುವದರಲ್ಲಿ ರಾಘವಾಂಕನು ಹೊಲತಿಯರ ಮೂಲಕ ಜಾಗೃತಿಯನ್ನು ಮೂಡಿಸಿರುವನೆಂಬ ಅಭಿಪ್ರಾಯವಿದೆ.(ರಂಗಾರೆಡ್ಡಿ ಕೋಡಿರಾಂಪುರ. ಪು ೧೮೮)

ದಾಸ ಪರಂಪರೆಯಲ್ಲಿ ಪುರಂದರದಾಸ. ಕನಕದಾಸರಂತಹ ಕೀರ್ತನಕಾರರು ಜಾತಿ ವ್ಯವಸ್ಥೆಯ ವಿರುದ್ಧ ಕೃತಿ ರಚಿಸಿ. ದಲಿತರಲ್ಲಿ ಪ್ರಜ್ಞೆ ಮೂಡಿಸುವಲ್ಲಿ ಯಶಸ್ವಿಯಾದರು.

'ಕುಲಕುಲ ಕುಲವೆಂದು ಬಡಿದಾಡದಿರಿ ನಿಮ್ಮ ಕುಲದನೆಲೆಯನೇನಾದರೂ ಬಲ್ಲಿರಾ' ಎಂದು ಪ್ರಶ್ನಿಸಿದ ದಾಸರು. 'ಹೊಲೆ ಹೊರಗಿಹನೆ ಊರೊಳಗಿಲ್ಲವೆ?' ಎಂಬಂಥ ವಿಚಾರಗಳ ಮೂಲಕ ಜಾತಿಕಳಂಕ ತೊಲಗಿಸಲು ಪ್ರಯತ್ನಿಸಿದರು. ಇವರ ನಂತರ ಸರ್ವಜ್ಞ ಕವಿಯೂ ತ್ರಿಪದಿಗಳ ಮೂಲಕ ಜನಸಾಮಾನ್ಯರ ಸಮಸ್ಯೆಗಳಿಗೆ ಸ್ಪಂದಿಸಿ ಸಮಾಜದಲ್ಲಿ ರೂಡಿಯಲ್ಲಿದ್ದ ಅನಾಚಾರ, ಕಂದಾಚಾರ, ಜಾತಿ ಆಚರಣೆ ತೊಲಗುವಂತೆ ರಚಿಸಿದ ತ್ರಿಪದಿಗಳು ಜನಸಾಮಾನ್ಯರ ಮನಸ್ಸನ್ನು ಸೂರೆಗೋಂಡವು. ಇವರ 'ಜಾತಿಹಿನನ ಮನೆಯು ಜ್ಯೋತಿತಾ ಹೀನವೇ ಜಾತಿ ವಿಜಾತಿ ಎನಬೇಡ ದೇವನೊಲಿದಾತನೇ ಜಾತ' ಎಂಬ ಸಮರ್ಥನೆಯು ಜಾತೀಯತೆಯ ಮನೋಧರ್ಮಗಳನ್ನು ಹೋಗಲಾಡಿಸುವಲ್ಲಿ ಪ್ರಭಾವ ಬೀರಿತೆನ್ನಬಹುದು.

**ಇತರೆ ಸಾಹಿತ್ಯಗಳಲ್ಲಿ ದಲಿತ ಸಾಹಿತ್ಯ**

ಕನ್ನಡ ದಲಿತ ಸಾಹಿತ್ಯದ ಮೇಲೆ ಇತರೆ ಸಾಹಿತ್ಯವೂ ಪ್ರಭಾವ ಬೀರಿವೆ. ಅವುಗಳಲ್ಲಿ ಮರಾಠಿ, ಬಂಗಾಳಿ, ಹಿಂದಿ, ಮಲಯಾಳಂ, ಉರ್ದು, ಬಿಹಾರಿ, ಪಂಜಾಬಿ ಭಾಷೆಗಳಾಗಿವೆ.

**ಮರಾಠಿ:**

ದಲಿತ ಸಾಹಿತ್ಯ ವಿಚಾರ ಲಹರಿಯು ಪ್ರಥಮವಾಗಿ ಆರಂಭವಾದುದು ಮರಾಠಿ ಭಾಷೆಯಲ್ಲಿಯೇ ಎನ್ನಬಹುದು. ಈಭಾಷೆ ಯಲ್ಲಿರುವ ಪ್ರಮುಖ ದಲಿತ ಲೇಖಕರೆಂದರೆ ಮಹಾತ್ಮ ಜ್ಯೋತಿಬಾಪುಲೆಯವರು.ಇವರು ೧೯೩೫ ರಿಂದಲೇ"ಗ್ರಾಮೀಣ ಸಾಹಿತ್ಯ" ರಚನಾಕಾರ್ಯಭರದಿಂದ ಸಾಗಿತು.ನಂತರ ಲೇಖಕರು ಕುಂಬಾರರು,ಬಡಗಿಗಳು, ಕುರುಬರು, ರೈತರು ಇಂತಹವರ ಬದುಕಿನ ಸುತ್ತಹೇಣೆದ ಕಾದಂಬರಿಗಳು ಲೇಖಕರ ಗಮನ ಸೆಳೆದವು. ನಾರಯಣರಾವ್, ಬಾಬಾಪದಮುಂಜು ಹರಿನಾರಾಯಣಆಪ್ಟೆ ವಿ.ಎಂಜೋಶಿ, ವೆಂಕಟೇಶಮಡಗೋಳ್‌ಕರ್‌ರವರು ಕಾದಂಬರಿಯಲ್ಲಿ ಕೆಳವರ್ಗದ ಜನಜೀವನದ ಚಿತ್ರಣ ಕಾಣಬಹುದು. ಅದರೆ ಜ್ಯೋತಿಬಾಪುಲೆ ಮತ್ತು ಅಂಬೇಡ್ಕರ್‌ರವರ ಹೋರಾಟಗಳಿಂದ ದಲಿತ ಸಾಹಿತ್ಯ ರಚನೆಗೆ ತೊಡಗಿದರು. ಈ ಕಾಲ ಘಟ್ಟದಲ್ಲಿ ದಲಿತ ಪ್ಯಾಂಥರ್ಸ್ ಸಂಘಟನೆ ಹುಟ್ಟಿಕೊಂಡಿತು.

**ಬಂಗಾಳಿ:**

ಬಂಗಾಳಿ ಸಾಹಿತ್ಯವು ಪುರಾತನವಾದುದೇನಲ್ಲ.ಇದು ಇತರೆ ಸಾಹಿತ್ಯಗಳಿಗೆ ಹೋಲಿಸದರೆ ತುಂಬಾ ಈಚಿನದು. ಈ ಭಾಷೆಯಲ್ಲಿ ಪ್ರಮುಖ ಲೇಖಕರೆಂದರೆ ರಾಜಾರಾಂ ಮೋಹನ್ ರಾಯ್, ಮೈಕಲ್ ಮಧು ಸೂದನದತ್, ಬಂಕಿಮಚಂದ್ರ, ಸ್ವಾಮಿವಿವೇಕಾನಂದ, ಶರತ್‌ಚಂದ್ರ ಮತ್ತು ವಿಶ್ವಕವಿ ರವಿಂದ್ರನಾಥಠಾಗೂರ್‌ರವರು ಮಾನವತಾವಾದಿಗಳಾದರೂ ತುಳಿತಕ್ಕೆ ಒಳಗಾದ ಕೆಳವರ್ಗದವರನ್ನು ಗುರುತಿಸಲಾಗಲಿಲ್ಲ. ವಂಗಸಾಹಿತ್ಯದಲ್ಲಿ ಹೊಸ ಹುರುಪು ಬಂದಿದ್ದೇ ನಝುರಲ್ ಇಸ್ಲಾಂರವರ 'ಅಗ್ನಿ ವೀಣಾ' ಎಂಬ ಕ್ರಾಂತಿಕಾರಿ ಕವನ ರಚಿತವಾದ ಮೇಲೆ ಎನ್ನಬಹುದು. ಅದರೂ ಎಂ.ಎನ್ ರಾಯ್‌ರವರ ಸಾಹಿತ್ಯವು ಕ್ರಾಂತಿ ಸಾಹಿತ್ಯವಾಗಿದೆ. ಇವರು ದಲಿತ ಸಾಹಿತ್ಯದ ಸಾಲಿಗೆ ಸೇರ್ಪಡೆಯಾದರು. ಈ ಸಾಹಿತ್ಯದಲ್ಲಿ ನಕ್ಸಲೈಟ್‌ರ

ಬೆಳವಣಿಗೆಯಿಂದ ಲೆಫ್ಟಿಸ್ಟ್ ಸಾಹಿತ್ಯ ರಚನೆಯಾಯಿತು. ಆದರೆ ಇವೆಲ್ಲಾ ಸಂಘಟನೆಗಳಿಂದ ವರ್ಗಕಲಹದ ಮೇಲೆ ಹೆಚ್ಚಿನ ಪ್ರಾದನ್ಯತೆ ದೊರೆತಂತೆಯಾಯಿತು. ಆದರೆ ಅಸ್ಪೃಶ್ಯರ ಶೋಷಣೆ ಕುರಿತಾಗಿ ಹೆಚ್ಚು ಸಾಹಿತ್ಯ, ಬಂಗಾಳಿಭಾಷೆಯಲ್ಲಿ ಪ್ರಕಟವಾಗಲಿಲ್ಲ. ಆದರೂ ತಾರಾಶಂಕರಬ್ಯಾನರ್ಜಿಯವರ ಗೃಹದೇವತಾ ಮತ್ತು ಕವಿ ಕಾದಂಬರಿಯಲ್ಲಿ ಹೊಲೆಯರ ಜಾತಿಗೆ ಸೇರಿದ ವ್ಯಕ್ತಿಯನ್ನು ಪರಿಚಯಿಸಿದ್ದಾರೆ. ಅಂತೇಯೆ ಪಥೇರ್ ಪಾಂಚಾಲಿ, ಮಹಾಶ್ವೇತಾದೇವಿ ಹಾಗೂ ಖಗೇಂದ್ರನಾಥ ಮಿಶ್ರರವರು ಗ್ರಾಮೀಣ ಬದುಕಿನಲ್ಲಿನ ಶೋಷಣೆ ಬಡತನ ಬವಣೆಯ ಚಿತ್ರಣವು ಕಂಡುಬರುತ್ತದೆ.

**ಹಿಂದಿ:**

ಹಿಂದಿ ಸಾಹಿತ್ಯದಲ್ಲಿ ದಲಿತಪರ ಕಾಳಜಿವಹಿಸಿದವರೆಂದರೆ ಮಹಾತ್ಮಕಬೀರ್, ರವಿದಾಸ್‌ರನ್ನು ಪ್ರಮುಖವಾಗಿ ಗುರುತಿಸಬಹುದು. ಇವರು ೧೫ ನೇಶತಮಾನದಲ್ಲೇ ಇದ್ದರೂ ದಲಿತ ಸಾಹಿತ್ಯ ಪರಂಪರೆಯಲ್ಲಿ ಇದ್ದವರೆಂದು ಹೇಳಬಹುದು. ಇವರ ಬಳಿಕ ರಾಮಮನೋಹರ ಲೋಹಿಯರವರು ಹೊಸ ರಾಜಕೀಯವಾದದಿಂದ ದೊಡ್ಡದಾದ ಆಂದೋಲನವೆ ಉಂಟಾಯಿತು.

**ಮಲಯಾಳ:**

ಈ ಸಾಹಿತ್ಯದಲ್ಲಿ ಸಾಮಾಜಿಕ ಕ್ರಾಂತಿಯು ಉಂಟಾಯಿತು ಕೇರಳದ ಈಡಿಗ ಜನಾಂಗದ ಮಹಾಪುರುಷರೆಂಬ ಖ್ಯಾತಿಗೆ ಪಾತ್ರರಾದ ನಾರಯಣ ಗುರುರವರು ಧಾರ್ಮಿಕ ಮತ್ತು ಸಾಮಾಜಿಕವಾಗಿ ಕ್ರಾಂತಿಯನ್ನುಂಟು ಮಾಡಿ ದೇಶಕ್ಕೆ ಮಾರ್ಗದರ್ಶಕರಾದರು. ಇದರಿಂದ ಪ್ರಭಾವಿತರಾದ ಕವಿ ಕುಮಾರನ್‌ಆಸನ್‌ರವರನ್ನು ದಲಿತ ಸಾಹಿತ್ಯಪರಂಪರೆಯಲ್ಲಿ ಗುರುತಿಲಾಗಿದೆ. ಇವರ ನಂತರ ವೈಲಾರ್ ರಾಮವರ್ಮರವರನ್ನು ಕ್ರಾಂತಿಕವಿಗಳ ಸಾಲಿನಲ್ಲಿ ಸೇರಿಸಲಾಗಿದೆ. ಈ ಕವಿಯು"man created relations. religions created gods man religion and gods together parted the earth parted the mind" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ಪಂಜಾಬಿ:**

ಈಸಾಹಿತ್ಯದಲ್ಲಿ ಗುರುನಾನಕ್‌ರವರು ಪ್ರಾರಂಭಿಸಿದ ಸಿಖ್ ಆಂದೋಲನವು ವೈದಿಕ ಧರ್ಮದ ವಿರುದ್ಧ ಬಂಡಾಯವೆದ್ದದರಿಂದ ಜಾತಿಮತಗಳ ಶೋಷಣೆಗೆ ಪಂಜಾಬಿನಲ್ಲಿ ಅಷ್ಟೊಂದು ಅವಕಾಶ ಸಿಗಲಿಲ್ಲ. ಇವರು ವೈದಿಕ ಧರ್ಮವನ್ನು ವಿರೋಧಿಸದ್ದರಿಂದಲೇ ಈ ಸಾಹಿತ್ಯವನ್ನು ದಲಿತ ಸಾಹಿತ್ಯವಾಗಿ ಪರಿಗಣಿಸಲಾಯಿತು.

ಪಂಜಾಬಿನಲ್ಲಿ ಹರಭಗವಾನ್‌ರವರು ತಮ್ಮ ನಾಯಕತ್ವದಲ್ಲಿ 'ಜಾತ್ ಪತ್ ಥೊರಕ್ ಮಂಡಲ್' ಹಾಗೂ ಎಲ್.ಅರ್.ಬಲ್ಲಿಯವರ ಸಂಪಾದಕತ್ವದಲ್ಲಿ ಪ್ರಕಟವಾದ 'ಭೀಮಪತ್ರಿಕೆ' ದಲಿತರ ಏಳ್ಗೆಗಾಗಿಯೆ ಮೀಸಲಾಗಿದೆಯೆಂಬಂತೆ ಬೆಳೆಯಿತು. ಈ ಪತ್ರಿಕೆ ಮೂಲಕವೇ

ಡಾ.ಅಂಬೇಡ್ಕರ್‌ರವರ ಪುಸ್ತಕಗಳು ಪ್ರಕಟವಾಗಿವೆ. ಇದರಿಂದ ದಲಿತ ಸಾಹಿತಿ ಹಾಗೂ ದಲಿತ ಸಾಹಿತ್ಯಕ್ಕೆ ಮಹಾದೋಪಕಾರವನ್ನು 'ಭೀಮಪತ್ರಿಕೆ'ಯು ಮಾಡಿದೆ.

**ತೆಲಗು:**

ಈ ಸಾಹಿತ್ಯದಲ್ಲಿ ಮಹಾನ್ ಸುಧಾರಕನೆಂಬ ಖ್ಯಾತಿಗೆ ಪಾತ್ರರಾದ ವೀರೇಶಲಿಂಗಂ ಪಂತಲುರವರು ಪ್ರಚಲಿತದಲ್ಲಿದ್ದ ನಂಬಿಕೆಗಳು ಭ್ರಮಾತ್ಮಕ ಕಲ್ಪನೆ ಎಂದು ತಮ್ಮ ಕಾವಂಬರಿಯಲ್ಲಿ ಅಭಿವ್ಯಕ್ತಿಪಡಿಸಿರುವರು. ತೆಲಗು ಸಾಹಿತ್ಯದಲ್ಲಿ 'ಮಾಲಪಲ್ಲಿ' ಎಂಬ ಕಾದಂಬರಿಯಲ್ಲಿ ದಲಿತಸಾಹಿತ್ಯವನ್ನು ಗುರುತಿಸಬಹುದು. "ದಲಿತರ ಜೀವನದ ವಾಸ್ತವ ಚಿತ್ರಣದೊಂದಿಗೆ ಆದರ್ಶವಾದದ ಸಿದ್ಧಾಂತವನ್ನು ಪ್ರತಿಪಾದಿಸಸದ ಕಾದಂಬರಿ ಹೊಲಗೇರಿ" ಎಂದು ಆರ್ಪಿಯಸ್ ಸುಂದರಂ ಅಭಿಪ್ರಾಯ ಪಟ್ಟಿದ್ದಾರೆ (ಡಾ.ಆರ್ಪಿಯಸ್ ಸುಂದರಂ, ಪುಳಲ)

**ತಮಿಳು :**

ಈ ಸಾಹಿತ್ಯದಲ್ಲಿ ರಾಜಮ್ ಅಯ್ಯರ ಅವರ ಕಮಲಾಂಬಾಳ ಚರಿತ್ರಂ' ಮಾದಯ್ಯನವರ 'ಪದ್ಮಾವತಿ ಚಾರಿತ್ರ್ಯಂ' ಶಂಕರ ರಾಮ್ ಅವರ 'ಮಣ್ಣಾಸೆ' ಕೃತಿಯಲ್ಲಿ ಗ್ರಾಮೀಣ ಬದುಕಿನ ಕೆಳಸ್ತರದ ಜನಜೀವನದ ಚಿತ್ರಣವನ್ನು ಕಾಣಬಹುದಾಗಿದೆ

**ಸಾಮಾಜಿಕ ಪರಿಸ್ಥಿತಿ ಮತ್ತು ಜಾತಿ ಪದ್ದತಿ**

ಒಂದೂಸಮಾಜದ ಅಧಾರ ರಚಾನಾತ್ಮಕವಾಗಿ ಜಾತಿ ಆಗಿದೆ. ಜಾತಿಯು ಬರೀ ಸಾಮಾಜಿಕ ವಿಭಜನೆ ತತ್ವವಷ್ಟೇ ಅಲ್ಲ, ಅದರೆ, ಸಮಷ್ಟಿ ಜೀವನದ ಅಂಗಗಳಾದ ಆಹಾರ, ಮದುವೆ, ಶಿಕ್ಷಣ, ಸಂಘಟನೆ, ಪೂಜಿಸುವಿಕೆ ಹಾಗೂ ಜಾತಿಯನ್ನು ವಂಶಾಧಾರಿತ ಸಗೋತ್ರ ಆಧಾರಿತವೆಂದರೂ ಮತ್ತು ನಿರ್ದಿಷ್ಟವಾಗಿ ಸ್ಥಳೀಯ ಶ್ರೇಣಿಕೃತ ವ್ಯವಸ್ಥೆಯಲ್ಲಿ ಸ್ಥಾನ ಹೊಂದುವುದೇ ಅಗಿದೆ.

ಜಾತಿಯ ಮಧ್ಯದ ಸಂಬಂಧಗಳು ಅವರನ್ನು ಆಳಿದರೂ, ಪರಿಶುದ್ದತೆ ಮತ್ತು ಸಾಮನ್ಯವಾಗಿ ಜಾತಿಯೊಳಗೆ ಗೊತ್ತಿರುವ ತಿಳುವಳಿಕೆಯೇ ಆಗಿವೆ.

ಜಾತಿ ಎನ್ನುವುದು ಜನಾಂಗ, ಕುಲ, ಪೀಳಿಗೆ, ಮುಂತಾಗಿ ಅರ್ಥವಾಗುವುದು. ಜಾತಿಯು ಮುಖ್ಯವಾಗಿ ಮೂರು ಲಕ್ಷಣಗಳುಳ್ಳ ಒಂದು ಸಾಮಾಜಿಕ ಗುಂಪು.

೧. ಸದಸ್ಯನಾಗಿ ಹುಟ್ಟಿದವನಿಗೆ ಮಾತ್ರ ಸದಸ್ಯತ್ವ ಇರುತ್ತೆ. ಸದಸ್ಯ ಸದಸ್ಯತ್ವಕ್ಕೆ ಬದ್ದನಾಗಿರಬೇಕು.

೨. ಗುಂಪಿನ ಹೊರಗಡೆಯಿಂದ ಸದಸ್ಯರು ಮದುವೆಯಾಗದಂತೆ ಕಠೋರ ನಿಯಮಗಳಿಂದ ತಡೆಯಲಾಗುವುದು.

೩. ಸಂಪ್ರದಾಯ, ಸಂಸ್ಕಾರ, ಜಾತಿನಿಯಮಗಳನ್ನು ಜಾತಿಯೊಳಗೆ ಪಾಲಿಸಬೇಕು.

ಜಾತಿ ಪದ್ಧತಿ ಎಂಬುದು ಒಂದೊ ನಂಬಿಕೆಯನ್ನು ಆಧರಿಸಿದ ಪದ್ಧತಿ. ಅದರ ಪ್ರಕಾರ

ಹುಟ್ಟಿನಿಂದ ಮನುಷ್ಯ ಶ್ರೇಷ್ಠತೆಯನ್ನು ಪಡೆಯಬಲ್ಲ.

ಮನುಷ್ಯ ಸಂಬಂಧಗಳನ್ನು ಬೆಳೆಸುವುದು ಸಿರಿತನದ ಮೇಲೆ ಅಲ್ಲ ಬದಲಿಗೆ ಜನ್ಮದಿಂದ ಪಡೆದಿರುವ ವೃತ್ತಿಯಿಂದ. ಜಾತಿ ಪದ್ದತಿಯೊಳಗಿನ ಎಲ್ಲಾ ಸದಸ್ಯರು ಒಂದೇ ತೆರನಾದ ವೃತ್ತಿಗಳಲ್ಲಿ ಪಳಗಿದ್ದು, ಅದರಿಂದ ಬರುವ ಉತ್ಪತ್ತಿಯ ಆದಾರದ ಮೇಲೆ ಜೀವನ ನಡೆಸುವರು. ಈ ಜಾತಿ ಪದ್ದತಿಯಲ್ಲಿ ಹಲವು ಜಾತಿಗಳಿದ್ದು, ಒಂದೇ ವೃತ್ತಿಯಲ್ಲಿ ಒಂದೇ ತೆರನಾದ ಗುರಿ, ನೀತಿ, ಸಭೆ ಸೇರುವ ಹಕ್ಕು, ವಿವಾಹವಾಗುವ ನಿಯಮ, ಸಂಸ್ಕಾರ, ಸಾಂಸ್ಕೃತಿಕತೆ, ಅತಿಥಿ ಸತ್ಕಾರ ಇತ್ಯಾದಿ ಅಂಶಗಳಲ್ಲಿ ಸಾಮ್ಯತೆಯನ್ನು ಕಾಣಬಹುದಾಗಿದೆ. ಕೆಲವು ಸಂದರ್ಭಗಳಲ್ಲಿ ಮೂಗು ಮತ್ತು ತಲೆಯ ಉದ್ದ, ಎತ್ತರದ ಆಧಾರದ ಮೇಲೆ ಅರ್ಯರೆ, ಅನಾರ್ಯರೆ ಎಂದು ನಿರ್ಧರಿಸುತ್ತಿದ್ದ ಕಾಲವು ಇತ್ತೆಂದು ಪಿ.ಸಿ.ಮಹಲಾ ನೊಬಿಸ್ ಅಭಿಪ್ರಾಯ ಪಡುತ್ತಾರೆ. ಅವರ ಪ್ರಕಾರ ಉತ್ತರ ಪ್ರದೇಶದಲ್ಲಿನ ಜಾತಿಗಳ ಬಗ್ಗೆ ಬ್ರಾಹ್ಮಣರು ಹಿಂದೂ ಸಮಾಜದಲ್ಲಿ ಅತ್ಯುನ್ನತ ಸ್ಥಾನವನ್ನು ಪಡೆದಿರುವುದಲ್ಲದೆ ವಿಶಾಲವಾದ ಮುಖ, ದೇಹ, ಎತ್ತರ, ಎದೆ, ಮೂಗು ಹೊಂದಿದವರು. ಮೇಲಿನಿಂದ ಕೆಳಕ್ಕೆ ಸಾಮಾಜಿಕ ಚಿತ್ರದ ಬಗ್ಗೆ ಬಂದರೆ ನೇರವಾದ ಇಳಿಕೆಯನ್ನು ಸ್ಥಾನಮಾನ ಮತ್ತು ದೈಹಿಕ ಅಳತೆಯಲ್ಲೂ ಕಾಣಬಹುದು.

ಪ್ರತಿಯೊಂದು ಜಾತಿಗಳು ತಮ್ಮದೆ ಆದ ನಾಮ ಸೂಚಿಕಗಳನ್ನು ಹೊಂದಿವೆ. ಅವು ತಂದೆಯದೊ, ಇಲ್ಲಾ ಊರಿನದೋ ಅಗಿರುತ್ತವೆ. ಕೆಲವು ಜಾತಿಗಳು ಇಂತ ನಾಮ ಸೂಚಕಗಳನ್ನು ಹೊಂದುವಂತಿಲ್ಲ.

**ಹಿಂದುಳಿದವರು ಮತ್ತು ದಲಿತರು**

**ಅರ್ಥ ಮತ್ತು ವ್ಯಾಖ್ಯೆ**

ಇಂದು ವ್ಯಾಪಕವಾಗಿ ಬಳಕೆಗೊಳ್ಳುತ್ತಿರುವ 'ಹಿಂದುಳಿದ ವರ್ಗ' ಮತ್ತು 'ದಲಿತ' ಎಂಬ ಪಾರಿಭಾಷಿಕ ಶಬ್ದಗಳು ಸದ್ಯದ ಭಾರತದ ಎರಡು ಬೃಹತ್ ಜನ ಸಮುದಾಯಗಳನ್ನು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ನೆಲೆಯಲ್ಲಿ ವಿಭಜಿಸಿ ಗುರುತಿಸಿ ಕೊಡುವಲ್ಲಿ ನೆರವಾಗುವಂಥವು. ಚಾರಿತ್ರಿಕ ಕಾಲಘಟ್ಟದ ವಿಷಯ ಪರಿಸ್ಥಿತಿಗಳ ಕಾರಣವಾಗಿ ಉಂಟಾದ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಿತ್ಯಂತರಗಳು ಈ ಬಗೆಯ ಸಂಕೀರ್ಣ ವ್ಯವಸ್ಥೆಗೆ ಅನುವು ಮಾಡಿಕೊಟ್ಟವು. ಯಾವುದೇ ಸಮಸ್ಯೆಯಾದರು ತನ್ನದೇ ಸ್ವರೂಪ ಪಡೆದು, ಕಾಲಕಾಲಕ್ಕೆ ಹೊಸ ಅರ್ಥ-ಆಕೃತಿಗಳನ್ನು ಒಪ್ಪಿ ಹೊಸ ಹೆಜ್ಜೆಯನ್ನಿಡುತ್ತ ಸಾಗಿಬಂದಿರುವುದು ಸ್ಪಷ್ಟ. ಈ ನೆಲೆಯಲ್ಲಿ 'ಹಿಂದುಳಿದವರು' ಮತ್ತು 'ದಲಿತರು' ಈ ಎರಡು ಗುಂಪುಗಳ ವರ್ಗೀಕರಣ ಪ್ರಕ್ರಿಯೆ ಕುರಿತು ಪ್ರಸ್ತುತ ಸ್ಥಿತಿ-ಗತಿಗಳ ಪರಿಶೀಲನೆಯೊಡನೆ ಚರ್ಚಿಸಬಹುದು.

ಹಿಂದುಳಿದ ವರ್ಗಗಳೆಂದರೇನು? ಯಾರು ಹಿಂದಳಿದವರು? ಯಾವುದರಲ್ಲಿ? ಏತಕ್ಕಾಗಿ? ಹಾಗೆಯೇ ದಲಿತರು ಎಂದರೆ ಯಾರು? ಯಾರನ್ನು ದಲಿತ ಎನ್ನಬಹುದು? ಅವರ ಮೂಲ ವಿಷಯದ ಬಗ್ಗೆ ಚರ್ಚಿಸಬೇಕಾದರೆ ನಮ್ಮಲ್ಲಿ ಇಂಥ ಪ್ರಶ್ನೆಗಳು ಮೂಡಿದರೆ ಅದರ ವಿವರಣೆ ಮತ್ತು ಅರ್ಥಗಳು ಮತ್ತಷ್ಟು ಸ್ಫುಟವಾಗುತ್ತವೆ.

# ಅಧ್ಯಾಯ ನಾಲ್ಕು

# ಕರ್ನಾಟಕದಲ್ಲಿ ದಲಿತ ಚಳುವಳಿಯ ಪ್ರಭಾವ ಮತ್ತು ಪ್ರೇರಣೆ

ಅ) ದಲಿತ ಚಳುವಳಿಗಳು.
ಆ) ಪ್ರಮುಖ ದಲಿತ ಹೋರಾಟಗಳು (ಭೂ ಹೋರಾಟಗಳು)
ಇ) ವಾಸ್ತವದಲ್ಲಿ ದಲಿತ ಚಳುವಳಿಯ ವೈಶಿಷ್ಟ್ಯತೆ.

# ಅಧ್ಯಾಯ ನಾಲ್ಕು
# ಕರ್ನಾಟಕದಲ್ಲಿ ದಲಿತ ಚಳುವಳಿಯ ಪ್ರಭಾವ ಮತ್ತು ಪ್ರೇರಣೆ

## ಅ. ದಲಿತ ಚಳುವಳಿಗಳು

ದಲಿತ ಚಳುವಳಿ ಹಾಗು ಈ ರಾಷ್ಟ್ರದ ಸ್ವಾತಂತ್ರ್ಯ ಚಳುವಳಿ ಹೆಚ್ಚು ಕಡಿಮೆ ಒಂದೇ ರೀತಿ ಇರುವುದನ್ನು ನಾವು ಕಾಣಬಹುದು. ಒಂದು ರಾಷ್ಟ್ರ ಮತ್ತೊಂದು ರಾಷ್ಟ್ರದ ಗುಲಾಮಗಿರಿಯಿಂದ ಬಿಡುಗಡೆಯಾಗಲು ಚಳುವಳಿ ಮಾಡಿದರೆ ಒಂದು ಜಾತಿ ಮತ್ತೊಂದು ಜಾತಿಯ ದಬ್ಬಾಳಿಕೆಯಿಂದ ವಿಮುಕ್ತಿಗೊಳ್ಳಲು ಚಳುವಳಿ ಹೂಡಿರುವುದನ್ನು ಈ ಎರಡು ಚಳುವಳಿಗಳ ಪ್ರಕ್ರಿಯೆಗಳನ್ನು ನೋಡಿದಾಗ ಸ್ಪಷ್ಟವಾಗುತ್ತದೆ.

ದಲಿತ ಚಳುವಳಿ ಹಾಗೂ ಈ ರಾಷ್ಟ್ರದ ಸ್ವಾತಂತ್ರ್ಯ ಚಳುವಳಿ ಹೆಚ್ಚು ಕಡಿಮೆ ಒಂದೇ ರೀತಿ ಇರುವುದನ್ನು ನಾವು ಕಾಣಬಹುದು. ಒಂದು ರಾಷ್ಟ್ರ ಮತ್ತೊಂದು ರಾಷ್ಟ್ರದ ಗುಲಾಮಗಿರಿಯಿಂದ ಬಿಡುಗಡೆಯಾಗಲು ಚಳುವಳಿ ಮಾಡಿದರೆ ಒಂದು ಜಾತಿ ಮತ್ತೊಂದು ಜಾತಿಯ ದಬ್ಬಾಳಿಕೆಯಿಂದ ವಿಮುಕ್ತಿಗೊಳ್ಳಲು ಚಳುವಳಿ ಹೂಡಿರುವುದನ್ನು ಈ ಎರಡು ಚಳುವಳಿಗಳ ಪ್ರಕ್ರಿಯೆಗಳನ್ನು ನೋಡಿದಾಗ ಸ್ಪಷ್ಟವಾಗುತ್ತದೆ. ರಾಷ್ಟ್ರದಲ್ಲಿ ಸ್ವಾತಂತ್ರ್ಯಕ್ಕಾಗಿ ನಡೆದ ಚಳುವಳಿ ರಾಜಕೀಯ ಸ್ವಾತಂತ್ರ್ಯ ಚಳುವಳಿ ಎಂದಾದರೆ ದಲಿತ ಚಳುವಳಿ ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಸ್ವಾತಂತ್ರ್ಯಕ್ಕಾಗಿ ರಾಷ್ಟ್ರದ ಆಂತರಿಕ ವ್ಯವಸ್ಥೆಯ ವಿರುದ್ಧ ನಡೆಸಿದ ಒಂದು ಚಳುವಳಿ. ನಿರಂತರವಾಗಿ ಸಾಮಾಜಿಕ ಶೋಷಣೆಗೆ ಬಲಿಯಾಗಿ ಅಮಾನುಷ ಜೀವನ ನಡೆಸಿದ ಒಂದು ವರ್ಗ ತನ್ನ ಮಾನವೀಯ ಹಕ್ಕುಗಳಿಗಾಗಿ, ಸಾಮಾಜಿಕ ಸ್ವಾತಂತ್ರ್ಯಕ್ಕಾಗಿ ತನ್ನ ಕನಿಷ್ಠ ಸೌಕರ್ಯಗಳ ಗಳಿಕೆಗಾಗಿ, ತಮ್ಮ ರಕ್ಷಣೆಗಾಗಿ ಇಡೀ ವ್ಯವಸ್ಥೆಯ ವಿರುದ್ಧ ನಡೆಸುತ್ತಿರುವ ಚಳುವಳಿಯೇ ದಲಿತ ಚಳುವಳಿ.

ದಲಿತ ಚಳುವಳಿ ಇತ್ತೀಚಿನ ಬೆಳವಣಿಗೆ ಏನಲ್ಲ. ಪ್ರಾಯಶಃ ಹನ್ನೆರಡನೇ ಶತಮಾನದ ಒಂದಿನ ಚರಿತ್ರೆ ದಲಿತ ಚಳುವಳಿಗೆ ಇದೆ ಎಂದು ಹೇಳಬಹುದು. ಬಸವಣ್ಣನವರ ಸಾಮಾಜಿಕ ಕ್ರಾಂತಿಯಾಗಲಿ, ಭಗವಾನ್ ಬುದ್ಧನ ಸಮಾನತೆಯ ಕ್ರಾಂತಿಯಾಗಲಿ ಈ ದಿಸೆಯಲ್ಲಿ ದಲಿತ ಚಳುವಳಿಗೆ ಹೋಲುವಂತಹ ಚಳುವಳಿಗಳೇ ಆಗಿವೆ. ಮಹಾರಾಷ್ಟ್ರದ ಜ್ಯೋತಿಬಾಪೂಲೆಯವರ ಹೋರಾಟವಾಗಲಿ, ಕೇರಳದ ನಾರಾಯಣ ಗುರುಗಳ ಹೋರಾಟವಾಗಲಿ ಇವುಗಳೆಲ್ಲವೂ ಒಂದು ವರ್ಗದ ಶೋಷಣೆಯ ವಿರುದ್ಧ ನಡೆಸಿದ ಚಳುವಳಿಗಳು. ಅಸಮಾನತೆಯ ವಿರುದ್ಧ ನಡೆಸಿದ ಸಾಮಾಜಿಕ ಕ್ರಾಂತಿಗಳು. ಆದ್ದರಿಂದಲೇ ಈ ಎಲ್ಲಾ ಚಳುವಳಿಗೂ ದಲಿತ ಚಳುವಳಿಗಳೆಂದೇ ಉಲ್ಲೇಖಿಸಲ್ಪಡುತ್ತವೆ.

ಅಸ್ಪೃಶ್ಯತೆಯಂತಹ ಅಮಾನುಷವಾದ ಆಚರಣೆ ಮಹಾರಾಷ್ಟ್ರವನ್ನಾಳಿದ ಪೇಶ್ವೆಗಳ ಕಾಲದಲ್ಲಿ ಅತಿರೇಕಗೊಂಡಿತ್ತು. ಅಂದಿನ ಚಾತುರ್ವರ್ಣ ವ್ಯವಸ್ಥೆಯ ವಿರುದ್ಧ ಸೆಟೆದು ನಿಂತವರು ಕೋರೆಗಾಂವ್ ಪಟ್ಟಣದ ಮಹರ್ ಜಾತಿಗೆ ಸೇರಿದ ಯುವಕರು. ಬರ್ಬರವಾದ ಜಾತಿ ವ್ಯವಸ್ಥೆಯ ವಿರುದ್ಧ, ಪೇಶ್ವೆಗಳ ದಬ್ಬಾಳಿಕೆಯ ವಿರುದ್ಧ ಸೆಟೆದು ನಿಂತರು. ಪೇಶ್ವೆಗಳು ಅಟ್ಟಹಾಸವನ್ನು ಮುರಿದರು. ೧೮೧೮ ಜನವರಿ ತಿಂಗಳ ಒಂದರಂದು ಪೇಶ್ವೆಗಳ ವಿರುದ್ಧ ನಡೆಸದ ಮಹರ್ ಯುವಕರ ಚಳುವಳಿ ದಲಿತ ಚಳುವಳಿಯಲ್ಲೊಂದು ಮೈಲಿಗಲ್ಲು. ಹೀಗೆ ದಲಿತ ಚಳುವಳಿಗೆ ಶತಶತಮಾನಗಳ ಹಿನ್ನೆಲೆ ಇದೆ. ಚರಿತ್ರೆ ಇದೆ. ಇತಿಹಾಸವಿದೆ.

ಬಾಬಾ ಸಾಹೇಬ್ ಅಂಬೇಡ್ಕರ್‌ರವರ ಚೌಡರಕೆರೆಯ ಚಳುವಳಿ, ಅವರ ಮುಂದಾಳತ್ವದಲ್ಲಿ ಕಲಾರಾಂ ದೇವಸ್ಥಾನದ ಪ್ರವೇಶ, ಅಂಬೇಡ್ಕರ್‌ರ ನೇತೃತ್ವದಲ್ಲಿ ನಾಗಲಾಪುರದಲ್ಲಿ ನಡೆದ ೫ ಲಕ್ಷಕ್ಕಿಂತ ಹೆಚ್ಚು ಅಸ್ಪೃಶ್ಯರ ಬೌದ್ಧ ಮತಕ್ಕೆ ಸೇರ್ಪಡೆ ಇವೆಲ್ಲ ಪ್ರಕರಣಗಳೂ ದಲಿತ ಚಳುವಳಿಗಳು ನಡೆದು ಬಂದ ಸಾಲು ಪ್ರಕರಣಗಳು.

ನಾರಾಯಣಗುರು, ಜೋತಿರಾವ್‌ಫುಲೆ, ಪೆರಿಯಾರ್, ಅಂಬೇಡ್ಕರ್ ಇವರುಗಳ ವಿಚಾರಗಳಿಂದ ಪ್ರಭಾವಿತರಾದ ದಲಿತ ವಿದ್ಯಾವಂತರಲ್ಲಿ ವಿಚಾರಕ್ರಾಂತಿ ಮೂಡತೊಡಗಿದ ಕಾಲ ೨೦ ನೇ ಶತಮಾನದ ಆದಿಭಾಗ. ಸಹಸ್ರಾರು ವರ್ಷಗಳು ಜಾರಿಯಲ್ಲಿದ್ದ ಅಸ್ಪೃಶ್ಯತೆಯಂತಹ ಅಮಾನುಷ ಪದ್ಧತಿ, ಸಾಮಾಜಿಕವಾಗಿ, ಆರ್ಥಿಕವಾಗಿ ಶಿಕ್ಷಣದಲ್ಲಿ ನಡೆದ ಅವ್ಯಾಹತ ಶೋಷಣೆ, ಅಸಮಾನತೆಗಳ ವಿರುದ್ಧ ನಡೆದ ಸಾಮಾಜಿಕ ಹೋರಾಟವೇ ದಲಿತ ಚಳುವಳಿ. ಇಪ್ಪತ್ತನೇ ಶತಮಾನದಲ್ಲಿ ಈ ಚಳುವಳಿಗೆ ಸಿಕ್ಕ ಚಾಲನೆ ಅಂಬೇಡ್ಕರ್‌ರವರ ನಾಯಕತ್ವ ಹಾಗೂ ಅವರ ನಂತರದ ದಿನಗಳಲ್ಲಿ ಅವರು ಬಿಟ್ಟು ಹೋದ ವಿಚಾರಧಾರೆಗಳು ಎಂಬುದರಲ್ಲಿ ಎರಡು ಮಾತಿಲ್ಲ.

ಅಂಬೇಡ್ಕರ್‌ರವರು ಹಾಕಿದ ಶಿಕ್ಷಣ, ಸಂಘಟನೆ, ಹೋರಾಟಗಳೆಂಬ ಮುನ್ನುಡಿಗಳಿಂದ ಅವರ ಬರಹ, ಭಾಷಣಗಳ ವಿಚಾರಧಾರೆಯಿಂದ ಪ್ರಭಾವಿತರಾದ ದಲಿತ ವಿದ್ಯಾವಂತರು ಸಂವಿಧಾನ ಬದ್ಧವಾಗಿ ದೊರಕಬೇಕಾದ ತಮ್ಮ ಹಕ್ಕುಗಳ ಬಗ್ಗೆ, ತಮ್ಮ ರಕ್ಷಣೆಯ ಬಗ್ಗೆ ಮೇಲಾಗಿ ತಮ್ಮ ಒಗ್ಗಟ್ಟಿನ ಬಗ್ಗೆ ಚಿಂತಿಸತೊಡಗಿದರು. ಆರಂಭದಲ್ಲಿ ಪರಿಶಿಷ್ಟ ನೌಕರವರ್ಗ ತಮ್ಮ ಜಾತಿಯ ಹೆಸರನ್ನು ಬಹಿರಂಗಗೊಳಿಸದೆ ಕೆಲವೊಮ್ಮೆ ಸುಳ್ಳು ಹೇಳಿ ಜೀವನ ನಡೆಸುವ ಸಂದರ್ಭವಿತ್ತು. ಆದರೆ ಎಪ್ಪತ್ತರ ನಂತರದ ದಶಕಗಳಲ್ಲಿ ವಿದ್ಯಾವಂತ ದಲಿತರು ತಮ್ಮ ಸಂಘಟನೆಯ ಬಗ್ಗೆ ಹೆಚ್ಚು ಚಿಂತಿಸತೊಡಗಿದರು. ಇವರಲ್ಲಿ ಸ್ವಾಭಿಮಾನ ಮೂಡತೊಡಗಿತು. ಸಹಸ್ರಾರು ವರ್ಷಗಳು ಶೋಷಣೆಗೊಳಗಾಗಿ ಪ್ರಾಣಿಗಳಿಗಿಂತಲೂ ಕಡಿಮೆಯಾದ ಜೀವನ ಸವೆಸಿದ ತಮ್ಮ ಪೂರ್ವಜರ ಬಗ್ಗೆ ವಿದ್ಯಾವಂತ ವರ್ಗ ಚಿಂತಿಸತೊಡಗಿತು. ಸ್ವಾತಂತ್ರ್ಯದ ನಂತರದ ದಿನಗಳಲ್ಲೂ ಅಸ್ಪೃಶ್ಯತೆ ಆಚರಣೆಯ ಅಂಟು ಜಾಡ್ಯ ತೊಲಗದಿದ್ದಾಗ, ಸಂವಿಧಾನ ಬದ್ಧ ಮೀಸಲಾತಿಯ ಸೌಲಭ್ಯ ಸರಿಯಾಗಿ ಸಿಗದಿದ್ದಾಗ ಮತ್ತು ಹಳ್ಳಿಗಳಲ್ಲಿ ಮುಗ್ಧ ಅಸ್ಪೃಶ್ಯರ ಮೇಲೆ ದೌರ್ಜನ್ಯ ಹೆಚ್ಚತೊಡಗಿದಾಗ ಸಂಘಟನೆಯ ಬಗ್ಗೆ ತೀವ್ರವಾದ ಚಿಂತನೆ ಅಸ್ಪೃಶ್ಯ ವಿದ್ಯಾವಂತರಲ್ಲಿ ಆರಂಭವಾಗತೊಡಗಿತು.

ಅಸ್ಪೃಶ್ಯರ ಮನಸ್ಸಿನಲ್ಲಿ ಈ ರೀತಿಯ ಮಾನಸಿಕ ತುಮುಲ ನಡೆಯುತ್ತಿದ್ದಾಗ ಬಸವಲಿಂಗಪ್ಪನವರ ಬೂಸಾ ಪ್ರಕರಣ ಪರಿಶಿಷ್ಟರ ಚಳುವಳಿಗೆ ನಾಂದಿಯಾಯಿತು. ಅಸಂಘಟಿತ ದಲಿತ ಗುಂಪುಗಳು ಒಂದಾಗತೊಡಗಿದವು. ಹೀಗೆ ಒಂದಾದ ಪರಿಣಾಮವಾಗಿ ಕರ್ನಾಟಕ ರಾಜ್ಯದಲ್ಲಿ ದಲಿತ ಕ್ರಿಯಾ ಸಮಿತಿ ತದನಂತರ ಕರ್ನಾಟಕ ದಲಿತ ಸಂಘರ್ಷ ಸಮಿತಿ ಎಂಬ ಹೆಸರಿನಲ್ಲಿ ಬೃಹತ್ ಸಂಘಟನೆಯೊಂದು ಅಸ್ತಿತ್ವಕ್ಕೆ ಬಂದಿತು. ಕ್ರಮೇಣವಾಗಿ ಈ ಸಂಘಟನೆಗಳು ಕರ್ನಾಟಕ ರಾಜ್ಯದಲ್ಲಿ ಸಂಘಟನೆಯ ಬಲವಾದ ಬೀಜಗಳನ್ನು ಬಿತ್ತತೊಡಗಿದವು. ಹೀಗೆ ಬಿತ್ತಿದ ಬೀಜ ಸಂಘಟಕರ ತ್ಯಾಗದಿಂದಾಗಿ ಅವರ ಪರಿಶ್ರಮದಿಂದಾಗಿ ಅವರು ಹಾಕಿಕೊಂಡ ಚಳುವಳಿಗಳ ಬಿಸಿಯಿಂದಾಗಿ ಬಲವಾದ ಬೇರುಗಳನ್ನು ಬಿಟ್ಟು ಇಡೀ ರಾಜ್ಯದಲ್ಲೇ ಬೃಹತ್ ಸಂಘಟನೆಯಾಗಿ ಬೆಳೆದು ಮೇಲ್ವರ್ಗದ ಕಣ್ತೆರೆಸಿತು. ದಲಿತರ ಒಗ್ಗಟ್ಟಿನ ಬಗ್ಗೆ ಮೇಲ್ವರ್ಗಕ್ಕೆ ಎಚ್ಚರಿಕೆ ನೀಡಿತು. ಈ ಸಂಘಟನೆಯಲ್ಲಿ ಕ್ರಮೇಣ ಉಂಟಾದ ಕೆಲವು ಬಿನ್ನಾಭಿಪ್ರಾಯದಿಂದಾಗಿ ಕೆಲವು ನಾಯಕರು ಪ್ರತ್ಯೇಕ ಸಂಘಟನೆಗಳನ್ನು ಕಟ್ಟಿದರು. ತಂತಮ್ಮ ಸಂಘಟನೆಗಳ ಮುಖಾಂತರ ಪರಿಶಿಷ್ಟರಿಗೆ ರಕ್ಷಣೆ ನೀಡುತ್ತಾ ಬಂದವು ಮತ್ತು ರಾಜ್ಯದ ಎಲ್ಲೆಡೆಯಾಗಲೀ ಗಂಭೀರವಾದ ಸಮಸ್ಯೆಗಳು ಎದುರಾದಾಗ ಎಲ್ಲಾ ಸಂಘಟನೆಗಳೂ ಒಟ್ಟಾಗಿ ಸೇರಿ ಪರಿಶಿಷ್ಟರಿಗೆ ನ್ಯಾಯ ದೊರಕಿಸಿ ಕೊಡುವಲ್ಲಿ ಮತ್ತು ರಕ್ಷಣೆ ನೀಡುವಲ್ಲಿ ಇಂದಿಗೂ ಹೋರಾಟ ಮಾಡುತ್ತಿವೆ. ಬೆಂಡಿಗೇರಿಯ ದಲಿತನೊಬ್ಬನಿಗೆ ಮಲ ತಿನ್ನಿಸಿದ ಪ್ರಕರಣ, ಮೈಸೂರು ಜಿಲ್ಲೆಯ ಬದನವಾಳುವಿನ ದಲಿತರ ಹತ್ಯಾಕಾಂಡ ಮತ್ತು ಕೋಲಾರ ಜಿಲ್ಲೆ ಕಂಬಾಲಪಲ್ಲಿಯಲ್ಲಿ ನಡೆದ ದಲಿತರ ಸಜೀವ ದಹನಗಳ ವಿರುದ್ಧ ನಡೆದ ದಲಿತ ಸಂಘಟನೆಗಳ ಹೋರಾಟ ದಲಿತರ ಒಗ್ಗಟ್ಟಿಗೆ ಹಿಡಿದ ಕನ್ನಡಿಯಂತಿದೆ.

ದಲಿತ ಕವಿ ಡಾ॥ ಸಿದ್ಧಲಿಂಗಯ್ಯನವರ "ಹೊಲೆಮಾದಿಗರ ಹಾಡು" ಮತ್ತು "ಸಾವಿರಾರು ನದಿಗಳು" ಎಂಬ ಕವನ ಸಂಕಲನದಲ್ಲಿನ ಹಲವು ಹೋರಾಟದ ಕವನಗಳು ದಲಿತ ಸಂಘಟನೆಗಳ ಹಾಡಾದವು. ದೇವನೂರು ಮಹಾದೇವ, ಡಾ॥ ಸಿದ್ಧಲಿಂಗಯ್ಯ , ದೇವಯ್ಯ ಹರವೆ ಮುಂತಾದ ಲೇಖಕರ ಕೃತಿಗಳು ದಲಿತ ಸಂಘಟನೆಯ ಬೆಳವಣಿಗೆಗೆ ಪೂರಕವಾದವು. ಗೋವಿಂದಯ್ಯ, ಇಂದೂಧರ ಹೊನ್ನಾಪುರ, ಪ್ರೊ. ಬಿ. ಕೃಷ್ಣಪ್ಪ , ನ್ಯಾಯವಾದಿ ಓ. ಶ್ರೀಧರನ್ ಡಿ.ಎಂ. ತಿಮ್ಮರಾಯಪ್ಪ ಮುಂತಾದವರ ನಾಯಕತ್ವ ಈ ಸಂಘಟನೆಗೆ ದೊರಕಿತು. ದಲಿತರ ಮೇಲೆ ದೌರ್ಜನ್ಯ, ಮಾನಭಂಗ, ಹಲ್ಲೆ, ಕೊಲೆ ಇತ್ಯಾದಿ ಘಟನೆಗಳು ನಡೆದಾಗಲೆಲ್ಲಾ ದಲಿತ ಸಂಘಟನೆಗಳು ಒಟ್ಟಾಗಿ ಪ್ರತಿಭಟಿಸಲು ಆರಂಭಿಸಿದವು. ಒಗ್ಗಟ್ಟನ್ನು ಬಹಿರಂಗವಾಗಿ ಪ್ರದರ್ಶಿಸತೊಡಗಿದವು. ಸರ್ಕಾರದ ಗಮನ ಸೆಳೆದವು. ಸಾರ್ವಜನಿಕರಲ್ಲಿ ಒಗ್ಗಟ್ಟಿನ, ಹೋರಾಟದ ಬಿಸಿ ಮುಟ್ಟಿಸಿದವು. ದಿವಂಗತ ಬಸವಲಿಂಗಪ್ಪನವರ, ಎನ್. ರಾಚಯ್ಯನವರ ಬೆಂಬಲ ರಾಜಕೀಯವಾಗಿ ಸಂಘಟನೆಗೆ ದಕ್ಕಿತು.

ಈ ಬೆಳವಣಿಗೆಯ ಪರಿಣಾಮದಿಂದಾಗಿ ಪರಿಶಿಷ್ಟರ ನೌಕರರ ಸಂಘಟನೆಗಳು ಸಹಸ್ರಾರು ಸಂಖ್ಯೆಯಲ್ಲಿ ಆರಂಭಗೊಂಡವು. ತಮ್ಮ ಹಕ್ಕುಗಳ ರಕ್ಷಣೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡವು. ನಿರೀಕ್ಷಿತ ಫಲಿತಾಂಶ ಸಿಗದಿದ್ದರೂ ತಮ್ಮ ಒಗ್ಗಟ್ಟನ್ನು ಬಲಪಡಿಸಿಕೊಂಡು

ಹೋರಾಟವನ್ನು ಮುಂದುವರಿಸಿಕೊಂಡು ಬಂದವು. ಅನೇಕ ಇಲಾಖೆ ನಿಗಮಗಳಲ್ಲಿ ಅಲ್ಪಸ್ವಲ್ಪ ಸಾಧನೆಗಳನ್ನು ಕಾಣುವಂತಾಯಿತು.

ಆರಂಭದಲ್ಲಿ ಇದ್ದ ಸ್ಫೂರ್ತಿ, ಹೋರಾಟದ ಒಗ್ಗಟ್ಟು ಪರಿಶಿಷ್ಟರ ಸಂಘಟನೆಗಳಲ್ಲಿ ಕ್ರಮೇಣ ಕಡಿಮೆಯಾಗುತ್ತಾ ಬಂದಿತು. ಸಂಘಟನೆಯ ಮುಂಚೂಣಿಯಲ್ಲಿದ್ದ ನಾಯಕರು ತಮಗೆ ಸಿಕ್ಕ ಕೆಲವು ಕನಿಷ್ಠ ಸೌಲಭ್ಯಗಳಿಗೆ ಮಾರು ಹೋಗಿ ಸಂಘಟನೆಯನ್ನು ಬಲಪಡಿಸುವಲ್ಲಿ ವಿಫಲರಾದರು. ಅವರ ಕಾರ್ಯ ಚಟುವಟಿಕೆಗಳು ಸ್ಥಗಿತವಾಗುತ್ತಾ ಬಂದವು. ಅವರಲ್ಲಿನ ನಾಯಕತ್ವಕ್ಕಾಗಿ ಪೈಪೋಟಿ, ಹಣ ದುರುಪಯೋಗ, ಅಧಿಕಾರ ದುರುಪಯೋಗದಿಂದಾಗಿ ಸಂಘಟನೆಯ ಒಗ್ಗಟ್ಟಿನಲ್ಲಿ ಬಿರುಕು ಮೂಡತೊಡಗಿತು. ಒಬ್ಬರನ್ನೊಬ್ಬರು ಕಾಲೆಳೆಯುವ ಪ್ರವೃತ್ತಿ, ಹೊಟ್ಟೆಕಿಚ್ಚು ಮತ್ತು ಅಸೂಯೆ ಭಾವನೆಗಳಿಂದಾಗಿ ತಮ್ಮ ಮೂಲೋದ್ದೇಶಗಳನ್ನೇ ಮರೆತ ಕೆಲವು ನಾಯಕರು ತಮ್ಮ ಸ್ವಾರ್ಥ ಸಾಧನೆಗಾಗಿ ಸಂಘಟನೆಯನ್ನು ಬಳಸಿಕೊಳ್ಳ ತೊಡಗಿದರು. ಪ್ರಜಾಸ್ತಾತ್ಮಕವಾಗಿ ನಡೆಯಬೇಕಾಗಿದ್ದ ಸಂಘಟನೆಗಳು ವ್ಯಕ್ತಿಗತವಾಗುತ್ತ ಬಂದವು. ಕೆಲವು ಸಂಘಟನೆಗಳು ಕೇವಲ ಲೆಟರ್ ಹೆಡ್ ಸಂಘಟನೆಗಳಾಗಿ ಉಳಿಯತೊಡಗಿದವು. ಇನ್ನೂ ಕೆಲವು ಸಂಘಟನೆಗಳು ಅದರ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳಿಗೇ ಸೀಮಿತಗೊಂಡವು. ನಿರ್ದಿಷ್ಟ ಕಾರ್ಯಕ್ರಮವಿಲ್ಲದ ಕಾರಣ ಹಾಗೂ ನಾಯಕರ ಒಳ ಜಗಳದಿಂದ ಬೇಸತ್ತ ಸದಸ್ಯರು ಸಂಘಟನೆಯನ್ನು ಬೆಳೆಸುವ ನಿಟ್ಟಿನಲ್ಲಿ ಆಸಕ್ತಿಯನ್ನು ಕಳೆದುಕೊಂಡರು.

ಈ ಬೆಳವಣಿಗೆಯಿಂದಾಗಿ ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿ ಸಾವಿರಾರು ಸಂಖ್ಯೆಯಲ್ಲಿರುವ ಪರಿಶಿಷ್ಟರ ಸಂಘಟನೆಗಳು ಒಟ್ಟಾಗಿ ಒಂದು ಬಲವಾದ ಒಕ್ಕೂಟವನ್ನು ಕಟ್ಟುವುದರಲ್ಲಿ ಸೋತವು. ಅಂಬೇಡ್ಕರ್‌ರವರ ಭಾವಚಿತ್ರವನ್ನು ಹಾಗೂ ಅವರ ಸಾಧನೆಗಳನ್ನು ತಮ್ಮ ಬೆಳವಣಿಗೆಗೆ ಮಾತ್ರ ಉಪಯೋಗಿಸಿಕೊಳ್ಳತೊಡಗಿದವು. ಅವರ ಉದ್ದೇಶಗಳಿಗೆ ಮಣ್ಣು ಹಾಕಿದವು. ಒಡೆದು ಆಳುವ ನೀತಿಯನ್ನು ಮೈಗೂಡಿಸಿಕೊಂಡಿರುವ ಆಡಳಿತ ವರ್ಗ ಪರಿಶಿಷ್ಟರ ನಾಯಕರ ಈ ದೌರ್ಬಲ್ಯಗಳನ್ನು ತಮ್ಮ ಅಸ್ತ್ರವನ್ನಾಗಿ ಬಳಸಿಕೊಂಡು ಸಂಘಟನೆಯನ್ನು ಒಡೆದು ಹಾಕುವ ತಮ್ಮ ಪ್ರಯತ್ನದಲ್ಲಿ ಸಫಲವಾದವು. ವೈಯಕ್ತಿಕ ಆಸೆ ಆಕಾಂಕ್ಷೆಗಳಿಂದಾಗಿ ಸಮೂಹದ ಭವಿಷ್ಯವನ್ನೇ ಮಾರಿಕೊಳ್ಳುವ ಕೆಲವು ನಾಯಕರನ್ನು ಗುರ್ತಿಸಿ ಅವರನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ಸಫಲರಾದರು.

ಕೆಲವು ಸಂಘಟನೆಗಳು ಅಂಬೇಡ್ಕರ್ ಜಯಂತಿಯ ಆಚರಣೆಗಳಿಗೆ ಮಾತ್ರ ಸೀಮಿತವಾದವು. ದುರದೃಷ್ಟಕರವಾದ ಈ ಬೆಳವಣಿಗೆಗೆ ಕಾರಣಗಳನ್ನು ಹುಡುಕೋಣ. ಮೊದಲನೆಯದಾಗಿ ಸಂಘಟನೆಗಳನ್ನು ಸ್ಥಾಪಿಸಿದ ನಾಯಕರು ಎರಡನೆ ಸಾಲಿನ ನಾಯಕತ್ವವನ್ನು ಬೆಳೆಸದಿರುವುದು ಅಥವಾ ತಮ್ಮ ಬಿಗಿ ಮುಷ್ಟಿಯಲ್ಲೇ ಸಂಘಟನೆಗಳು ಇಟ್ಟುಕೊಂಡಿರುವುದು. ಎರಡನೆಯದಾಗಿ ಕಾಲ ಕಾಲಕ್ಕೆ ಮಹಾ ಸಭೆಯನ್ನು ಕರೆಯದಿರುವುದು ಮತ್ತು ಹಣಕಾಸನ್ನು ದುರುಪಯೋಗ ಮಾಡುವುದು. ಮೂರನೆಯದಾಗಿ ಆಡಳಿತ ವರ್ಗದ ಒಡೆದು ಆಳುವ ನೀತಿ. ನಾಲ್ಕನೆದಾಗಿ ಕಾರ್ಮಿಕರ ಸಂಘಟನೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಪರಿಶಿಷ್ಟ ನೌಕರರು ದಲಿತ ಸಂಘಟನೆಯ ಬಗ್ಗೆ ತಾತ್ಸಾರತೆ ಹೊಂದಿರುವುದು. ಐದನೆಯದಾಗಿ ಆಡಳಿತ

ವರ್ಗ ನೀಡುವ ಆಸೆ ಆಮಿಷಗಳಿಗೆ  ನಾಯಕರುಗಳು ಬಲಿಯಾಗುವುದು. ಆರನೆಯದಾಗಿ ನಾಯಕತ್ವದ ಆಸೆಗಾಗಿ ಸಂಘವನ್ನು ವಿಭಜಿಸುವುದು ಅಥವಾ ಒಂದೇ ಕಡೆ ಎರಡು ಮತ್ತು ಮೂರನೇ ಸಂಘವನ್ನು ಸ್ಥಾಪಿಸುವುದು.

ಈ ಎಲ್ಲಾ ಕಾರಣಗಳಿಂದಾಗಿ ಕೆಲವು ಸಂಘಟನೆಗಳು ಇಂದು ತೀರಾ ದುರ್ಬಲವಾಗಿವೆ. ಕೆಲವು ತೀರಾ ನಿಷ್ಕ್ರೀಯವಾಗಿವೆ. ಹಲವೆಡೆ ಒಂದೇ ಕಡೆ ಎರಡು ಮೂರು ಸಂಘಟನೆಗಳೂ ಇವೆ. ಇದರಿಂದಾಗಿ ನೌಕರರ ಬಹುತೇಕ ಸಂಘಟನೆಗಳು ಇಂದು ಬಡವಾಗುತ್ತಿವೆ. ನಿರೀಕ್ಷಿತ ರೀತಿಯಲ್ಲಿ ಸಿಗಬೇಕಾದ ಸೌಲಭ್ಯಗಳು ಪರಿಶಿಷ್ಟರಿಗೆ ಸಿಗದಂತಾಗಿದೆ. ಅನೇಕ ಪರಿಶಿಷ್ಟ ಸಂಘಟನೆಯ ನಾಯಕರಂತೂ ಸಂಘಟನೆ ಎರಡಾದರೂ, ಮೂರಾದರೂ ಒಡೆದು ಚೂರು ಚೂರಾದರೂ ತಮ್ಮ ಕುರ್ಚಿಯಿಂದ ಕೆಳಗಿಳಿಯದೆ ಬೇರೆಯವರಿಗೆ ಸ್ಥಾನ ಬಿಡುತ್ತಿಲ್ಲ. ತಾವು ನಿಷ್ಕ್ರೀಯವಾದರೂ ಸದಸ್ಯರ ನಂಬಿಕೆ ಕಳೆದುಕೊಂಡರೂ ನಾಯಕರೆನಿಸಿಕೊಳ್ಳಬೇಕು, ಇದಕ್ಕಾಗಿ ಸದಸ್ಯರ ಹಿತವನ್ನು ಬಲಿ ಕೊಟ್ಟರೂ ಚಿಂತೆಯಿಲ್ಲ. ತಮ್ಮ ಸಾರ್ವಭೌಮತ್ವ ಮಾತ್ರ ಮುಂದುವರೆಯಬೇಕು. ಈ ಹಠಮಾರಿತನದ  ನಾಯಕರಿಂದಾಗಿ ಅವರು  ಈ ದುರಾಸೆಯಿಂದಾಗಿ ಸ್ವಾರ್ಥತೆಯಿಂದಾಗಿ ಇಂದು ಅನೇಕ ಸಂಘಟನೆಗಳು ನೆಲಕಚ್ಚಿವೆ. ಹಲವು ತೂಗಾಡುತ್ತಿವೆ. ಕೆಲವು ತೂಕಡಿಸುತ್ತಿವೆ.  ಇಲ್ಲವೇ ನಾಯಕರ ಬ್ಯಾಗುಗಳಲ್ಲಿ ಹಾಳೆಗಳಾಗಿ ಮುದುರಿಹೋಗುತ್ತಿವೆ.

ಕರ್ನಾಟಕ ನೆಲದಲ್ಲಿ ನಡೆದ ಚಳುವಳಿಗಳ ಪೈಕಿ ಅತ್ಯಂತ ಹೆಚ್ಚಿನ ನಿರೀಕ್ಷೆ ಮೂಡಿಸಿದ್ದು ದಲಿತ ಚಳುವಳಿ. ಅಂದರೆ ಸಮಾಜವಾದಿ ಚಳುವಳಿ ಮತ್ತು ರೈತ ಚಳುವಳಿಗೆ ಹೋಲಿಸಿದರೆ ಹೆಚ್ಚು ದೂರದ ಗುರಿಗಳಿದ್ದುದು ದಲಿತ ಚಳುವಳಿಗೆ. ಹಾಗಂತ ಈ ಮೂರು ಚಳುವಳಿಗಳದು ಪ್ರತ್ಯೇಕ ನೆಲೆಗಟ್ಟು, ಪ್ರತ್ಯೇಕ ದಾರಿ, ಪ್ರತ್ಯೇಕ ಸ್ವರೂಪದ ಹೋರಾಟ ಅಂತ ಹೇಳಲು ಬರುವುದಿಲ್ಲ. ಅರವತ್ತರ ದಶಕದಲ್ಲಿ ತಲೆ ಎತ್ತಿದ ಸಮಾಜವಾದಿ ಚಳುವಳಿ, ಎಪ್ಪತ್ತರ ದಶಕದಲ್ಲಿ ನೆಲೆಗೊಂಡ ರೈತ ಹಾಗು ದಲಿತ ಚಳುವಳಿಗೆಳೆಲ್ಲಾ ಪರಸ್ಪರ ಪೂರಕವಾದವೇ. ಜಾತಿ ಸಂಬಂಧಿತ ನೆಲೆಗಟ್ಟು ಚಳುವಳಿಗಳ ನೆಲೆಗಟ್ಟಿನಲ್ಲಿ ವೈರುಧ್ಯಗಳನ್ನು ಮೂಡಿಸಿತುವಾದರೂ ಒಂದರ್ಥದಲ್ಲಿ ಎಲ್ಲಾ ಚಳುವಳಿಗಳ ಒಳಬಂಧಗಳು ಪರಸ್ಪರ ಪ್ರಭಾವ ಹೊಂದಿದ್ದವು ಎಂಬುದನ್ನು ಮರೆಯಲಾಗದು. ಎಪ್ಪತ್ತರ ದಶಕದಲ್ಲಿ ದಲಿತ ಚಳುವಳಿ ಆರಂಭಗೊಂಡಾಗ ಅಂತಹದೊಂದು ವಿಸ್ತೃತ ನೆಲೆಗಟ್ಟನ್ನು ಅದು ಪಡೆಯುತ್ತದೆಂಬ ನಿರೀಕ್ಷೆಗಳಿದ್ದವು. ಇಂತಹ ನಿರೀಕ್ಷೆಗೆ ಮುಖ್ಯ ಕಾರಣವೆಂದರೆ ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಅವರ ವಾದವನ್ನು ಮೈಗೂಡಿಸಿ ಕೊಂಡ ಮುಂಚೂಣಿ ನಾಯಕರ ಸ್ವೀಕರಿಗೆ ಸಮಾಜವಾದದ ಹಿನ್ನೆಲೆಯಿತ್ತು. ಹಾಗೆಯೇ ಸಮಾಜವದಿ ಚಳುವಳಿಯ ನೆಲೆಯಿಂದ ಬಂದ ಹಿಂದುಳಿದ, ಒಕ್ಕಲಿಗ, ಲಿಂಗಾಯಿತ ವರ್ಗದ ವ್ಯಕ್ತಿಗಳಿಗೂ ದಲಿತ ಚಳುವಳಿಯೊಂದಿಗೆ ನಿಲ್ಲುವುದು ನೈತಿಕ ಸಂಗತಿ ಅನ್ನಿಸಿತು. ಒಟ್ಟಾರೆಯಾಗಿ ಅವತ್ತು ದಲಿತ ಚಳುವಳಿ ಎಂದರೆ ಶೋಷಿತರೆಲ್ಲರ ಚಳುವಳಿ ಎಂಬ ಭಾವನೆಯಿತ್ತು. ಆದರೆ ಕಾಲಕ್ರಮೇಣ ದಲಿತ ಚಳುವಳಿ ಎಂದರೆ ಅಂಬೇಡ್ಕರ್‌ವಾದಿಗಳ ಚಳುವಳಿ, ಪರಿಶಿಷ್ಟರ ಚಳುವಳಿ ಎಂಬ ಭಾವನೆ ದಟ್ಟವಾಗಿರುವುದು ಎಂತಹ ವಿಪರ್ಯಾಸವಲ್ಲವೆ?

**ಆ) ಪ್ರಮುಖ ದಲಿತ ಹೋರಾಟಗಳು**

ಅಸ್ಪೃಶ್ಯತೆಯ ವಿರುದ್ಧ ಹೋರಾಡಿರುವುದನ್ನು ಕಿ.ಪೂ. ೫೦೦ ರಲ್ಲಿ ಬುದ್ಧನ ಕಾಲದಿಂದಲೇ ಕಾಣಬಹುದು. ಅಧ್ಯಾತ್ಮಿಕ ಮತ್ತು ತಾತ್ವಿಕ ವಿರೋಧಿಗಳು ಅಸ್ಪೃಶ್ಯತೆಯನ್ನು ವಿರೋಧಿಸಿದರೂ ಶತಮಾನಗಳನಂತರ ಸ್ವಲ್ಪ ಬೆಣವಣಿಗೆಯಾಗಿದೆ. ತದನಂತರ ಕಾಣಿಸಿಕೊಂಡ ಭಕ್ತಿ ಪಂಥವು ಜಾತಿಯನ್ನು ಅಲ್ಲಗಳೆಯುವ ರೀತಿ ಬೇಳೆಯಿತು. ಆಂಧ್ರದ ವೇಮನ್ನ, ಉತ್ತರ

ಭಾರತದ ಕಬೀರ್, ಕರ್ನಾಟಕದ ಕೈವಾರ ನಾರಾಯಣಪ್ಪ, ಕನಕದಾಸ, ಮುಂತಾದ ಶೂದ್ರ ಕವಿಗಳು ತಮ್ಮ ಪ್ರತಿಭಟನೆಯನ್ನು ಸೂಚಿಸಿ ಆಧ್ಯಾತ್ಮಿಕ ವಿರೋಧ ಸ್ಥಾಪಿಸಿದರು. ವಚನ ಚಳುವಳಿ ಕಾಲದಲ್ಲಿ ಶೂದ್ರಕವಿಗಳನ್ನು ಮೀರಿ ಅಸ್ಪೃಶ್ಯ ವಚನಕಾರರಾದ ಡೋಹರಕಕ್ಕಯ್ಯ, ಮಾದಾರಚನ್ನಯ್ಯ, ಹರಳಯ್ಯ ಇವರುಗಳು ಕಾಣಿಸಿಕೊಂಡರು. ಅವರೆಲ್ಲರ ಆಶಯ ಅಸ್ಪೃಶ್ಯತೆಯ ವಿರುದ್ಧ ಅಷ್ಟೆ ಅಲ್ಲದೆ ಒಟ್ಟು ಸಾಮಾಜಿಕ ಪರಿಸ್ಥಿತಿಯ ಬದಲಾವಣೆಗಾಗಿ ತುಡಿಯಿತು.

ಎಂ.ವಿ. ಶ್ರೀನಿವಾಸರ ಪ್ರಕಾರ ಮೇಲ್ಜಾತಿಯ ಬಲಾಢ್ಯ ನಾಯಕರು ಆರ್ಥಿಕ ಮತ್ತು ರಾಜಕೀಯ ಅವಕಾಶಗಳಿಗೆ ಸ್ಪಂದಿಸುತ್ತಿದ್ದರೇ ಹೊರತು. ಸಾಮಾಜಿಕವಾಗಿ ದೂರ ಉಳಿಯುತ್ತಿದ್ದರು. ಅವರಿಗೆ ಅಸ್ಪೃಶ್ಯರನ್ನು ಬಡವರನ್ನಾಗಿ ಮತ್ತು ಅಜ್ಞಾನರನ್ನಾಗಿ ಮಾಡುವ ಹಿತಾಸಕ್ತಿಯಿತ್ತು. ಅಸ್ಪೃಶ್ಯರು ಹೆಚ್ಚು ಮಂದಿ ಕೃಷಿಕಾರ್ಮಿಕರಿದ್ದರು. ಅವರು ವಿದ್ಯಾವಂತರಾದರೆ ತಮ್ಮ ಸ್ಥಾನಮಾನಗಳೇನು ಎಂದು ಹೆದರಿದರು.

ಬ್ರಿಟೀಷರ ಅಂಕೆಗೊಳಪಟ್ಟ ಕೆಲವು ರಾಜರು ಸಾಮಂತ ಬ್ರಿಟೀಷರಂತೆ ತಮ್ಮ ಉದಾರತನ ತೋರಲು ಮುಂದಾದರು. ಅವರಲ್ಲಿ ಮೈಸೂರು ಜಯಚಾಮರಾಜೇಂದ್ರ ಒಡೆಯರು ಮುಖ್ಯರು. ಭಾರತದ ವಿವಿಧ ಭಾಗಗಳಲ್ಲಿನ ರಾಜರು ದಲಿತರ ವಿದ್ಯೆಗೆ ನೀಡಿದ ಪ್ರೋತ್ಸಾಹದಿಂದಾಗಿ ಡಾ. ಬಿ.ಆರ್. ಅಂಬೇಡ್ಕರ್‌ರಂತವರು ಹೆಚ್ಚಿನ ವಿಧ್ಯಾಭ್ಯಾಸ ಮಾಡಲು ಸಹಾಯಕವಾಯಿತು. ಕರ್ನಾಟಕದಲ್ಲಿ ೧೮೯೦ ರ ದಶಕಲ್ಲಿ ಸರ್ಕಾರ ಅಸ್ಪೃಶ್ಯರಿಗೆ ಪ್ರತ್ಯೇಕ ಶಾಲೆಗಳನ್ನು ಪ್ರಾರಂಭಿಸಿದರು. ಅಲ್ಲಿಂದ ಮುಂದಕ್ಕೆ ೧೯೨೩ರಲ್ಲಿ ಮೈಸೂರಿನ ಟೌನ್ ಹಾಲ್‌ನಲ್ಲಿ ನಡೆದ ಸಮ್ಮೇಳನದಲ್ಲಿ ಅಸ್ಪೃಶ್ಯ ಜಾತಿಗಳು ತಮ್ಮ ಹಕ್ಕು ಬಾಧ್ಯತೆಗಾಗಿ ಹೋರಾಟ ನಡೆಸಿರುವುದು ತಿಳಿಯುತ್ತದೆ. ೧೯ನೇ ಶತಮಾನದಲ್ಲಿ ಅಸ್ಪೃಶ್ಯರ ಸಾಮಾಜಿಕ ಸ್ಥಿತಿಗಳು ಮೊದಲಿನಷ್ಟು ಜಿಡ್ಡುಗಟ್ಟಲಾರದೆ ಅರಳಿದವು.

೧೯೧೫ ೧೬ ರ ಸುಮಾರಿಗೆ ಕರ್ನಾಟಕದಲ್ಲಿ ಮುಂದುವರೆದ ಸಂಖ್ಯೆಯಲ್ಲಿ ಒಕ್ಕಲಿಗ ಮತ್ತು ಲಿಂಗಾಯತ ಜಾತಿಗಳ ಮುಖಂಡರು ಬ್ರಾಹ್ಮಣ ವಿರೋಧಿ ಚಳುವಳಿಯನ್ನು ಹುಟ್ಟುಹಾಕಿದರೆಂದು ಹೇಳಬಹುದು. ಮಿಲ್ಲರ್ ಆಯೋಗದಲ್ಲಿ ಹೆಚ್ಚಿನ ಉದ್ಯೋಗಾವಕಾಶಗಳನ್ನು ಒದಗಿಸುವಂತೆ ವರದಿಮಾಡಿತು. ಆದರೆ ಅಸ್ಪೃಶ್ಯ ಜಾತಿ ಕುರಿತು ಯಾವುದೇ ವಿಶೇಷ ರಿಯಾತಿ ಕೊಡುವಂತೆ ವರದಿಯಲ್ಲಿ ತಿಳಿಸಲಿಲ್ಲ. ಅದರನಂತರದ ನಾಯಕರು ಇದರ ಬಗ್ಗೆ ಆಸ್ಥೆ ವಹಿಸಿದರು. ಇದು ಬ್ರಾಹ್ಮಣ ಅಸ್ಪೃಶ್ಯರ ಮಧ್ಯೆ ಜಗಳವಾಗಿ ನಿಂತಿತು. ಆದರೂ ಅದು ಬ್ರಾಹ್ಮಣರ ಪರ ಮತ್ತು ವಿರೂಧಿಯಾಗಿಯೇ ಬೆಳೆಯುತ್ತಾ ಬಂತು.

ಸ್ವಾತಂತ್ರ್ಯ ನಂತರ ಡಾ.ಬಿ.ಆರ್. ಅಂಬೇಡ್ಕರ್ ಅವರು ಅಸ್ಪೃಶ್ಯ ಜಾತಿಗಳನ್ನು ಪಟ್ಟಿ ಮಾಡಿ ಜಾತಿ ಮತ್ತು ಪಂಗಡಗಳೆಂದು ಕರೆದು ಸಂವಿಧಾನದ ೧೫ (೪) ೨೧೬ (೪) ರಲ್ಲಿ ಹಿತ ರಕ್ಷಿಸಿದರು. ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಜನ ಅಸಂಘಟಿತರಾಗಿದ್ದ ಆಂತರಿಕ

ಮನ ಕ್ಷೋಭೆಯಿಂದ ನರಳುತ್ತಿದ್ದರು. ಅಷ್ಟೇ ಅಲ್ಲದೆ ಸಂಘಟಿತರಾಗಿ ವೇದಿಕೆಗಳನ್ನು ರಚಿಸಿಕೊಂಡಿದ್ದು ಕಡಿಮೆ ಎಂದು ಹೇಳಬೇಕು. ಬದಲಿಗೆ ಸರಕಾರದ ಆಶ್ರಯದಾತ ಮನೋಭಾವವನ್ನು ಹೆಚ್ಚು ಮಾಡಿಕೊಳ್ಳುತ್ತಾ ಬಂದರು. ಡಾ.ವಿ.ಲಕ್ಷ್ಮೀನಾರಾಯಣರ ಪ್ರಕಾರ ಪ್ರತಿನಿಧಿ ಸಭೆಗಳಲ್ಲಿ ಅಸ್ಪೃಶ್ಯರ ಸಮಸ್ಯೆಗಳನ್ನು ಪರಿಹರಿಸಲು ಪ್ರಯತ್ನಿಸಿದ್ದು ಮೊದಲ ತಲೆಮಾರು. ಅವರಲ್ಲಿ ಬೆಂಗಳೂರಿನ ಶ್ರೀ ಮುರುಗೇಶ್ ಪಿಳ್ಳೆ, ಕೆ.ಜಿ.ಎಫ್ ನ ಶ್ರೀ ಪೂಸಂ, ಚಿತ್ರದುರ್ಗದ ಶ್ರೀದೊಡ್ಡಯ್ಯ ಇತರರು.

ಎರಡನೇ ತಲೆಮಾರಿನ ನಾಯಕರು ಸಮಾಜದ ಮೇಲಿನ ಹಂತಕ್ಕೆ ದಲಿತರನ್ನು ಎತ್ತರಿಸುವುದು, ಕೆಟ್ಟ ಚಟಗಳ ವಿರುದ್ಧ ಪ್ರಚಾರ, ವಿದ್ಯಾಭ್ಯಾಸದ ಪ್ರಚಾರ ಮುಂತಾದ ಕೆಲಸಗಳಲ್ಲಿ ತೊಡಗಿದರು. ೧೯೭೦ ರಲ್ಲಿ ಕಂಡು ಬಂದ ಭಿನ್ನವಾದ ವಿದ್ಯಾವಂತರ ಗುಂಪು ಮೂರನೇ ತಲೆಮಾರು. ಇವರು ಎರಡನೇ ತಲೆಮಾರಿಗಿಂತ ಭಿನ್ನವಾಗಿ ಯೋಚಿಸಿದರು.

ಮೂರನೇ ತಲೆಮಾರಿನ ದಲಿತರು ವ್ಯಾಪಕ ಅಂಬೇಡ್ಕರ್ ಸ್ಫೂರ್ತಿಯೊಂದಿಗೆ ತಮ್ಮ ದಲಿತತನವನ್ನು ಸಾಮಾಜಿಕ ಚಳುವಳಿಯನ್ನಾಗಿ ಪರಿವರ್ತಿಸುವಲ್ಲಿ ಮುಂದಾದರು. ೧೯೭೦ ರ ಸುಮಾರಿಗೆ ಕರ್ನಾಟಕದಲ್ಲಿ ನಡೆದ ಹಿಂದುಳಿದ ವರ್ಗಗಳ ಎಚ್ಚರ, ಬ್ರಾಹ್ಮಣ ವಿರೋಧಿ ಭಾವನೆ ಒಂದು ಬದಲಾವಣೆಗೆ ದಾರಿ ಮಾಡಿತು.

ಒಟ್ಟಾರೆ ದಲಿತರಿಗೆ ತಮ್ಮ ಹಕ್ಕುಗಳನ್ನು ನೆನಪಿಸುವಂತೆ ಅಂಬೇಡ್ಕರ್ ಸ್ಫೂರ್ತಿ ಕೆಲಸ ಮಾಡಿತು. ಜೊತೆಗೆ ಹಿಂದುಳಿದ ಮತ್ತು ಮುಂದುವರಿದ ವರ್ಗಗಳ ಹಿತಾಸಕ್ತಿಗಳು ರಾಜಕೀಯವಾಗಿ ದಲಿತರಿಗೆ ವಿರುದ್ಧವಿದ್ದವು. ಸಾಮಾಜಿಕವಾಗಿ ನಿಷ್ಕ್ರಿಯಗೊಂಡಿದ್ದ ಜನ ಬಾವಿಗಳಲ್ಲಿ ನೀರು ತೆಗೆಯುವುದು, ಊರಿನ ಮಧ್ಯೆ ರಸ್ತೆಗಳಲ್ಲಿ ಎಲ್ಲರಂತೆ ನಿರ್ಭಯವಾಗಿ ಓಡಾಡುವುದು, ಇನಾಮತಿ ಜಮೀನಿನಿಂದ ಕಂದಾಯ ಜಮೀನಿನವರೆಗೆ ಹಕ್ಕನ್ನು ಸ್ಥಾಪಿಸುವುದು ಮುಂತಾದ ವಿಷಯಗಳಲ್ಲಿ ಭಿನ್ನತೆ ಕಾಣಿಸಿಕೊಂಡಾಗಲೆಲ್ಲ ಘರ್ಷಣೆ ರಾಜಿ ಎರಡೂ ನಡೆದವು.

ಚರಿತ್ರೆಯನ್ನು ಸಾಫಲ್ಯ ವೈಫಲ್ಯಗಳ ದೃಷ್ಟಿಯಲ್ಲಿ ನೋಡಿದರೂ ಅಸ್ಪೃಶ್ಯರ ಕತ್ತಲು ಪ್ರಯಾಣಕ್ಕೆ ದಿಕ್ಕಾದದ್ದು ಅಂಬೇಡ್ಕರ್ ರಾಷ್ಟ್ರ ಮಟ್ಟದಲ್ಲಿ ೧೯೨೦ ರಿಂದ ೧೯೪೬ ರವರೆಗಿನ ಹೋರಾಟಗಳು ಕರ್ನಾಟಕದಲ್ಲಿಯೂ ಅವರ ಪ್ರಭಾವ ಮೇಲ್ಮಟ್ಟದಲ್ಲಷ್ಟೆ ಉಳಿದು ರಾಜಕೀಯ ಪ್ರವೇಶಿಸಿದವರಿಗಷ್ಟೇ ಸ್ಫೂರ್ತಿ ಆಗಿದ್ದರು. ಮುಂದಿನ ದಶಕಗಳಲ್ಲಿ ಅವರ ಸ್ಫೂರ್ತಿ ತಳಕ್ಕೆ ಪ್ರವೇಶಿಸಿತು ಎನ್ನಬಹುದು.

೧೯೭೦ ರ ಸುಮಾರಿಗೆ ಕರ್ನಾಟಕದಲ್ಲಿ ಹಿಂದುಳಿದ ಜಾತಿಗೆ ಸೇರಿದ ಶ್ರೀದೇವರಾಜ

ಅರಸು ಮುಖ್ಯ ಮಂತ್ರಿಯಾದರು. ಸಣ್ಣ, ಅತಿಸಣ್ಣ ಹಿಂದುಳಿದ ಜಾತಿಗಳ ಬೆಂಬಲ ಪಡೆದು ಅವರಿಗೆ ನೆರವಾಗಲು ಹಾವನೂರು ಆಯೋಗವನ್ನು ಜಾರಿಗೊಳಿಸಿದರು. ಜೊತೆಯಲ್ಲೆ ದಲಿತರಿಗೆ ಹೆಚ್ಚಿನ ಸರಕಾರಿ ಅವಕಾಶಗಳನ್ನು ಒದಗಿಸಿದರು. ಮೀಸಲಾತಿಯನ್ನು ಹಿಂದುಳಿದವರಿಗೆ ವಿಸ್ತರಿಸಿ ರಾಜಕೀಯವಾಗಿ ಹಿಂದುಳಿದವರ ಮತ್ತು ದಲಿತರ ಧೃವೀಕರಣವನ್ನು ಸಾಧಿಸಿದರು. ಇದು ಬ್ರಾಹ್ಮಣ ವಿರೋಧಿ ಚಳುವಳಿಗೆ ಜೀವ ತುಂಬಿತು. ಆದರಿಂದ ಅರಸರ ಕಾಲದಲ್ಲಿ ಸೌಲಭ್ಯಗಳನ್ನು ಪಡೆದ ದಲಿತರು ಸರಕಾರಿ ಬ್ರಾಹ್ಮಣರು ಎಂಬ ಹಣೆಪಟ್ಟಿ ಹಚ್ಚಿಕೊಳ್ಳಬೇಕಾಯಿತು.

ಕೆಲವು ದಲಿತ ನಾಯಕರು ಪಕ್ಷಾತೀತವಾದ ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡು ಹೋರಾಡಿದ್ದು ಉಂಟು. ೧೯೬೯ರಲ್ಲಿ ಪ್ರಾರಂಭವಾದ ದಲಿತಕ್ರಾಂತಿ ದಳ ಒಂದು. ಭಾಗವಹಿಸಿದವರಲ್ಲಿ ಶ್ರೀ ಬಿ.ಬಸವಲಿಂಗಪ್ಪ, ಶ್ರೀ ಕೆ.ಹೆಚ್. ರಂಗನಾಥ್ ಮತ್ತಿತರು. ಕರ್ನಾಟಕದ ಚಳುವಳಿಗಳಲ್ಲಿ ನಿರತರಾಗಿದ್ದ ಲೋಹಿಯಾ ವಾದಿಗಳು ಕಾಗೋಡಿನ ಸತ್ಯಾಗ್ರಹದ ನಂತರ ಯಾವುದೇ ಸಮುದಾಯ ಚಳುವಳಿಗಳನ್ನು ಕಾರ್ಯಕರ್ತರನ್ನು ಆಧರಿಸಿ ಕಟ್ಟಲು ವಿಫಲವಾದ ಇವರು ನವ ನಿರ್ಮಾಣ ಕ್ರಾಂತಿ. ಜೆ.ಪಿ.ಚಳವಳಿ ರೈತ ಚಳುವಳಿಗಳಂತಹ ಸ್ಫೂರ್ತಿ ಚಳುವಳಿಗಳ ಬಾಲಂಗೋಚಿಯಾದ ಒಂದು ಪ್ರಬಲ ವೈಚಾರಿಕ ಅಲೆಯನ್ನು ಸೃಷ್ಟಿಸಿದ್ದು, ಇದು ಇಂದಿನ ದಲಿತರ ತಲೆಮಾರಿನ ಬುದ್ಧಿಜೀವಿಗಳಿಗೆ ಒಂದು ರೀತಿಯ ಮಾನಸಿಕ ತಯಾರಿ ಮಾಡಿತು. ಆದರೆ ದಲಿತ ಸಾಹಿತಿಗಳು ಇನ್ನೂ ಮುಂದೆ ಹೋಗಿ ಬ್ರಾಹ್ಮಣ ಶೂದ್ರ ದಲಿತ ಸಮೀಕರಣದ ವೈರುಧ್ಯಗಳನ್ನು ಪ್ರಕಟಿಸತೊಡಗಿದರು.

ಅದೇ ದಶಕದಲ್ಲಿ ದಿವಂಗತ ಶ್ಯಾಂಸುಂದರ್ ಅವರು ಕಟ್ಟಿದ ಭೀಮಸೇನೆ ಕರ್ನಾಟದಲ್ಲಷ್ಟೆ ಅಲ್ಲದೆ ಆಂಧ್ರ ಪ್ರದೇಶ ಮತ್ತು ಮಹಾರಾಷ್ಟ್ರದಲ್ಲೂ ತನ್ನ ಪ್ರಭಾವ ಬೀರಿತು.

ಮೂಲದಲ್ಲಿ ಅಂಬೇಡ್ಕರ್ ವಾದಿಯಾಗಿದ್ದ ಶ್ರೀ ಬಿ.ಬಸವಲಿಂಗಪ್ಪನವರು ಮೈಸೂರಿನಲ್ಲಿ ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗ ಏರ್ಪಡಿಸಿದ್ದ ಗೋಷ್ಠಿಯನ್ನು ಉದ್ದೇಶಿಸಿ ಮಾತನಾಡಿದರು. ನಿಂತು ನೀರಾಗಿರುವ ಹಿಂದೂ ಸಮಾಜವನ್ನು ಚಲನಶೀಲಗೊಳಿಸಬೇಕು. ಅದಕ್ಕಾಗಿ ಧರ್ಮ ಬಿಟ್ಟರೂ ಪರವಾಗಿಲ್ಲ. ಹಿಂದು ದೇವರನ್ನು ಬಿಟ್ಟರೂ ಚಿಂತೆಯಿಲ್ಲ, ಆದರೆ ಕಾಲಕ್ಕೆ ತಕ್ಕಂತೆ ಚಲನಶೀಲರಾಗಿ. ಹಿಂದೂ ಧರ್ಮದಲ್ಲಿ ಮೇಲುಕೀಳು ಜಾತಿಗಳಿವೆ. ಮುಸ್ಲಿಂ. ಕ್ರೈಸ್ತ ಧರ್ಮಗಳಲ್ಲಿ ಈ ಹೊಲಸು ಇಲ್ಲ. ಹಿಂದೂ ಧರ್ಮದಲ್ಲಿ ಎಲ್ಲಾ ಹುಳುಗಳಿಗೆ ಜನ್ಮವಿದೆ. ಸಾವಿದೆ. ನಾವು ಸ್ಥಿರಗೊಂಡ ಸಮಾಜವನ್ನು ಅಲುಗಾಡಿಸಲು ಪ್ರಾರಂಭಿಸಿದರೆ ಆಗ ತಮ್ಮ

ವಿಕಾರ ಮುಖಗಳು ಗೋಮುಖ ವ್ಯಾಘ್ರಗಳು ನಮಗೆ ಕಾಣಿಸುತ್ತವೆ. ಜಾತಿ ಆದಾಯಕರ ವೃತ್ತಿಯಾಗಿದೆ. ಅದರಿಂದ ಜಾತಿ ಯಾರಿಗೆ ಆದಾಯ ತರದ ಧರ್ಮವಾಗಿದೆಯೊ ಅಂತಹವರು ವಿರೋಧಿಸಬೇಕು.

ಇದೇ ಕಾಲದಲ್ಲಿ ಮಹಾರಾಷ್ಟ್ರದಲ್ಲಿ ದಲಿತರ ಮೇಲೆ ನಡೆಯುತ್ತಿದ್ದ ಕೊಲೆ, ದಬ್ಬಾಳಿಕೆ, ಪ್ರತಿಭಟಿಸಿ ಅಲ್ಲಿನ ಯುವಕರು ಆರ್.ಪಿ.ಐನ ನಿಷ್ಕ್ರಿಯತೆಯನ್ನು ಖಂಡಿಸಿ ದಲಿತ ಪ್ಯಾಂಥರ್ ಸಂಘಟನೆ ಕಟ್ಟಿ ಸರಕಾರಕ್ಕೆ ಪ್ಯಾಂಥರ್‌ಗಳಾಗಿ ಸವಾಲು ಹಾಕಿದರು.

೧೯೭೪ ರ ಸುಮಾರಿಗೆ ಭದ್ರಾವತಿಯಲ್ಲಿ ದಲಿತ ಸಂಘರ್ಷ ಸಮಿತಿ ಪ್ರಾರಂಭವಾದರೆ, ಬೆಂಗಳೂರಿನಲ್ಲಿ ದಲಿತ ಕ್ರಿಯಾಸಮಿತಿ, ಮೈಸೂರು ಕೋಲಾರಗಳಲ್ಲಿ ದಲಿತ ವಿದ್ಯಾರ್ಥಿ ಒಕ್ಕೂಟಗಳು ಪ್ರಾರಂಭವಾದವು. ಸಾಹಿತ್ಯ ಕ್ಷೇತ್ರದಲ್ಲಿ ಬೆರಳಣಿಕೆಯಷ್ಟಿದ್ದ ಬರಹಗಾರರು ೧೯೭೬ರ ಡಿಸೆಂಬರ್‌ನಲ್ಲಿ ಎಲ್ಲರ ಗಮನ ಸೆಳೆಯುವಂತೆ ದಲಿತ ಲೇಖಕರ ಮತ್ತು ಕಲಾವಿದರ ಯುವ ಸಂಘಟನೆಯ ಸಮ್ಮೇಳನ ಭದ್ರಾವತಿಯಲ್ಲಿ ನಡೆಯಿತು. ಎಲ್ಲಾ ಜಿಲ್ಲೆಗಳಲ್ಲಿ ಸಂಘಟನೆ ಚುರುಕುಗೊಂಡು ರಾಜ್ಯಾದ್ಯಂತ ೧೯೭೮ ರಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಪ್ರಾರಂಭಿಸಿದರು. ಚಳುವಳಿಯ ಒಂದೊಂದು ಸಮಸ್ಯೆಗಳನ್ನು ಮುಂದಿಟ್ಟುಕೊಂಡು ಬೇರೆ ಬೇರೆ ಕಡೆ ಬೆಳೆಯಿತು.

ಅಂಬೇಡ್ಕರ್ ಸಾಹಿತ್ಯದಿಂದ ಸಾಮಾಜಿಕ ಸಂಘರ್ಷಣೆಯಲ್ಲಿ ಬೇಯುತ್ತಿದ್ದ ವಿದ್ಯಾರ್ಥಿ ಯುವ ಜನರು ಸುಡುವ ಸಮಸ್ಯೆಗಳನ್ನು ಎದುರಿಸಿ ಹೋರಾಟದ ಪಾಠಗಳನ್ನು ಕಲಿತರು. ಆ ಹೋರಾಟಗಳಲ್ಲಿ ವಿದ್ಯಾರ್ಥಿ ಸಮಸ್ಯೆ, ಹಳ್ಳಿಗಾಡಿನ ಜನರ ಹಲ್ಲೆ ದೌರ್ಜನ್ಯ ಸಮಸ್ಯೆ ಭೂ ಸಮಸ್ಯೆಗಳು ಸೇರಿದ್ದವು.

೧೯೨೪ ರಿಂದ ೧೯೫೪ ಅವಧಿಯಲ್ಲಿ ಡಾ.ಅಂಬೇಡ್ಕರ್ ನಡೆಸಿದ ಮಾದರಿಯಲ್ಲೆ ಎಲ್ಲಾ ಅಸ್ಪೃಶ್ಯ ಜಾತಿಗಳನ್ನು ಒಳಗೊಂಡು ಒಂದು ಸೀಮಿತ ಅರ್ಥದಲ್ಲಿಯಾದರೂ ವಿಶಾಲವಾಗಿತ್ತು. ತನ್ನೊಳಗೆ ತಲೆ ಎತ್ತುವ ಜಾತಿ ವಿಷವನ್ನು ಮೊದಲು ತಾನೇ ಸಾಯಿಸಿಕೊಳ್ಳುವ ದಿಕ್ಕಿನಲ್ಲಿ ಹೆಜ್ಜೆ ಇರಿಸಿತ್ತು. ಅಸ್ಪೃಶ್ಯರ ಒಳಗೇನೆ ಇದ್ದ ಎಡ ಬಲ ಬೇಧ ಅಮುಖ್ಯ ಮಾಡುವಲ್ಲಿ ಚಳುವಳಿ ೧೯೭೮-೮೪ ವರೆಗೆ ಉತ್ಕೃಷ್ಟ ಮಟ್ಟದಲ್ಲಿ ದುಡಿಯಿತು.

ಚಳುವಳಿಯು ಹೋರಾಟದ ಹಾದಿಯಲ್ಲಿ ವಿದ್ಯಾರ್ಥಿಗಳನ್ನು, ನೌಕರರನ್ನು, ಮಹಿಳೆಯರನ್ನು ಸಂಘಟಿಸಲನುವಾಗುವಂತೆ ಬೇರೆ ಬೇರೆ ಒಕ್ಕೂಟಗಳನ್ನು ರಚಿಸಿತು. ಅವು

ದ.ಸಂ.ಸ ನಿರ್ದೇಶನದಲ್ಲಿ ಸಭೆ, ಸಮ್ಮೇಳನ, ತರಬೇತಿ ಶಿಬಿರ ಇತ್ಯಾದಿ ನಡೆಸಿದವು. ಅಂಬೇಡ್ಕರ್‌ರು ಹೋರಾಡುತ್ತಿದ್ದಾಗ ಯಾವ್ಯಾವ ವಿಧಾನಗಳನ್ನು ಬಳಸುತ್ತಿದ್ದರೂ ಎಲ್ಲಾ ವಿಧಾನಗಳನ್ನು ಬಳಸಿ ಜನರಿಗೆ ಒಳಿತಾಗುವಂತೆ ಚಳುವಳಿ ಮುನ್ನಡೆಯಿತು.

೧೯೭೦ ರ ಸುಮಾರಿಗೆ ಪ್ರಗತಿಪರ ಸಾಹಿತಿಗಳು ತೀವ್ರಗತಿಯಲ್ಲಿ ಕಾಣಿಸಿಕೊಳ್ಳಲಾರಂಭಿಸಿದರು. ಸಾಹಿತ್ಯದಲ್ಲಿ ದಲಿತ ಸಮಸ್ಯೆಗೆ ಪರಿಹಾರ ಕೊಡಲಾರಂಭಿಸಿದರು. ಅದೇ ದಶಕದಲ್ಲಿ ಬಂಡಾಯ ಸಾಹಿತ್ಯ ಚಳುವಳಿ ಕಾಣಿಸಿಕೊಂಡಿತು. ಬಂಡಾಯ ಸಾಹಿತ್ಯ ಚಳುವಳಿ ಹುಟ್ಟಲು ಕಾರಣ, ೫೧ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಅಂಬೇಡ್ಕರ್ ಸಾಹಿತ್ಯದ ಬಗ್ಗೆ ಗೋಷ್ಠಿ ಏರ್ಪಡಿಸಲು ನಿರಾಕರಿಸಿದ್ದು, ಅದರಿಂದ ಪ್ರಗತಿಪರರು ಮತ್ತು ದಲಿತರು ಕೂಡಿ ಬಂಡಾಯ ಸಾರಿದರು. ವಿಮರ್ಶಕರು ಪ್ರಾರಂಭದಲ್ಲಿ ಈ ಚಳುವಳಿಯನ್ನು ಗಂಭೀರವಾಗಿ ಪರಿಗಣಿಸಿದರು. ಬಂಡಾಯ ಸಾಹಿತ್ಯ ದಲಿತರ ಸ್ವಂತಿಕೆ ಮತ್ತು ಸ್ವಾಭಿಮಾನವನ್ನು ಬೆಂಬಲಿಸಿತು. ಉಳ್ಳವರ ಬಗ್ಗೆ ಇದ್ದ ಆಕ್ರೋಶವನ್ನು ಜಾಸ್ತಿ ಮಾಡಿತು.

ಹಾಗಾಗಿ ಸಾಹಿತ್ಯ ಕ್ಷೇತ್ರದಲ್ಲಿ ಶಕ್ತಿಯುತವಾದ ಸೃಜನಶೀಲ ಬರಹಗಾರರ ಆಗಮನವಾಯಿತು. ದಲಿತ ಚಳುವಳಿಗೆ ಯುವ ಬರಹಗಾರರನ್ನು ಗುರುತಿಸಲು ಸಾಧ್ಯವಾಯಿತು. ದಲಿತ ಬರಹಗಾರರು ತಮ್ಮ ಶೋಷಣೆಯ ಹಿನ್ನೆಲೆ ತಮ್ಮ ಒಳ ನೋಟಗಳನ್ನು, ಕಾಲದ ಅನುಭವಗಳನ್ನು ದಾಖಲಿಸಿದರು. ಅವರ ಸಾಮಾಜಿಕ ವಾಸ್ತವತೆ ಹೆಚ್ಚು ವೈಚಾರಿಕತೆಯನ್ನು ಪಡೆಯುವಲ್ಲಿ ಸಹಕಾರಿಯಾಯಿತು. ಬಂಡಾಯ ಸಾಹಿತ್ಯ ಸಂಘಟನೆಯಿಂದ ದಲಿತ ಸಮಸ್ಯೆ ಹೆಚ್ಚು ವ್ಯಾಪಕವಾಗಿ ಚರ್ಚೆ ಮಾಡಲು ಸಾದ್ಯವಾಯಿತು.

೧೯೭೭ರಲ್ಲಿ ಭದ್ರಾವತಿ ಕಾಗದ ನಗರದಲ್ಲಿ ನಿವೇಶನಗಳಲ್ಲಿ ನಡೆದಿದ್ದ ಅವ್ಯವಹಾರ ನಿಲುಗಡೆಗೆ ಮೆರವಣಿಗೆ ಸಂಘಟಿಸಿತು. ೨೦ ವರ್ಷಗಳಿಂದ ನೆನೆಗುದಿಗೆ ಬಿದ್ದಿದ್ದ ಸಮಸ್ಯೆ ಬಗೆಹರಿಯಿತು. ಎಷ್ಟೋ ವರ್ಷಗಳಿಂದ ಹಕ್ಕು ಪತ್ರ ನೀಡದ, ಸ್ವಾಧೀನಕ್ಕೆ ಬರದ ನೂರಾರು ಕೇಸುಗಳನ್ನು ಕೇವಲ ಒಂದು ಮೆರವಣಿಗೆ ಪರಿಹರಿಸಿದೆ. ಧರಣಿ ಮೆರವಣಿಗೆ ಪ್ರದರ್ಶನಗಳಲ್ಲಿ ಅಂಬೇಡ್ಕರ್‌ಗೆ ಸಂಬಂಧಿಸಿದ ಘೋಷಣೆ, ಭಾವಚಿತ್ರ, ಹಾಡು ಉಪಯೋಗಿಸಲ್ಪಟ್ಟವು.

ದಲಿತರ ಮೇಲೆ ದೌರ್ಜನ್ಯ ನಡೆಯುತ್ತಿದ್ದರೂ ಚುನಾಯಿಸಲ್ಪಟ್ಟ ದಲಿತ ಮಂತ್ರಿ ಶಾಸಕ ಎಂ.ಪಿಗಳು ದೊಡ್ಡ ಮನುಷ್ಯರ ತಂಟೆಗೆ ಹೋಗದೇ ರಕ್ಷಿಸಿಕೊಂಡು ಸಂಭಾವಿತರಂತೆ ನಿರ್ಲಿಪ್ತರಾಗಿದ್ದದ್ದು ಸ್ವಾರಸ್ಯಕರ. ಇದನ್ನು ಖಂಡಿಸಿ ೧೯೮೨ ರ ಫೆಬ್ರವರಿ ೨೭ ರಂದು

ರಾಜ್ಯಾದ್ಯಂತ ದಲಿತ ಶಾಸಕ ಎಂ.ಪಿಗಳ ಮನೆ ಮುಂದೆ ಧರಣಿ ನಡೆಸಿತು. ಆ ಧರಣಿಯನ್ನು ವಿರೋಧಿಸಿ ಪೊಲಿಸರ ಮತ್ತು ಗೂಂಡಾಗಳು ಸಂಘಟಿತ ಕಾರ್ಯಕರ್ತರ ಮೇಲೆ ಹಲ್ಲೆ ನಡೆಸಿ ಗಾಯ ಗೊಳಿಸಿದರು. ಕೆಜಿಎಫ್‌ನ ಆರ್ ಪಿ ಐ ಪಕ್ಷದ ಶಾಸಕ ಸಿ.ಎಂ. ಅರುಮುಗಂ ಮತ್ತು ಚಾಮರಾಜನಗರ ಕಾಂಗ್ರೆಸ್ ಎಂ.ಪಿ. ಶ್ರೀನಿವಾಸ್ ಪ್ರಸಾದ್ ಇವರ ಮನೆಗಳ ಮುಂದೆ ಧರಣಿ ನಡೆಯುವ ಕಾಲಕ್ಕೆ ಕಾರ್ಯಕರ್ತರು ಗಾಯಗೊಂಡು ಆಸ್ಪತ್ರೆ ಸೇರಿದರು. ಅದನ್ನು ಪ್ರತಿಭಟಿಸಿ ಭಾರಿ ಪ್ರತಿಭಟನಾ ಮೆರವಣಿಗೆಗಳು ನಡೆದವು.

ಚಳವಳಿಯು ಸದ್ಯಕ್ಕೆ ಜಾತಿಪದ್ಧತಿಯ ವಿರುದ್ಧ ಕೆಳಗಿನಂತೆ ಹೋರಾಟ ನಡೆಸಬಹುದು. ಎಡಬಲ ಅಸ್ಪೃಶ್ಯ ಜಾತಿಗಳ ನಿರಾಕರಣೆಗೆ,

೧. ಅಂತರ್ ಜಾತಿಯ ವಿವಾಹ

೨. ಹಬ್ಬ ಹರಿದಿನಗಳನ್ನು ಅಂತರಜಾತಿಗೆ ಪೂರಕವಾಗಿ ನಡೆಸಿಕೊಳ್ಳಬೇಕು.

೩. ಆರ್ಥಿಕವಾಗಿ ಸಹಾಯ ಹಸ್ತ ನೀಡುತ್ತಾ ಸ್ವಾವಲಂಬಿಗಳನ್ನಾಗಿಸುವುದು.

೪. ಮೀಸಲಾತಿಯನ್ನು ಮೊದಲ ತಲೆಮಾರಿಗೆ ಮೀಸಲಾಗುವಂತೆ ಮಾಡುವುದು.

೫. ಎಡಬಲ ಜಾತಿಗಳನ್ನು ಆಚರಿಸುವವರನ್ನು ಬಹಿಷ್ಕರಿಸಬೇಕು.

೬. ಪ್ರತ್ಯೇಕತೆಯನ್ನು ಜಾತಿ, ಮದುವೆ ಇತ್ಯಾದಿಗಳನ್ನು ಸಾಂಸ್ಕೃತಿಕವಾಗಿ ಬದಿಗೊತ್ತಬೇಕು.

೭. ಬಿಟ್ಟಿ ಚಾಕರಿಗಳನ್ನು ಬಿಡಿಸುತ್ತಾ ಉತ್ಪಾದನೆಯಲ್ಲಿ ಪಾಲುಗಾರರನ್ನಾಗಿ ಮಾಡಿಸುವುದು.

ಚಳುವಳಿಯ ಜೊತೆಗೆ ಸಂಬಂಧವಿಟ್ಟುಕೊಂಡು ದಲಿತರನ್ನು ಬೆಂಬಲಿಸಿದವರಲ್ಲಿ ಗಾಂಧಿವಾದಿ ಕೊಡಿಯಾಲದ ಕೋದಂಡ ರಾಮಯ್ಯ ಮುಖ್ಯರು. ಹಳ್ಳಿಯಲ್ಲಿ ದಲಿತರಿಗೆ ಊರು ಕಲ್ಯಾಣಿಯಲ್ಲಿ ನೀರು ತೆಗೆಯಲು ಬಿಡಬೇಕು, ದೇವಸ್ಥಾನಕ್ಕೆ ಪ್ರವೇಶ ಸಿಗಬೇಕು, ಕ್ಷೌರ ದಲಿತರಿಗೂ ಮಾಡಬೇಕು ಎಂದು ಹೋರಾಡಿದರು. ಆದರೆ, ಅಲ್ಲಿನ ಮೇಲ್ಜಾತಿಯವರು ಮತ್ತು ನೇಯ್ಗೆ ಜಾತಿಯವರು ಕೋದಂಡ ರಾಮಯ್ಯನಿಗೆ ಜಾತಿ ಬಹಿಷ್ಕಾರ ಹಾಕಿದರು. ಅವರ ನೆಂಟರಿಷ್ಟರು ಬೆಂಗಳೂರು ಮೈಸೂರುಗಳಲ್ಲಿ ನೆಲಸಿರುವವರು ಮದುವೆ, ತಿಥಿ ಕಾರ್ಯಗಳಿಗೆ ಕರೆಯದೆ ಬಹಿಷ್ಕರಿಸಿದರು. ಕೋದಂಡರಾಮಯ್ಯ ಇದಕ್ಕೆಲ್ಲ ಜಗ್ಗಿದವರು ಅಲ್ಲ. ತಮ್ಮ ಒಬ್ಬ ಮಗ ಮತ್ತು ಮಗಳಿಗೆ ಮದುವೆ ವಿಷಯದಲ್ಲಿ ಅಂತರಜಾತಿಯ ವಿವಾಹವನ್ನು ಪ್ರೋತ್ಸಾಹಿಸುವುದಾಗಿ ಸದಾ ಹೇಳುತ್ತಿದ್ದರು.

## ಭೂ ಹೋರಾಟಗಳು

### ಸಿದ್ಲಿಪುರ ಭೂಹೋರಾಟ

ಭದ್ರಾವತಿ ತಾಲ್ಲೂಕಿನ ಚಿಕ್ಕಗ್ರಾಮ ಸರ್ವೆ ನಂ.೯೩ರಲ್ಲಿ ೩೩ ಎಕರೆ ನೀರಾವರಿ ಭೂಮಿ ಮಂಜೂರು ಆಗಿತ್ತು. ಆರೆಸ್ಸೆಸ್‌ಗೆ ಸೇರಿದ ಭೂಪಾಳಂ ಆ ತೋಟ ತಳವಾರಿ ಭೂಮಿಯನ್ನು ಕಬಳಿಸಿದ. ಎರಡು ವರ್ಷಕ್ಕೊಮ್ಮೆ ಜನರಿಂದ ರಿಗ್ರಾಂಟ್‌ಗಾಗಿ ಅರ್ಜಿ ಹಾಕಿಸುವುದು. ಆದರೆ ಒಡೆತನ ತನ್ನಲ್ಲಿ ಇಟ್ಟುಕೊಂಡು ಜನರಿಂದ ಕೊಂಡುಕೊಂಡಿರುವೆನೆಂದು ಹೇಳುತ್ತಾ ಅಕ್ರಮವಾಗಿ ಸಾಗುವಳಿ ಮುಂದುವರಿಸಿದ್ದ. ೧೯೭೭ ರ ಫೆಬ್ರವರಿಯಲ್ಲಿ ಪ್ರಾರಂಭಗೊಂಡ ಸರದಿ ಸತ್ಯಾಗ್ರಹ ದಿನಾಂಕ ೨೭.೧೧.೧೯೭೭ರಿಂದ ಅನಿರ್ದಿಷ್ಟ ಕಾಲದ ಉಪವಾಸ ಸತ್ಯಾಗ್ರಹವಾಗಿ ಮುಂದುವರಿಯಿತು. ಅದಕ್ಕೂ ಮುನ್ನ ಭೂಪಾಳಂ ಅಕ್ರಮ ಸಾಗುವಳಿ ವಿರೋಧಿಸಿ ಭದ್ರಾವತಿಯಿಂದ ಶಿವಮೊಗ್ಗಗೆ ಕಾಲು ನಡಿಗೆ ಜಾತಾ ತೆಗೆದಾಗ ಸುಮಾರು ೨೦ ಹಳ್ಳಿಗಳ ದಲಿತರು ಪಾಲ್ಗೊಂಡಿದ್ದರು. ನಂತರ ಸೈಕಲ್ ಜಾಥಾ ಸಹ ನಡೆಯಿತು. ೧೯೭೮ರ ಜೂನ್ ನಲ್ಲಿ ವಿಶೇಷ ಆಜ್ಞೆ ಹೊರಡಿತು ಅದು ಹೀಗಿದೆ.

೧೯೭೪ರಿಂದ ಈಚೆಗೆ ಯಾವನೇ ವ್ಯಕ್ತಿ ಹರಿಜನರಿಂದ ಇನಾಮತಿ ಭೂಮಿಯನ್ನು ಅಕ್ರಮವಾಗಿ ಸ್ವಾಧೀನ ಪಡಿಸಿಕೊಂಡಿದ್ದರೆ ಕೂಡಲೇ ಅವರಿಂದ ಭೂಮಿ ತೆರವು ಮಾಡಿಸಿ ಹರಿಜನರಿಗೆ ಹಂಚತಕ್ಕದ್ದು ಎಂದು ಸರಕಾರ ಜಿಲ್ಲಾಧಿಕಾರಿಗಳಿಗೆ ಆದೇಶ ನೀಡಿತು. ಸಿದ್ಲಿಪುರ ಹೋರಾಟ ಒಂದು ವರ್ಷ ನಾಲ್ಕು ತಿಂಗಳು ನಡೆದ ಪರಿಣಾಮವಾಗಿ ಕರ್ನಾಟಕದ ಭೂ ಪರಭಾರೆ ನಿಷೇಧ ಕಾಯ್ದೆ ಜಾರಿಗೆ ಬಂತು.

ಭೂಪಾಳಂ ನಂತರ ಹೈ ಕೋರ್ಟಿನಲ್ಲಿ ದಾವೆ ಹೂಡಿದ. ಅದರ ವಿರುದ್ಧ ಹೋರಾಡಿ ಅಂತೂ ಡಿಸೆಂಬರ್ ೧೯೭೮ ರಲ್ಲಿ ದಲಿತರಿಗೆ ತಲಾ ಒಂದು ಎಕರೆ ನೀರಾವರಿ ಭೂಮಿ ಸಿಕ್ಕಿತು. ಮೇಲಿನ ಕಾಯ್ದೆಯಿಂದ ಕರ್ನಾಟಕದಾದ್ಯಂತ ಅವ್ಯವಹಾರಕ್ಕೆ ಒಳಗಾಗಿದ್ದ ಎರಡೂವರೆ ಲಕ್ಷ ಎಕರೆ ಇನಾಮತಿ ಭೂಮಿ ಪುನಃ ಸಿದ್ಲಿಪುರ ಹೋರಾಟವು ಏಕಕಾಲದಲ್ಲಿ ಸರಕಾರ ಮತ್ತು ಭೂಮಾಲೀಕರನ್ನು ವಿರೋಧಿಸಿ ಜಯ ಪಡೆಯುವುದರೊಂದಿಗೆ ಚಳುವಳಿಗೆ ಹೊಸ ಬಾಗಿಲನ್ನು ತೆರೆಯಿತು.

### ಹೊನ್ನಾಳಿ ಭೂ ಹೋರಾಟ

ಭೂಹೀನ ಬಡ ಹೈತರಿಗೆ ಸಾಗುವಳಿ ಚೀಟಿ ಕೊಡಿಸಲು ಇಲ್ಲಿ ಹೋರಾಟ ನಡೆಯಿತು. ತಾಲ್ಲೂಕಿನ ಒಂಭತ್ತು ಹಳ್ಳಿಗಳ ೬೩೦ ಕುಟುಂಬಗಳು ಹತ್ತನ್ನೆರಡು ವರ್ಷಗಳಿಂದ ೧೭೦೦

ಎಕರೆ ಸಾಗುವಳಿ ಮಾಡುತ್ತಾ ಬಂದಿದ್ದರು. ರೈತರು ಅಧಿಕಾರಿಗಳಿಗೆ ಎಷ್ಟು ಅರ್ಜಿ ಕೊಟ್ಟರೂ ಏನು ಪ್ರಯೋಜನ ಕಾಣದೆ ಧರಣಿ ಸತ್ಯಾಗ್ರಹ, ನಂತರ ಅಮರಣಾಂತ ಉಪವಾಸವನ್ನು ಕಾರ್ಯಕರ್ತ ವಿ.ರಾಜಣ್ಣ ಕೈಗೊಂಡರು. ಇದರಿಂದ ವಾತಾವರಣ ಜಟಿಲಗೊಂಡು ಸಂಬಂಧಪಟ್ಟ ಅಧಿಕಾರಿಗಳು ತಿಂಗಳಲ್ಲೆ ಸಾಗುವಳಿ ಪತ್ರ ಕೊಡಲು ಬರವಣಿಗೆಯಲ್ಲಿ ಭರವಸೆ ನೀಡಿದ ಕಾರಣ ಹಿಂತೆಗೆದುಕೊಂಡರು.

**ಬಿದಿರೆ ಕಾವಲು ಭೂ ಹೋರಾಟ**

ಅರಸಿಕೆರೆ ತಾಲ್ಲೂಕಿನ ಬಿದಿರೆ ಕಾವಲಿನ ೮೦೦ ಎಕರೆ ಮತ್ತು ಭದ್ರಾವತಿ ತಾಲ್ಲೂಕಿನ ಕಾಳನಕಟ್ಟೆ ಗ್ರಾಮದ ೧೫೦ ಎಕರೆ ಅರಣ್ಯ ಭೂಮಿಯನ್ನು ಭೂಹೀನ ರೈತ ಕಾರ್ಮಿಕರು ಆಕ್ರಮಿಸಿಕೊಂಡರು. ಕಾಳನ ಕಟ್ಟಯ್ಯವರ ಸುಮಾರು ೨೫ ವರ್ಷಗಳಿಂದ ಸಾಗುವಲಿ ಮಾಡುತ್ತಿದ್ದರು. ಅವರಿಗೆ ಹಕ್ಕು ಪತ್ರ ನೀಡಲೆಂದು ಒತ್ತಾಯಿಸಿ ಹೋರಾಟ ನಡೆದಿತ್ತು. ಬಿದಿರೆ ಕಾವಲು ಸುತ್ತಮುತ್ತ ಕೂಲಿ ಮಾಡುವ ಮಂದಿಗೆ ಹಸಿವನ್ನು ನೀಗಿಸುವ ದಾರಿ ತೋರಲಾಯಿತು. ಅದೇ ಭೂ ಭೂ ಆಕ್ರಮಣ. ಆಕ್ರಮಣದಲ್ಲಿ ಎಲ್ಲಾ ಜಾತಿಯವರು ಸೇರಿ ಬಾವಿ ತೋಡಿ. ಜೊತೆಯಲ್ಲಿ ನೀರು ಕುಡಿದರು, ಮನೆಯನ್ನು ಸಾಮೂಹಿಕವಾಗಿ ಎಲ್ಲರೂ ಸಮನಾಗಿ ಕಟ್ಟಿಕೊಂಡರು. ಜಾತಿ ಬೇಧ ಮರೆತು ಬದುಕಿದರು. ಚಳವಳಿಗೆ ಇದ್ದ ತಾತ್ವಿಕ ಮಿತಿಯಿಂದಾಗಿ ಮುಂದುವರಿಯಲಿಲ್ಲ. ಒಂದು ಮಾನಸಿಕ ಶೂನ್ಯ ನಿವಾರಣೆ ಮಾಡುವ ಕೆಲಸಕ್ಕೆಬೇಕಾದ ನಿರಂತರ ಎಚ್ಚರ ಸಂಸ್ಕೃತಿ ತತ್ವದಿಂದ ಬಂದಿರಲಿಲ್ಲ.

**ಚಂಡಗೋಡು ಭೂ ಹೋರಾಟಗಳು**

ದಿನಾಂಕ ೨೪.೭.೧೯೭೯ ರಂದು ಸರ್ವೆ ನಂ ೭೪ರ ೬೦೦ ಎಕರೆ ಬಗರ್ ಹುಕುಂ ಭೂಮಿಯಲ್ಲಿ ३೦೦ ಎಕರೆ ಆಕ್ರಮಿಸಿಕೊಂಡು ಧರಣಿ ನಡೆಸಿದರು. ಅಲ್ಲಿ ಈಗಾಗಲೇ ಬಲಿಷ್ಠ ಭೂ ಮಾಲೀಕರು ಉಳಿದ ಭೂಮಿಯನ್ನು ಆಕ್ರಮಿಸಿಕೊಂಡು ಕಾಫಿ ಗಿಡ ಹಾಕಿದ್ದರು. ಹೋರಾಟವನ್ನು ಸಿಪಿಐ ಜಿಲ್ಲಾ ಶಾಖೆ ಬೆಂಬಲಿಸಿತು. ಚಂಡಗೋಡು ಗ್ರಾಮದ ೬೦ ಕುಟುಂಬಗಳಿಗೆ ತಲಾ ೫ ಎಕರೆಯಂತೆ ೫೦ ಲಕ್ಷರೂ. ಬೆಲೆಗೂ ಮೀರಿ ಭೂಮಿ ದೊರೆಯಿತು. ಇದಕ್ಕಾಗಿ ಸುತ್ತಮುತ್ತಲಿನ ೭೦ ಗ್ರಾಮಗಳಲ್ಲಿ ಸಂಚರಿಸಿ ಜನರನ್ನು ಸಂಘಟಿಸಿ ಮಹಿಳೆಯರು ಸೇರಿದಂತೆ ೧೫೦೦ಕ್ಕೂ ಹೆಚ್ಚು ಜನ ಪ್ರತಿಭಟನಾ ಮೆರವಣಿಗೆಯಲ್ಲಿ ಭಾಗವಹಿಸುವಂತೆ ಮಾಡಿತು. ಅಂದೇ ತಾಲ್ಲೂಕು ಕಛೇರಿಯನ್ನು ಪಿಕೆಟಿಂಗ್ ನಡೆಸಲು ಕಾರ್ಯಕರ್ತರನ್ನು, ಜನರನ್ನು ಬಂಧಿಸಿದ್ದರು. ನಂತರ ಬೇಷರತ್ತಾಗಿ ಬಿಡುಗಡೆ ಮಾಡಿದರು.

ಹಾಗಯೇ ಮೆದಕಿನಾಳ ಭೂಹೋರಾಟ, ಮಹಮ್ಮದ್ ನಗರ ಭೂಹೋರಾಟ, ಹಾಗೂ ದೇವಲಾಪುರದ ಭೂಹೋರಾಟಗಳು, ದಲಿತ ಹೋರಾಟ ಚಳುವಳಿಗಳು ಬಹು ಮುಖ್ಯವಾದವುಗಳು.

**ಇ. ವಾಸ್ತವದಲ್ಲಿ ದಲಿತ ಚಳುವಳಿಯ ವೈಶಿಷ್ಟ್ಯತೆ**

ದಲಿತ ಚಳುವಳಿಯ ಕಾಲು ಶತಮಾನದ ಈ ಅವದಿಯ ನಡಿಗೆಯಲ್ಲಿ ಸಾಕಷ್ಟು ಏಳು ಬೀಳುಗಳನ್ನು ಕಂಡಿದೆ. ದಲಿತ ಚಳುವಳಿ ಎನ್ನುವುದು ಒಂದು ಚಾರಿತ್ರಿಕ ಸತ್ಯ. ಇದು ಕೇವಲ ಕರ್ನಾಟಕಕ್ಕೆ ಮಾತ್ರ ಸೀಮಿತವಾದುದಲ್ಲ. ಭಾರತದ ಹೆಚ್ಚಿನ ರಾಜ್ಯಗಳಲ್ಲಿ ಇದರ ನೆಲೆ-ನಿಲುವು ತುಂಬಾ ಸ್ಪಷ್ಟವಾಗಿ ಗೋಚರವಾಗಿರುವುದರಿಂದ ಭಾರತದಲ್ಲಷ್ಟೇ ಅಲ್ಲ ಹೊರದೇಶಗಳಲ್ಲಿಯೂ ಈ ಚಳುವಳಿ ಗಂಭೀರವಾಗಿ ಮಾತನಾಡುವಂತೆ, ಚಿಂತಿಸುವಂತೆ ಮಾಡಿದೆ.

ಕರ್ನಾಟಕದಲ್ಲಿ ದಲಿತ ಎಂಬ ಪದದ ಬಳಕೆ ಅರಂಭದಲ್ಲಿ ಧಾರವಾಡದಿಂದ ಬಳಕೆಗೆ ಬಂತು. ಮೂಲತಃ ಇದಕ್ಕೆ ಪ್ರೇರಣೆ ಮಹಾರಾಷ್ಟ್ರದ ದಲಿತ ಚಳುವಳಿಯೇ ಆಗಿತ್ತು ಎನ್ನುವುದು ಖಚಿತ. ೧೯೭೩ ರಲ್ಲಿ ದಲಿತ ಎಂಬ ಪತ್ರಿಕೆಯನ್ನು ಡಾ॥ ಬುದ್ದಣ್ಣ ಹಿಂಗಮಿರೆ ಇತರರು ಸೇರಿ ಪ್ರಾರಂಭಿಸಿ, ೧೯೭೪ ರಲ್ಲಿ ಜನವರಿಯಲ್ಲಿ ಮೊದಲ ಸಂಚಿಕೆ ಹೊರ ತರುವುದರ ಜೊತೆಗೆ ದಲಿತ ಪಂಥ ಎಂಬ ಸಂಘಟನೆಯೂ ಕಾಣಿಸಿಕೊಂಡಿತು. ೧೯೭೪ ರ ಅಂತ್ಯ ೧೯೭೫ ರ ಆರಂಭದಲ್ಲಿ ಬಿ. ಕೃಷ್ಣಪ್ಪನವರ ನೇತೃತ್ವದಲ್ಲಿ ಭದ್ರಾವತಿಯಲ್ಲಿ ದಲಿತ ಸಂಘರ್ಷ ಸಮಿತಿ ರೂಪುಗೊಂಡಿತು. ೧೯೭೬ ರಲ್ಲಿ ಅದೇ ಕರ್ನಾಟಕ ದಲಿತ ಸಂಘರ್ಷ ಸಮಿತಿಯಾಗಿ ಎದ್ದು ನಿಂತಿತು. ಇದೇ ಸಂದರ್ಭದಲ್ಲಿ ದಲಿತ ಲೇಖಕರ ಮತ್ತು ಕಲಾವಿದರ ಒಕ್ಕೂಟವೂ ರೂಪುಗೊಂಡಿತು.

ಹೀಗೆ ವಿಭಿನ್ನ ಮಜಲುಗಳಲ್ಲಿ ಸಾಕಷ್ಟು ಶ್ರಮದಿಂದ ಆರಂಭಗೊಂಡ ಚಳುವಳಿ ಸಾಹಿತ್ಯದ ನೆಲೆಗಟ್ಟಿನಲ್ಲಿ ಹಲವಾರು ಕಥಾನಕಗಳು, ಕಾದಂಬರಿ, ನಾಟಕಗಳು, ಕವನಗಳು, ಹಾಡುಗಳ ಮೂಲಕ ಹೆಚ್ಚಿನ ಪ್ರಭಾವಬೀರಲು ಪ್ರಾರಂಭಿಸಿತು. ಅಂದರೆ ಯಾವುದೇ ಸಾಮಾಜಿಕ ಬದಲಾವಣೆಯ ಪ್ರಕ್ರಿಯೆಯ ಸಂದರ್ಭದಲ್ಲಿ ಸಾಹಿತ್ಯದ ಪಾತ್ರ ಒಡೆದು ಕಾಣುವಂತಹದು ಅದರಲ್ಲೂ ಕಾವ್ಯ ಪ್ರಕಾರ ಮಂಚೂಣಿಯಲ್ಲಿ ನಿಲ್ಲುವಂತಹದ್ದಾಗಿದೆ. ಸಾಹಿತ್ಯದ ಚಲನ ಶೀಲತೆಗೆ ಕಾವ್ಯವೇ ಕಾರಣವೆನ್ನುವಷ್ಟರ ಮಟ್ಟಿಗೆ ಅದು ತನ್ನ ಪ್ರಾಮುಖ್ಯತೆಯನ್ನು ಜಾಹಿರುಗೊಳಿಸಿದೆ. ಹೊಸಗನ್ನಡದ ಸಂದರ್ಭದಲ್ಲಿ ದಲಿತ ಚಳುವಳಿಯೂ ಕಾವ್ಯದ ಮೂಲಕವೇ ನಾಂದಿ ಹಾಡಿದ್ದು ಎಂಬ ವಿಚಾರವನ್ನು ಮರೆಯಲಾಗದು. ೧೯೭೦ ರ ದಶಕದಲ್ಲಿ ಆರಂಭವಾದ ದಲಿತ ಪ್ಯಾಂಥರ್ಸ್ ಹೆಚ್ಚು ಕ್ರಿಯಾಶೀಲನಾದದ್ದು, ಅಂತೆಯೇ ೧೯೭೪ ರಲ್ಲಿ ನಡೆದ ಬಿ.ಬಸವಲಿಂಗಪ್ಪನವರ ಬೂಸಾ ಪ್ರಕರಣ ದಲಿತ ಚಟುವಟಿಕೆಗಳಿಗೆ ತೀವ್ರ ಚಾಲನೆಯನ್ನು

ಕೊಟ್ಟಿತು. ಇದೇ ನಿಟ್ಟಿನಲ್ಲಿ ದಲಿತ ಸಂಬಂಧಿ ಕವನ-ಲೇಖನಗಳು ಬಿಡಿ ಬಿಡಿಯಾಗಿ ಮರಾಠಿಯಂತೆ ಕನ್ನಡದಲ್ಲಿಯೂ ಪ್ರಕಟವಾದವು. ಆದರೆ ೧೯೭೫ ರಲ್ಲಿ ಹೊಲೆಮಾದಿಗರ ಹಾಡು ಕವನ ಸಂಕಲನದೊಂದಿಗೆ ದಲಿತ ಸಾಹಿತ್ಯಕ್ಕೆ ಅಸ್ತಿಭಾರ ಹಾಕಿತು. ೧೯೭೫ ರಿಂದ ಪ್ರಾರಂಭವಾಗಿ ದಲಿತ ಕಾವ್ಯ ಮೂವತ್ತು ವರ್ಷಗಳ ಅವಧಿಯಲ್ಲಿ ಸುಮಾರು ಅರವತ್ತು ಸಂಕಲನಗಳೂ ಹೊರಬಂದಿವೆ ಹಾಗು ನೂರಕ್ಕೂ ಹೆಚ್ಚಿನ ಕವಿಗಳು, ಸಾಹಿತಿಗಳು, ಲೇಖಕರುಗಳನ್ನು ದಲಿತ ಚಳುವಳಿ ಕಂಡಿದೆ ಎಂಬುದು ಗಮನಾರ್ಹ ಅಂಶ. ದಲಿತರು ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲಿ ಹಿಂದುಳಿದಿರಲು ಬಹುಮುಖ್ಯ ಕಾರಣ ಇವರಲ್ಲಿನ ಮೌಢ್ಯ. ದಲಿತರಲ್ಲಿ ಜ್ಞಾನ ಪ್ರಸಾರವಾಗಿ ತಮಗಿರುವ ಹಕ್ಕು ಬಾಧ್ಯತೆಗಳ ಅರಿವು ಮೂಡಿದರೆ ಈ ಜನಾಂಗದ ಮೇಲೆ ನಡೆಯುತ್ತಿರುವ ದಬ್ಬಾಳಿಕೆ ಮತ್ತು ಶೋಷಣಗಳಿಗೆ ಖಂಡಿತವಾಗಿಯೂ ಕಡಿವಾಣವನ್ನು ಹಾಕಬಹುದು.

ನಮ್ಮ ಶೋಷಣಾ ಪ್ರಧಾನ ಸಮಾಜ ದಲಿತರನ್ನು ಶತ ಶತಮಾನಗಳ ಕಾಲ ಅಜ್ಞಾನದಲ್ಲಿಟ್ಟು, ಅವರು ನಿರಂತರವಾಗಿ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸುವಂತೆ ಮಾಡಿ ಅಧಃಪತನಕ್ಕೆ ಹೋಗುವಂತೆ ಮಾಡಿವೆ. ತಮ್ಮ ಅಜ್ಞಾನದಿಂದ ದಲಿತರಲ್ಲಿ ಮೂಢನಂಬಿಕೆ ಕಂದಾಚಾರ, ಬಡತನ ಮತ್ತು ಎಲ್ಲದಕ್ಕೂ ಹೆಚ್ಚಾಗಿ ನಿರಾಸೆ ಮತ್ತು ಭಯ ಮನೆ ಮಾಡಿಕೊಳ್ಳುವಂತೆ ಆಯಿತು.

ದಲಿತರ ಪ್ರಾದೇಶಿಕ ಭೇದದಿಂದ ಕಂಡು ಬರುವ ಧಾರ್ಮಿಕತೆ, ಜೀವನಕ್ರಮ ಮತ್ತು ವ್ಯಕಿತಗಳಲ್ಲಿನ ಸ್ವಲ್ಪ ವೈವಿಧ್ಯತೆಯಿಂದ ಈ ಜನರನ್ನು ಒಂದೇ ಜನಾಂಗದವೆಂದು ಕರೆಯಬಹುದೆ ಎಂಬ ಸಂಶಯ ಯಾವ ಸಮಾಜ ಶಾಸ್ತ್ರಜ್ಞನಿಗೂ ಬರದಂತಾಗಿ ಈ ಜನರ ಅನೈಕ್ಯತೆಗೆ ಕಾರಣವಾಗಿದೆ. ಈ ಅನೈಕ್ಯತೆಯಿಂದ ಇವರ ಒಟ್ಟಾರೆ ಪ್ರಗತಿ ಕುಂಠಿತವಾಗಿದೆ. ಈ ಹಿನ್ನೆಲೆಯಲ್ಲಿ ಶಾಸ್ತ್ರಗಳ ಆಧಾರ, ವಿವಿಧ ಮೂಲಗಳಿಂದ ದೊರೆಯುವ ವಿಚಾರಗಳ ಸಮರ್ಥ ವಿವೇಚನೆಯಿಂದ ದಲಿತ ಜನಾಂಗದವರೆಲ್ಲರೂ ಮೂಲತಃ ಒಂದೇ ಪಂಗಡದವರು ಮತ್ತು ಭವ್ಯ ಪರಂಪರೆಯನ್ನು ಹೊಂದಿದವರೆಂದು ತೋರಿಸಿಕೊಟ್ಟು ಅವರೆಲ್ಲರನ್ನೂ ಒಗ್ಗಟ್ಟಿನಿಂದ ಕೆಲಸ ಮಾಡುವಂತೆ ಪ್ರೇರೆಪಿಸಬೇಕಾದ ಅವಶ್ಯಕತೆ ಅಥವಾ ಜವಾಬ್ದಾರಿ ಪ್ರತಿಯೊಬ್ಬ ದಲಿತ ವಿದ್ಯಾವಂತನ ಮೇಲಿದೆ. ಈ ಸಂಬಂಧ ದಲಿತ ಚಳುವಳಿಯ ಪ್ರಭಾವ ಮತ್ತು ಪ್ರೇರಣೆಯಿಂದ ದಲಿತ ಸಮುದಾಯದ ಅಭಿವೃದ್ಧಿಯಾಗಬೇಕಾದ ಅನಿವಾರ್ಯತೆಯನ್ನು ಮನಗಾಣಬೇಕಾಗಿದೆ.

ಅಸಮಾನತೆಯ ಸಮಾಜದ ಹೃದಯದಲ್ಲಿ ಯಾವಾಗಲೂ ವಿಪತ್ಪರಂಪರೆಯ ಭಯ ಮಿಡಿಯುತ್ತಿರುತ್ತದೆ. ಸಮಾಜದ ಏರುಪೇರಿಗೆ ಆ ಸಮಾಜದಲ್ಲಿ ನ್ಯಾಯ ನೆಲೆಸದೆ ಇರುವುದೇ

ಕಾರಣ. ಔದಾರ್ಯ ಸಹ ತೀವ್ರ ಅಸಮದಾನಕ್ಕೆ ಗುರಿಯಾಗುತ್ತದೆ. ಏಕೆಂದರೆ ಅಂತಹ ಸಮಾಜಕ್ಕೆ ಹೇಗೆ ನಿಷ್ಪಕ್ಷಪಾತವಾಗಿ ನಡೆದುಕೊಳ್ಳಬೇಕೆಂದು ಗೊತ್ತಿಲ್ಲದಿರುವುದು ಎಂದು ಪ್ರೊ. ಲ್ಯಾಸ್ಕಿ ಎಂಬ ರಾಜನೀತಿಜ್ಞ ಸಮಾಜಕ್ಕೆ ನೀಡಿರುವ ಸಂದೇಶ. ಈ ಸಂದೇಶ ನಮ್ಮ ರಾಷ್ಟ್ರದ ಜನತೆಯ ತನುಮನಗಳಲ್ಲಿ ಬೇರೂರಿದಾಗ ಮಾತ್ರ ವ್ಯಕ್ತಿ ವ್ಯಕ್ತಿಗಳಲ್ಲಿ ಅಸಮತೆ ಮಾಯವಾಗಿ ಸಮಾನತೆ ಮೂಡಿ ಬರಲು ಸಾಧ್ಯ. ವರ್ಣಭೇಧ , ಜಾತಿ ಭೇಧದ ತಳಹದಿಯ ಮೇಲೆ ಅಸ್ಪೃಶ್ಯತೆಯನ್ನು ಹಾಗು ಮೇಲು – ಕೀಳುಗಳನ್ನು ಆಧರಿಸಿ ವ್ಯಕ್ತಿ ವ್ಯಕ್ತಿಗೆ ಅಸಮಾನತೆಯನ್ನು ಅನ್ಯಾಯವನ್ನು ಕೃತಕವಾಗಿ ಕಲ್ಪಿಸಿರುವ ಹಿಂದೂ ಸಮಾಜದ ಹೃದಯವು ವಿಚ್ಛಿನ್ನಗೊಂಡಿರುವುದು ವಿಷಾದನೀಯ. ಅಂತಹ ಸಮಾಜದಲ್ಲಿ ಧರ್ಮ, ನ್ಯಾಯ, ನೀತಿ ನೆಲೆಸಿದೆ ಎಂದು ಹೇಳಲು ಬರುವುದಿಲ್ಲ. ಇವುಗಳು ಕೇವಲ ಗಾಳಿಗೋಪುರಗಳೇ ಹೊರತು ಈ ಸಮಾಜದ ತಳಹದಿಯಾಗಿ ಉಳಿದಿಲ್ಲ ಎಂಬುದು ಎಲ್ಲರಿಗೂ ಮನವರಿಕೆಯಾದ ಕಹಿ ಸತ್ಯ. ಈ ಕಹಿ ಸತ್ಯವನ್ನು ಹೇಳುವ ವ್ಯಕ್ತಿಯನ್ನು ಸಮಾಜ ಘಾತಕನೆಂದು ಕರೆಯುವವರೂ ಇದ್ದಾರೆ. ಇದು ಹಿಂದೂ ಸಮಾಜದ ಒಂದು ಆಶ್ಚರ್ಯಕರವಾದ ನೀತಿ. ರಾಷ್ಟದ ತುಂಬಿದ ವಿಷಯಗಳನ್ನು ಸಾರುತ್ತವೆ ಎಂಬುದರಲ್ಲಿ ಯಾವ ಅನುಮಾನವೂ ಇಲ್ಲ.

ಬ್ರಾಹ್ಮಣರಿಗೆ ನೀಡಿರುವ ಕೆಲಸಗಳೆಂದರೆ ವೇದಾಧ್ಯಯನ ಮತ್ತು ಅಧ್ಯಾಪನ. ವಿಶ್ವದ ಶ್ರೇಯಸ್ಸಿಗಾಗಿ ಯಜ್ಞ ವಿಧಿಗಳನ್ನು ನಡೆಸುವುದು, ಕ್ಷತ್ರಿಯರ ಕರ್ತವ್ಯವೆಂದರೆ, ಪ್ರಜಾ, ರಕ್ಷಣೆ, ದಾನ ಮಾಡುವುದು, ಮತ್ತು ಯಜ್ಞಗಳನ್ನು ನೆರವೇರಿಸುವುದಕ್ಕೆ ಸಹಾಯ ಮಾಡುವುದು ವೈಶ್ಯರ ಕರ್ತವ್ಯವಾಯಿತು. ಇನ್ನು ಭಗವಂತನು ಶೂದ್ರನಿಗೆ ಒಂದೇ ಒಂದು ಕರ್ತವ್ಯವನ್ನು ಪಾಲಿಸಲು ಆಜ್ಞೆ ಮಾಡಿದ ಅದೇನೆಂದರೆ ಮೇಲಿನ ಮೂರು ಜಾತಿಗಳವರನ್ನು ನಮ್ರತೆಯಿಂದ ಶುಶ್ರೂಷೆ ಮಾಡುವುದು.

ಕಾನೂನಿನ್ವಯ ಋಷಿಗಳು ಐದು ವಿವಿಧ ಸೇವಕರನ್ನು ವಿಂಗಡಿಸಿದ್ದಾರೆ. ಐದನೆಯವರೆಂದು ದಾಸರು ಅಥವಾ ಗುಲಾಮರು ಅದರಲ್ಲೂ ಹದಿನೈದು ವಿಧದವರಿಂದ ( ನಾರದ ಸ್ಮೃತಿ ಅ೫ ಶ್ಲೋಕ೨) ಪರತಂತ್ರವು ಎಲ್ಲಾ ವಿಧವಾದವರಿಗೂ ಸಾಮಾನ್ಯ ಲಕ್ಷಣವೆಂದು ಮುನಿಗಳು ಘೋಷಿಸಿದ್ದರು. ಅವರವರ ಸ್ಥಾನ ಮತ್ತು ಅವರವರ ಜಾತಿ ಮತ್ತು ಕರ್ಮ(ಕೆಲಸ)ಗಳಿಗೆ ಅನುಸಾರವಾಗಿ ತೀರ್ಮಾನಿಸಲ್ಪಡುತ್ತದೆ (ನಾರದ ಸ್ಮೃತಿ ಅ೫ ಶ್ಲೋಕ೪).

## ಅಧ್ಯಾಯ ಐದು

## ದಲಿತರ ಅಭಿವೃದ್ಧಿ ಮತ್ತು ಸರಕಾದ ಯೋಜನೆಗಳು

ಅ) ಶೈಕ್ಷಣಿಕ ನೆರವಿನ ಯೋಜನೆಗಳು.

ಆ) ಉದ್ಯೋಗ ಹಾಗೂ ತರಬೇತಿ ನೆರವಿನ ಯೋಜನೆಗಳು.

ಇ) ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ಯೋಜನೆಗಳು.

# ಅಧ್ಯಾಯ ಐದು

# ದಲಿತರ ಅಭಿವೃದ್ಧಿ ಮತ್ತು ಸರಕಾದ ಯೋಜನೆಗಳು

ಭಾರತದಲ್ಲಿ ಜಾತಿ ವ್ಯವಸ್ಥೆ ತನ್ನ ಕದಂಬ ಬಾಹುಗಳನ್ನು ಚಾಚಿಕೊಂಡು ದೇಶದ ಅಭಿವೃದ್ಧಿಗೆ ಕಂಟಕಪ್ರಾಯವಾಗಿರುವುದು ದುರದೃಷ್ಟಕರ. ಇದು ಹಿಂದಿನಿಂದಲೂ ಜಾತಿಯಾಧಾರಿತ ಸಮಾಜ ವ್ಯವಸ್ಥೆಯುಳ್ಳ ದೇಶ. ಇಲ್ಲಿನ ಹಲವು ಜನವರ್ಗಗಳು ಶತಮಾನಗಳಿಂದಲೂ ಸಮಾಜದ ಮುಖ್ಯವಾಹಿನಿಯಿಂದ ತೀರ ಹಿಂದುಳಿದಿರುವುದು ಸಾಮಾನ್ಯವಾಗಿದೆ. ಇಲ್ಲಿ ಜಡಗಟ್ಟಿರುವ ಸಾಮಾಜಿಕ ಅಸಮತೋಲನವನ್ನು ಹೋಗಲಾಡಿಸಿ ಪ್ರತಿಯೊಬ್ಬ ಪ್ರಜೆಗೂ ಒಂದೇ ರೀತಿಯಾದ ನಾಗರಿಕ ಹಕ್ಕು ಇರಬೇಕೆಂಬ ಉದ್ದೇಶದಿಂದ ಭಾರತದ ಸಂವಿಧಾನವು ಈ ವರ್ಗಗಳ ಜನರಿಗೆ ಹಲವು ಸಂವಿದಾನತ್ಮಕ ರಕ್ಷಣೆ ಒದಗಿಸಿದೆ. ಕೆಲವು ವಿಶೇಷ ಹಕ್ಕು ನೀಡಿದೆ. ಹಾಗೆಯೇ ಇವರ ಅಭಿವೃದ್ಧಿಗಾಗಿ ಅನೇಕ ಸವತ್ತುಗಳನ್ನೂ ಸಹಾ ನೀಡುತ್ತಿದೆ. ಸಮಾಜದ ಇತರ ಜನ ಸಮುದಾಯಗಳಲ್ಲಿ ಬೆರೆತು ಅವರಿಗೆ ಸರಿಸಮಾನಾಗಿ ತಮ್ಮ ಬದುಕು ರೂಪಿಸಿಕೊಳ್ಳಲು ಸಾಮಾಜಿಕವಾಗಿ ಆರ್ಥಿಕವಾಗಿ ಹಾಗು ಶೈಕ್ಷಣಿಕವಾಗಿ ಬೆಳೆಯಲು ಅಗತ್ಯವಾದ ಅನೇಕ ದಲಿತರ ಯೋಜನೆಗಳನ್ನು ಇವರಿಗಾಗಿಯೇ ರೂಪಿಸಲಾಗಿದೆ. ಅಸ್ಪೃಶ್ಯತೆ, ಜಾತೀಯತೆಯಂತಹ ಅಮಾನವೀಯ ಆಚರಣೆಯಿಂದ ಶೋಷಿಸಲ್ಪಟ್ಟ ಜನರ ಅಭ್ಯುದಯಕ್ಕಾಗಿ ಕರ್ನಾಟಕ ಸರ್ಕಾರ ಪ್ರತ್ಯೇಕ ಇಲಾಖೆಯನ್ನು ಸ್ಥಾಪಿಸಿ ಅದನ್ನು ಸಮಾಜ ಕಲ್ಯಾಣ ಇಲಾಖೆ ಎಂಬ ಹೆಸರಿನಿಂದ ಕರೆಯಲಾಗುತ್ತಿದೆ. ಈ ಇಲಾಖೆಯು ಪರಿಶಿಷ್ಟ ಜಾತಿಯ ಅಭಿವೃದ್ಧಿಗಾಗಿ ಹಲವಾರು ಜನಪರ ಕಾರ್ಯಕ್ರಮಗಳು ಹಾಗು ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.

ಕರ್ನಾಟಕ ರಾಜ್ಯದಲ್ಲಿ ೧೯೯೧ ನೇ ಜನಗಣತಿಯ ಪ್ರಕಾರ ಪರಿಶಿಷ್ಟ ಜಾತಿಗಳು ೭೩,೬೯,೨೭೯ ಜನಸಂಖ್ಯೆಯಿದ್ದು ೨೦೦೧ ನೇ ವರ್ಷಕ್ಕೆ ೮೫,೬೩,೯೩೦ ಲಕ್ಷಕ್ಕೆ ಏರಿಕೆಯಾಗಿರುವುದು ಕಂಡುಬರುತ್ತದೆ.

ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿ ತಾಲೂಕಿನ ಒಟ್ಟು ಜನಸಂಖ್ಯೆ ೧೫೯೮೮೬ ಆಗಿದ್ದು ಅದರಲ್ಲಿ ಪ.ಜಾ.ಯ ಜನರು ೨೯೯೪೧ ರಷ್ಟಿರುತ್ತಾರೆ. ಇಲ್ಲಿನ ಬಹುತೇಕ ಜನರು ಗ್ರಾಮೀಣ ಪ್ರದೇಶದ ನಿವಾಸಿಗಳಾಗಿದ್ದು ಕಡು ಬಡತನದಿಂದ ಜೀವನ ನಿರ್ವಹಿಸುತ್ತಿದ್ದಾರೆ.

ಈ ದೃಷ್ಟಿಯನ್ನಿಟ್ಟುಕೊಂಡು ಕರ್ನಾಟಕ ಸರ್ಕಾರ ಅನೇಕ ಜನಪರ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಿದೆ. ಈ ಜನರ ಪ್ರಗತಿಗಾಗಿ ಕೈಗೊಳ್ಳಲಾಗುತ್ತಿರುವ ಅನೇಕ ಯೋಜನೆಗಳು

ಮತ್ತು ಕಾರ್ಯಕ್ರಮಗಳಿಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಅನುದಾನ ಒದಗಿಸುತ್ತಿವೆ. ವಿಶೇಷ ಘಟಕ ಯೋಜನೆಯನ್ನು ಹಲವಾರು ಅಭಿವೃದ್ಧಿ ಇಲಾಖೆಗಳು ಅನುಷ್ಠಾನಗೊಳಿಸುತ್ತಿವೆ. ಅದರಂತೆ ಕೇಂದ್ರ ಸರ್ಕಾರದ ಕೆಲವು ಪ್ರತ್ಯೇಕ ಯೋಜನೆಗಳೂ ಜಾರಿಯಲ್ಲಿವೆ. ಹಲವು ಕೇಂದ್ರೀಯ ಪುರಸ್ಕೃತ ಯೋಜನೆಗಳಿಗೆ ರಾಜ್ಯ ಸರ್ಕಾರ ಶೇ.೫೦ ರಷ್ಟು ಅನುದಾನ ನೀಡಿ ಅನುಷ್ಠಾನಗೊಳಿಸುತ್ತಿದೆ.

ಈ ಎಲ್ಲಾ ಯೋಜನೆಗಳನ್ನು ನಾವು

**೧. ಶೈಕ್ಷಣಿಕ ನೆರವಿನ ಯೋಜನೆಗಳು**

**೨. ಉದ್ಯೋಗ ಹಾಗೂ ತರಬೇತಿ ನೆರವಿನ ಯೋಜನೆಗಳು**

**೩. ಆರ್ಥಿಕ ಹಾಗೂ ಸಾಮಾಜಿಕ ನೆರವಿನ ಯೋಜನೆಗಳು**

ಎಂದು ಮೂರು ಪ್ರಕಾರಗಳಲ್ಲಿ ವಿಂಗಡಿಸಬಹುದು.

**೧. ಶೈಕ್ಷಣಿಕ ನೆರವಿನ ಯೋಜನೆಗಳು:**

ಶಿಕ್ಷಣ ಮಾನವನ ಬದುಕಿನ ದಾರಿದೀಪ, ಶಿಕ್ಷಣ ಅಭಿವೃದ್ಧಿಗೆ ಪೂರಕ ಎಂಬುದರಲ್ಲಿ ಎರಡು ಮಾತಿಲ್ಲ. ಶೈಕ್ಷಣಿಕವಾಗಿ ಒಂದು ದೇಶ ಮುಂದುವರೆದಿದ್ದರೆ ಅಲ್ಲಿರುವವರು ಎಲ್ಲಾ ಕ್ಷೇತ್ರಗಳಲ್ಲೂ ಅಭಿವೃದ್ಧಿಯನ್ನು ಸಾಧಿಸಬಲ್ಲರೆಂಬುದಕ್ಕೆ ಹಲವಾರು ರಾಷ್ಟ್ರಗಳ ನಿದರ್ಶನಗಳಿವೆ.

ಕರ್ನಾಟಕ ರಾಜ್ಯದಲ್ಲಿ ಭಾರತದ ಒಟ್ಟು ಜನಸಂಖ್ಯೆಯ ಶೇ.೧೭.೧ಳ ರಷ್ಟಿರುವ ಜನರಲ್ಲಿ ಶೇ. ೪೭ ಜನ ಅನಕ್ಷರಸ್ಥರಿರುವುದು ತೀರಾ ವಿಷಾದನೀಯ. ಅದರಲ್ಲೂ ನನ್ನ ಅಧ್ಯಯನ ಕ್ಷೇತ್ರ ಹಗರಿಬೊಮ್ಮನಹಳ್ಳಿಯಲ್ಲಿ ಪರಿಶಿಷ್ಟ ಜಾತಿಯ ಜನಸಂಖ್ಯೆ ತಾಲೂಕಿನ ಒಟ್ಟು ಜನಸಂಖ್ಯೆಯ ಶೇ.೧೮.೭ ಇರುತ್ತಾರೆ. ಅವರ ಸಾಕ್ಷರತೆಯ ಪ್ರಮಾಣ ಶೇ.೩೭ ರಷ್ಟಿರುವುದು ತೀರಾ ವಿಷಾದನೀಯ. ಇಷ್ಟು ಅಗಾಧ ಪ್ರಮಾಣದಲ್ಲಿರುವ ಅನಕ್ಷರತೆಯನ್ನು ಹೋಗಲಾಡಿಸಿ ದಲಿತ ಜನಾಂಗವನ್ನು ಕತ್ತಲೆಯಿಂದ ಬೆಳಕಿಗೆ ತರುವ ಉದ್ದೇಶದಿಂದ ಸರ್ಕಾರ ನೆರವಿನ ಯೋಜನೆಗಳನ್ನು ಜಾರಿಗೆ ತಂದು ಅನುಷ್ಠಾನಗೊಳಿಸುತ್ತದೆ. ಅವುಗಳಲ್ಲಿ ಕೆಲವು ಪ್ರಮುಖ ಕಾರ್ಯಕ್ರಮಗಳನ್ನು ಈ ಮುಂದೆ ವಿವರಿಸಲಾಗಿದೆ.

**೧. ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳು**

ಪರಿಶಿಷ್ಟಜಾತಿಯ ಮಕ್ಕಳಿಗೆ ಚಿಕ್ಕವಯಸ್ಸಿನಲ್ಲಿಯೇ ಶಾಲೆಗೆ ಹೋಗುವ ಅಭ್ಯಾಸ ರೂಢಿಸಲು ಈ ಯೋಜನೆ ರೂಪಿಸಲಾಗಿದೆ. ರಾಜ್ಯದಲ್ಲಿ ಇಂತಹ ೩೮೫ ನರ್ಸರಿಯನ್ನು ಮಹಿಳಾ ಕಲ್ಯಾಣ ಕೇಂದ್ರಗಳಿದ್ದು, ೧೮೨೫೦ ಮಕ್ಕಳು ಇದರ ಪ್ರಯೋಜನ ಪಡೆಯುತ್ತಿದ್ದಾರೆ. ೩ ರಿಂದ ೫ ವರ್ಷದ ವಯಸ್ಸಿನ ಗಂಡು ಅಥವಾ ಹೆಣ್ಣುಮಕ್ಕಳು ಇಂತಹ ಕೇಂದ್ರದಲ್ಲಿ ಪ್ರವೇಶ ಪಡೆಯಲು ಅರ್ಹರಿರುತ್ತಾರೆ. ಪ್ರತಿ ಕೇಂದ್ರದಲ್ಲಿ ೫೦ ಮಕ್ಕಳಿಗೆ ಪ್ರವೇಶಾವಕಾಶವಿರುತ್ತದೆ. ಈ ಮಕ್ಕಳ ಯೋಗಕ್ಷೇಮ ನೋಡಿಕೊಳ್ಳಲು ಒಬ್ಬ ಮಹಿಳಾ ಕಲ್ಯಾಣ ಸಂಚಾಲಕಿ ಹಾಗೂ

ಒಬ್ಬ ನಿರ್ವಾಹಕಿಯು ಇರುತ್ತಾರೆ. ಈ ನಿರ್ವಾಹಕಿಯು ಮಕ್ಕಳನ್ನು ನೋಡಿಕೊಳ್ಳುವುದರ ಜೊತೆಗೆ ಅಕ್ಷರಭ್ಯಾಸ ನೀತಿ ಕಥೆ, ಹಾಡು ಹಾಗೂ ಅವರ ಚಿಂತನಾಕ್ರಮವು ಬೆಳೆಯಲು ಅಗತ್ಯವಾದ ಪಠ್ಯವನ್ನು ಬೋಧಿಸಲಾಗುತ್ತಿದೆ.

ಈ ಕೇಂದ್ರಗಳಲ್ಲಿ ಪ್ರಾಥಮಿಕ ಪೂರ್ವ ಶಿಕ್ಷಣದ ಜೊತೆಗೆ ವಾರದ ದಿನಗಳಲ್ಲಿ ಒಂದು ಮಗುವಿಗೆ ಒಂದು ದಿನಕ್ಕೆ ರೂ ೧ ರಂತೆ ಮದ್ಯಾಹ್ನದ ಉಪಹಾರ ನೀಡಲಾಗುತ್ತಿದೆ. ಪ್ರತಿ ಮಗುವಿಗೂ ೫೦ ಮೌಲ್ಯದ ಸೋಪು, ತಲೆಗೆ ಎಣ್ಣೆ ಮುಂತಾದವುಗಳನ್ನು ನೀಡಲಾಗುತ್ತಿವೆ. ಅಲ್ಲದೇ ಎರಡು ಜೊತೆ ಸಮವಸ್ತ್ರ ಆಟಿಕೆಗಳು, ಕಲಿಕೆಯ ಸಲಕರಣೆಗಳು ಹಾಗೂ ಬಣ್ಣದ ಚಿತ್ರಪಟಗಳನ್ನು ಸಹ ಒದಗಿಸಲಾಗುತ್ತಿದೆ.

ಸದ್ಯಕ್ಕೆ ನನ್ನ ಅಧ್ಯಯನದ ಕ್ಷೇತ್ರದಲ್ಲಿ ಇದ್ದ ಒಂದು ಮಹಿಳಾ ಕಲ್ಯಾಣ ಕೇಂದ್ರವನ್ನು ಸರ್ಕಾರದ ಆದೇಶಾನುಸಾರ ಮುಚ್ಚಲಾಗಿರುತ್ತದೆ. ಏಕೆಂದರೆ ಪ್ರತಿ ಮಾಹೆ ಒಂದು ಕಲ್ಯಾಣ ಕೇಂದ್ರಕ್ಕೆ ಮಕ್ಕಳಿಗೆ ೨೦೦೦ ರಿಂದ ೨೫೦೦ ರೂ. ಖರ್ಚಾದರೆ ಸಿಬ್ಬಂದಿಗೆ ನೀಡುವ ಸಂಬಳ ೮ ರಿಂದ ೧೦ ಸಾವಿರ ರೂ.ಗಳು ಖರ್ಚಾಗುತ್ತಿರುವ ವಿಪರ್ಯಾಸವನ್ನು ಅರಿತು ಕಾರ್ಯನಿರ್ವಹಿಸುತ್ತಿದ್ದ ಮಹಿಳಾ ಕಲ್ಯಾಣ ಕೇಂದ್ರವನ್ನು ಮುಚ್ಚಿ ಪರಿಶಿಷ್ಟ ಜಾತಿ ಕಾಲೊನಿಯ ಹತ್ತಿರವಿರುವ ಅಂಗನವಾಡಿ ಕೇಂದ್ರಕ್ಕೆ ಸೇರಿಸಿರುವುದು ಗಮನಾರ್ಹ ಸಂಗತಿ. ಇದರಿಂದ ಆರ್ಥಿಕ ಮಿತವ್ಯಯವನ್ನು ಸಾಧಿಸಬಹುದಾದ ಒಂದು ಕಾರಣವಿದ್ದರೆ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ಅಂಗನವಾಡಿ ಕೇಂದ್ರಗಳಿಗೆ ವಿಶೇಷ ಘಟಕ ಯೋಜನೆಯ ಮೂಲಕ ಹಣಕಾಸಿನ ನೆರವು ನೀಡಿ ಪ್ರಾಥಮಿಕ ಪೂರ್ವ ಶಿಕ್ಷಣ ಪಡೆಯುತ್ತಿರುವ ಮಕ್ಕಳಿಗೆ ಹೆಚ್ಚಿನ ನೆರವು ಒದಗಿಸಬಹುದಾಗಿದೆ.

**೨. ವಸತಿ ಶಾಲೆಗಳು**

ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ವಸತಿ ಶಾಲೆಗಳನ್ನು ಸ್ಥಾಪಿಸಲಾಗಿದೆ. ಶಿಕ್ಷಣ ಇಲಾಖೆಯಿಂದ ಮಾನ್ಯತೆ ಪಡೆದ ಈ ಶಾಲೆಗಳಲ್ಲಿ ಓದಲು ಇಚ್ಛಿಸುವ ವಿದ್ಯಾರ್ಥಿಗಳಿಗೆ ಅನೇಕ ಸವಲತ್ತುಗಳನ್ನು ಒದಗಿಸಲಾಗಿದೆ. ರಾಜ್ಯದಲ್ಲಿ ೬೦ ವಸತಿ ಶಾಲೆಗಳಿದ್ದು ೬೦೨೫ ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆಯುತ್ತಿದ್ದಾರೆ.

**ದೊರೆಯುವ ಸೌಲಭ್ಯಗಳು**

ಈ ಶಾಲೆಗಳಲ್ಲಿ ಓದುವ ಮಕ್ಕಳಿಗೆ ೧ ರಿಂದ ೪ ನೇ ತರಗತಿಯವರೆಗೆ ವಿದ್ಯಾಭ್ಯಾಸ ಮಾಡಲು ಅವಕಾಶವಿದೆ.

**ವಸತಿಶಾಲೆಯ ಮಾದರಿ ವೆಚ್ಚ**

೧. ಬೋಜನ ವೆಚ್ಚಕ್ಕಾಗಿ ಪ್ರತಿ ವಿದ್ಯಾರ್ಥಿಗೆ ಮಾಹೆಯಾನ ರೂ ೩೫೦ ರಂತೆ ೧೦ತಿಂಗಳಿಗೆ ೩೫೦೦.೦೦

೨. ಸಮವಸ್ತ್ರ ವಾರ್ಷಿಕವಾಗಿ ೨೦೦ ರಂತೆ ೨೦೦.೦೦

೩. ಇತರೆ ವೆಚ್ಚ ಮಾಹೆಯಾನ ೧೫೦.೦೦ ರಂತೆ ತಿಂಗಳಿಗೆ ೧೫೦.೦೦ ರೂ

೪. ಬಟ್ಟೆ ತೊಳೆಯುವ ಭತ್ಯೆ ಮಾಹೆಯಾನ ರೂ ೧೦ ರಂತೆ ೧೦ ತಿಂಗಳಿಗೆ ೧೦೦.೦೦ ರೂ

೫. ಕ್ಷೌರದ ವೆಚ್ಚ ರೂ ೨ ರಂತೆ ವಾರ್ಷಿಕ ೬ ಬಾರಿ ೧೨.೦೦ ರೂ

೬. ವೈದ್ಯಕೀಯ ವೆಚ್ಚ ವಾರ್ಷಿಕ ರೂ. ೫.೦೦ ರಂತೆ ೫೦.೦೦ ರೂ

೭. ಹಾಸಿಗೆ ಹೊದಿಕೆ ೩ ವರ್ಷಗಳಿಗೊಮ್ಮೆ ರೂ. ೧೦೦.೦೦ ರಂತೆ ರೂ. ೧೦೦.೦೦

ಗ್ರಾಮಾಂತರ ಪ್ರದೇಶದ ಸುತ್ತಮುತ್ತಲಿನ ಪರಿಶಿಷ್ಟಜಾತಿಯ ಮಕ್ಕಳು ಈ ಶಾಲೆಗೆ ಸೇರಬಹುದು. ಮಕ್ಕಳ ವಯೋಮಿತಿ ೮ ರಿಂದ ೧೦ ವರ್ಷದೊಳಗಿರಬೇಕು.

**ಭಾದಕಗಳು**

ಈ ಶಾಲೆಗಳಲ್ಲಿ ಪೂರ್ಣ ಪ್ರಮಾಣದ ಶಿಕ್ಷಕರ ಕೊರತೆಯಿದೆ. ಅಲ್ಲದೆ ಈಗ ನಿರ್ವಹಿಸುತ್ತಿರುವ ಶಿಕ್ಷಕರೂ ಸಹ ಶಿಕ್ಷಣ ಇಲಾಖೆಯಿಂದ ನಿಯೋಜನೆ ಮೇರೆಗೆ ಕೆಲಸ ನಿರ್ವಹಿಸುತ್ತಿರುತ್ತಾರೆ. ಸದರಿ ವಸತಿ ಶಾಲೆಗಳಲ್ಲಿ ನುರಿತ ಶಿಕ್ಷಕರ ಕೊರತೆಯಿದ್ದು, ಅವರಿಗೆ ಸಂಪನ್ಮೂಲಗಳಿಂದ ಬೋಧನೆಯ ಬಗ್ಗೆ ತರಬೇತಿ ನೀಡಿ ಮಕ್ಕಳು ಶಿಕ್ಷಣ ಕ್ಷೇತ್ರದಲ್ಲಿ ಪ್ರಗತಿಯನ್ನು ಸಾಧಿಸಲು ಕ್ರಮ ಕೈಗೊಳ್ಳಬೇಕಾಗುತ್ತದೆ. ಇಂತಹ ಆಶ್ರಮ ಶಾಲೆಗಳಿಗೆ ಶಿಕ್ಷಕರನ್ನು ನೇಮಿಸುವಾಗ ಸಾಧ್ಯವಾದ ಮಟ್ಟಿಗೆ ದಲಿತಪರ ಕಾಳಜಿಯುಳ್ಳ, ಅವರ ಕಷ್ಟಗಳನ್ನು ಅರಿತುಕೊಂಡಿರುವ ಶಿಕ್ಷಕರನ್ನು ನೇಮಿಸಿದಲ್ಲಿ ವಿದ್ಯಾರ್ಥಿಗಳು ಬಹುಬೇಗ ಸ್ಪಂದಿಸುತ್ತಾರೆ.

**ಸಲಹೆಗಳು**

ಅಂತೆಯೇ ನಿರ್ವಹಣೆ ಭತ್ಯೆ, ಕ್ಷೌರದ ಭತ್ಯೆ ಇನ್ನಿತರೆ ಭತ್ಯೆಗಳು ಮಾರುಕಟ್ಟೆ ದರಕ್ಕಿಂತ ಕಡಿಮೆಯಿದ್ದು ಇರುವ ಹಣದಲ್ಲಿ ಪೂರ್ಣ ಸೌಲಭ್ಯಗಳು ನೀಡುವಲ್ಲಿ ಸಾಧ್ಯವಾಗುತ್ತಿಲ್ಲ.

ಆದ್ದರಿಂದ ಸಮವಸ್ತ್ರದ ಮೊತ್ತವನ್ನು ೨೦೦ ರಿಂದ ೩೫೦ ಕ್ಕೆ ಇತರೆ ವೆಚ್ಚವನ್ನು ೧೫ ರೂಗಳಿಂದ ೪೦ ರೂಗಳಿಗೆ, ಕ್ಷೌರದ ವೆಚ್ಚವನ್ನು ೨ ರೂನಿಂದ ೧೦ ರೂಗಳಿಗೆ, ವೈದ್ಯಕೀಯ ವೆಚ್ಚವನ್ನು ೫೦ ರೂಗೆ, ಹಾಗೂ ಹಾಸಿಗೆ ಹೊದಿಕೆ ವೆಚ್ಚವನ್ನು ೧೦೦ ರಿಂದ ೩೦೦ ರೂಗಳಿಗೆ ಹೆಚ್ಚಿಸುವುದು ಸೂಕ್ತವಾದುದಾಗಿದೆ. ಜೊತೆಗೆ ವಸತಿಶಾಲೆಗಳಲ್ಲಿ ಮಕ್ಕಳಿಗೆ ಪಠ್ಯೇತರ ಚಟುವಟಿಕೆಗಳಲ್ಲಿ ತೊಡುಗುವಂತೆ ಮಾಡಬೇಕು. ಇದಕ್ಕೆ ಪೂರಕವಾದ ಸೌಲಭ್ಯಗಳನ್ನು ಒದಗಿಸಿದಲ್ಲಿ ದಲಿತ ಮಕ್ಕಳ ಪ್ರಾಥಮಿಕ ಹಂತದ ಶಿಕ್ಷಣಕ್ಕೆ ಬುನಾದಿ ಹಾಕಿದಂತಾಗುತ್ತದೆ.

೩.ವಿದ್ಯಾರ್ಥಿನಿಲಯಗಳು (ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು ಜಿಲ್ಲಾವಲಯ ಕಾರ್ಯಕ್ರಮ)

ಈ ಕಾರ್ಯಕ್ರಮದ ಉದ್ದೇಶ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವ, ಬಡತನ ರೇಖೆಗಿಂತ ಕೆಳಮಟ್ಟದಲ್ಲಿ ಜೀವಿಸುತ್ತಿರುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಿಕೊಂಡು ಹೋಗುವುದು. ಈ ಕಾರ್ಯಕ್ರಮವನ್ನು ಕರ್ನಾಟಕ ರಾಜ್ಯ ಸರ್ಕಾರ ಜಾರಿಗೆ ತಂದಿದೆ. ದೂರದ ಹಳ್ಳಿಗಳಲ್ಲಿ ವಾಸಿಸುವ ಮಕ್ಕಳು ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಲು ಶಾಲೆಗಳು ಲಭ್ಯವಿಲ್ಲದ ಕಾರಣ ಹಲವು ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳು ಶಾಲೆಬಿಡುವ ಪ್ರವೃತ್ತಿಯಿರುವುದರಿಂದ ಅದನ್ನು ತಪ್ಪಿಸಲು ಈ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಲಾಗಿದೆ. ಇದರಲ್ಲಿ ಬಾಲಕ ಮತ್ತು ಬಾಲಕಿಯರಿಗೆ ಪ್ರತ್ಯೇಕ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಲಾಗಿದೆ. ಈ ವಿದ್ಯಾರ್ಥಿನಿಲಯಗಳಲ್ಲಿ ೫ ರಿಂದ ೧೦ ನೇ ತರಗತಿಯವರೆಗೆ ಅಭ್ಯಾಸ ಮಾಡುತ್ತಿರುವ ಪರಿಶಿಷ್ಟ ಜಾತಿಯ ಬಾಲಕರಿಗೆ ಮತ್ತು ೩ ರಿಂದ ೧೦ ನೇ ತರಗತಿಯಲ್ಲಿ ಅಭ್ಯಾಸ ಮಾಡುತ್ತಿರುವ ಬಾಲಕಿಯರಿಗೆ ಅವಕಾಶವನ್ನು ನೀಡಲಾಗುತ್ತಿದೆ. ಈ ವಿದ್ಯಾರ್ಥಿನಿಲಯಗಳಲ್ಲಿ ಗ್ರಾಮಾಂತರ ಪ್ರದೇಶಗಳಿಂದ ಬರುವಂತಹ ವಿದ್ಯಾರ್ಥಿಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಲಾಗಿದೆ. ಈ ವಿದ್ಯಾರ್ಥಿನಿಲಯದ ನಿರ್ವಹಣೆಯನ್ನು ನೋಡಿಕೊಳ್ಳಲು ಪ್ರತಿಯೊಂದು ವಿದ್ಯಾರ್ಥಿನಿಲಯದಲ್ಲಿ ಒಬ್ಬ ಮೇಲ್ವಿಚಾರಕರು, ಇಬ್ಬರು ಅಡಿಗೆಯವರು, ಒಬ್ಬ ಅಡಿಗೆ ಸಹಾಯಕರು ಇರುತ್ತಾರೆ. ಬಾಲಕಿಯರ ವಿದ್ಯಾರ್ಥಿನಿಲಯದಲ್ಲಿ ಮೇಲಿನ ಸಿಬ್ಬಂದಿಗಳ ಜೊತೆಗೆ ಒಬ್ಬ ರಾತ್ರಿ ಕಾವಲುಗಾರರು ಕೆಲಸ ನಿರ್ವಹಿಸುತ್ತಿದ್ದಾರೆ. ಈ ವಿದ್ಯಾರ್ಥಿನಿಲಯದಲ್ಲಿ ವಿದ್ಯಾರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವುದರ ಮೂಲಕ ಅರ್ಜಿ ಪಡೆದು, ಪಟ್ಟಿ ಮಾಡಿ ಅವುಗಳನ್ನು ತಾಲೂಕು ಮಟ್ಟದಲ್ಲಿರುವ ಆಯ್ಕೆ ಸಮಿತಿಯ ಮುಂದೆ ಇಟ್ಟು ಆಯ್ಕೆ ಮಾಡುತ್ತಾರೆ. ಈ ಆಯ್ಕೆ ಸಮಿತಿಗೆ ಈ ಕೆಳಕಂಡಂತೆ ಅಧ್ಯಕ್ಷರು ಮತ್ತು ಸದಸ್ಯರುಗಳು ಇರುತ್ತಾರೆ.

| | |
|---|---|
| ೧. ತಾಲೂಕು ಪಂಚಾಯತ್ ಸಮಿತಿ ಅಧ್ಯಕ್ಷರು | ಅಧ್ಯಕ್ಷರು |
| ೨. ಕಾರ್ಯನಿರ್ವಾಹಕ ಅಧಿಕಾರಿಗಳು ತಾಲೂಕು ಪಂಚಾಯತ್ | ಸದಸ್ಯರು |
| ೩. ಆಯಾ ಕ್ಷೇತ್ರಗಳ ವಿಧಾನಸಭೆ ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| ೪. ಆಯಾ ತಾಲೂಕಿನ ತಹಸೀಲ್ದಾರರು | ಸದಸ್ಯರು |
| ೫. ಸಹಾಯಕ ಶಿಕ್ಷಣಾಧಿಕಾರಿಗಳು | ಸದಸ್ಯರು |
| ೬. ಸ್ಥಳೀಯ ಸರ್ಕಾರಿ ಆಸ್ಪತ್ರೆ ವೈದ್ಯಾಧಿಕಾರಿಗಳು | ಸದಸ್ಯರು |
| ೭. ತಾಲೂಕು ಸಮಾಜ ಕಲ್ಯಾಣ ಅಧಿಕಾರಿಗಳು | ಸದಸ್ಯ ಕಾರ್ಯದರ್ಶಿಗಳು |

ಈ ವಿದ್ಯಾರ್ಥಿ ನಿಲಯಗಳಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಗೆ ಉಚಿತ ಊಟ ಮತ್ತು ವಸತಿಯನ್ನು ನೀಡುತ್ತಿದ್ದು ಅವರುಗಳಿಗೆ ತಗಲುವ ವೆಚ್ಚವನ್ನು ಈ ಕೆಳಗಿನ ಕೋಷ್ಟಕದಲ್ಲಿ ವಿವರಿಸಲಾಗಿದೆ.

ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳಲ್ಲಿ ವಿದ್ಯಾರ್ಥಿಗಳಿಗೆ ನೀಡುವ ಸೌಲಭ್ಯಗಳಿಗೆ ತಗುಲುವ ವೆಚ್ಚದ ವಿವರ

**ಕೋಷ್ಟಕ ೫.೧**

| | |
|---|---|
| ಅ. ಪ್ರತಿ ವಿದ್ಯಾರ್ಥಿಗೆ | |
| ೧. ಮಾಸಿಕ ಆಹಾರದ ವೆಚ್ಚ | ಮಾಸಿಕ ರೂ.೪೦೦.೦೦ |
| ೨. ವಾರ್ಷಿಕ ೨ ಜೊತೆ ಉಡುಪು | ವಾರ್ಷಿಕ ರೂ.೨೫೦.೦೦ |
| ೩. ವಾರ್ಷಿಕ ಪಠ್ಯ ಪುಸ್ತಕ, ಲೇಖನ ಸಾಮಗ್ರಿ | ವಾರ್ಷಿಕ ರೂ ೨೫೦.೦೦ |
| ೪. ಹಾಸಿಗೆ ಹೊದಿಕೆ ೩ ವರ್ಷಗಳಿಗೊಮ್ಮೆ | ರೂ ೩೫೦.೦೦ |
| ೫. ಮಾಸಿಕ ಇತರೆ ವೆಚ್ಚಗಳು | ವಾರ್ಷಿಕ ರೂ ೪೦.೦೦ |
| ೬. ವಾರ್ಷಿಕ ಬಾಲಕರಿಗೆ ಕ್ಷೌರಕ್ಕಾಗಿ | ರೂ ೫೦.೦೦ |
| **ಆ. ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಕ್ಕೆ** | |
| ೧. ವಿದ್ಯಾರ್ಥಿನಿಲಯಕ್ಕೆ ಪ್ರತಿ ಅರೆಕಾಲಿಕ ಬೋಧಕರಿಗೆ (ಮಾಹೆಯಾನ ತಲಾ ರೂ. ೫೦೦ ರಂತೆ ೩ ಬೋಧಕರಿಗೆ) | ರೂ ೧೫೦೦.೦೦ |
| ೨. ವಾರಪತ್ರಿಕೆ, ದಿನಪತ್ರಿಕೆಗಾಗಿ ವಾರ್ಷಿಕ | ರೂ ೧೦೦೦.೦೦ |
| ೩. ವೈದ್ಯಕೀಯ ವೆಚ್ಚ ವಾರ್ಷಿಕ | ರೂ ೧೦೦೦.೦೦ |
| ೪. ಪಾತ್ರೆ ಸಾಮಾನುಗಳ ಕಲಾಯಿ ವಾರ್ಷಿಕ | ರೂ ೬೦೦.೦೦ |
| ೫. ವಿದ್ಯುತ್‌ಚ್ಛಕ್ತಿ ಮತ್ತು ನೀರು ಅಥವಾ ವಾಸ್ತವಿಕವಾಗಿ ತಗಲುವ ವೆಚ್ಚ | ರೂ ೧೨೦೦೦.೦೦ |
| ೬. ಸ್ವಂತ ಕಟ್ಟಡಗಳಿಲ್ಲದ ವಿದ್ಯಾರ್ಥಿನಿಲಯಗಳ ಬಾಡಿಗೆ ವಾರ್ಷಿಕ ಅಥವಾ ಲೋಕೋಪಯೋಗಿ ಇಲಾಖೆ ನಿಗಧಿ ಪಡಿಸುವ ಧರ | ರೂ. ೧೨೦೦೦.೦೦ |
| ೭. ಕ್ರೀಡಾ ಸಾಮಗ್ರಿಗಳನ್ನು ನಿಲಯವನ್ನು ಪ್ರಾರಂಭಿಸುವ ವೇಳೆಯಲ್ಲಿ | ರೂ ೧೦೦೦.೦೦ |

**ಕೃಪೆ: ಕರ್ನಾಟಕ ಸರ್ಕಾರ ಸಮಾಜ ಕಲ್ಯಾಣ ಇಲಾಖೆಯ ದಾರಿದೀಪ ೨೦೦೩**

ಇಂತಹ ವಿದ್ಯಾರ್ಥಿ ನಿಲಯಗಳು ನನ್ನ ಅಧ್ಯಯನದ ಕ್ಷೇತ್ರವಾದ ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ೬ ಬಾಲಕರ ವಿದ್ಯಾರ್ಥಿ ನಿಲಯ ಮತ್ತು ೧ ಬಾಲಕಿಯರ ನಿಲಯವಿದ್ದು, ಇವುಗಳಲ್ಲಿ ಪ್ರತಿ ವರ್ಷ ೫೫೫ ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆದುಕೊಳ್ಳುತ್ತಿದ್ದಾರೆ.

ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿರುವ ವಿದ್ಯಾರ್ಥಿ ನಿಲಯಗಳ ವಿವರಗಳು ಈ ಕೆಳಕಂಡಂತಿವೆ.

| | ಕೋಷ್ಟಕ೫.೨ | |
|---|---|---|
| ನಿಲಯದ ಹೆಸರು | ಸ್ಥಳ | ಸಂಖ್ಯೆ |
| ೧. ಸರ್ಕಾರಿ ಬಾಲಕರ ವಿದ್ಯಾರ್ಥಿ ನಿಲಯ | ಹಗರಿಬೊಮ್ಮನಹಳ್ಳಿ | ೮೦ |
| ೨. ಸರ್ಕಾರಿ ಬಾಲಕರ ವಿದ್ಯಾರ್ಥಿ ನಿಲಯ | ಹಗರಿಬೊಮ್ಮನಹಳ್ಳಿ | ೯೦ |
| ೩. ಸರ್ಕಾರಿ ಬಾಲಕರ ವಿದ್ಯಾರ್ಥಿ ನಿಲಯ | ತಂಬ್ರಹಳ್ಳಿ | ೮೦ |
| ೪. ಸರ್ಕಾರಿ ಬಾಲಕರ ವಿದ್ಯಾರ್ಥಿ ನಿಲಯ | ಹಂಪಾಸಾಗರ | ೧೦೦ |
| ೫. ಸರ್ಕಾರಿ ಬಾಲಕರ ವಿದ್ಯಾರ್ಥಿ ನಿಲಯ | ಮೋರಿಗೇರಿ | ೮೦ |
| ೬ ಸರ್ಕಾರಿ ಬಾಲಕರ ವಿದ್ಯಾರ್ಥಿ ನಿಲಯ | ಕೋಗಳಿ | ೭೫ |
| ೭ ಸರ್ಕಾರಿ ಬಾಲಕರ ವಿದ್ಯಾರ್ಥಿ ನಿಲಯ | ಮಾಲವಿ | ೫೦ |

ಈ ವಿದ್ಯಾರ್ಥಿ ನಿಲಯಗಳಲ್ಲಿ ಶೇ.೭೫ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ, ಶೇ.೨೫ ಪರಿಶಿಷ್ಟ ಪಂಗಡ ಹಾಗೂ ಇತರರಿಗೆ ಕಾಯ್ದಿರಿಸಲಾಗಿದೆ. ಪ್ರತಿ ವರ್ಷ ಸದರಿ ತಾಲೂಕಿನಲ್ಲಿ ನಿಲಯ ಸೇರ ಬಯಸುವ ಅರ್ಜಿಗಳು ಸರಾಸರಿ ವರ್ಷಕ್ಕೆ ೫೦೦ ರಷ್ಟು ಬರುತ್ತಿದ್ದು ಸರ್ಕಾರ ಹಿಂದುಳಿದ ತಾಲೂಕಾಗಿರುವ ಹಗರಿಬೊಮ್ಮನಹಳ್ಳಿ ಹೆಚ್ಚುವರಿ ಸೀಟುಗಳನ್ನು ಪ್ರತಿ ವರ್ಷ ಹೆಚ್ಚಿಸಿದಲ್ಲಿ ಹೆಚ್ಚು ಜನ ದಲಿತ ವರ್ಗದ ಜನರಿಗೆ ಅನುಕೂಲವಾಗುತ್ತದೆ.

**ಬಾಧಕಗಳು:** ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಇರುವ ಬಾಧಕಗಳೆಂದರೆ,

೧. ವಿದ್ಯಾರ್ಥಿಗಳ ಆಹಾರಕ್ಕಾಗಿ ನಿಗಧಿಪಡಿಸಿರುವ ರೂ. ೪೦೦.೦೦ ರಲ್ಲಿ ಪ್ರತಿ ದಿನ ಎರಡು ಬಾರಿ ಊಟ ಮತ್ತು ಬೆಳಿಗ್ಗೆ ತಿಂಡಿ ಹಾಗೂ ವಾರದಲ್ಲಿ ೨ ಬಾರಿ ಬಾಳೆಹಣ್ಣು ಮತ್ತು ಮೊಟ್ಟೆಗಳನ್ನು ಹಾಗೂ ವಾರದಲ್ಲಿ ಒಂದು ದಿನ ಸಿಹಿಯನ್ನು ನೀಡಲು ಜೊತೆಗೆ ಗುಣಮಟ್ಟದ ಆಹಾರವನ್ನು ನೀಡಲು ಕಷ್ಟಕರವಾಗಿರುವುದರಿಂದ ಪ್ರತಿ ವಿದ್ಯಾರ್ಥಿಗೆ ಕನಿಷ್ಠ ರೂ. ೬೦೦.೦೦ ಗಳವರೆಗೆ ಹೆಚ್ಚಿಸಿದರೆ ವಿದ್ಯಾರ್ಥಿ ನಿಲಯದ ನಿರ್ವಹಣೆಯಲ್ಲಿ ಸುಧಾರಣೆಯನ್ನು ತರಲು ಸಾಧ್ಯವಾಗುತ್ತದೆ. ಹಾಗೂ ವಿದ್ಯಾರ್ಥಿಗಳಿಗೆ ಆಹಾರಕ್ಕಾಗಿ ಅನುದಾನ ನಿಗಧಿಪಡಿಸುವ ಬದಲು ಮಾರುಕಟ್ಟೆಯ ಧರದ ಏರಿಳಿತಗಳನ್ನು ಅವಲಂಬಿಸಿ ಅವರಿಗೆ ಪೂರ್ಣಪ್ರಮಾಣದ ಪೌಷ್ಠಿಕ ಹಾಗೂ ಜೀವಸತ್ವವಿರುವ ಆಹಾರಗಳನ್ನು ವಯಸ್ಸಿಗೆ ಅನುಗುಣವಾಗಿ ಗ್ರಾಂ ಮೂಲಕ ನೀಡಿದರೆ ವಿದ್ಯಾರ್ಥಿಗಳ ಬೌದ್ಧಿಕ ಬೆಳವಣಿಗೆಗೆ ಅನುಕೂಲವಾಗುತ್ತದೆ. ಇದರಿಂದ ಸರ್ಕಾರಕ್ಕೆ ಅಧಿಕಹೊರೆ ಆದರೂ ಇದು ಕಡ್ಡಾಯವಾಗಿ ಖರ್ಚುಮಾಡಬೇಕಾಗಿರುವುದರಿಂದ ಈ ದೃಷ್ಟಿಯಲ್ಲಿ ಆಯವ್ಯಯವನ್ನು ಲೆಕ್ಕಹಾಕುವ ಅವಶ್ಯಕತೆ ಕಂಡುಬರುವುದಿಲ್ಲ.

೨. ಎರಡು ಜೊತೆ ಸಮವಸ್ತ್ರಗಳನ್ನು ನೀಡಲು ರೂ. ೩೫೦.೦೦ ಗಳು ನಿಗಧಿಯಾಗಿದ್ದು,

ಇದರಲ್ಲಿ ಉತ್ತಮ ಗುಣಮಟ್ಟದ ಬಟ್ಟೆಯನ್ನು ಒದಗಿಸಲು ತೊಂದರೆಯಾಗಿರುತ್ತದೆ. ಈ ಧರವನ್ನು ಕನಿಷ್ಠ ರೂ. ೫೦೦.೦೦ ಗಳಿಗೆ ಏರಿಸಬೇಕಾಗುತ್ತದೆ.

೩. ಅರೆಕಾಲಿಕ ಬೋಧಕರಿಗೆ ನೀಡುತ್ತಿರುವ ಗೌರವಧನ ರೂ. ೫೦೦.೦೦ ಮಾಹೆಯಾನ ತುಂಬಾ ಕಡಿಮೆಯಾಗಿದೆ. ಈ ಕಡಿಮೆ ಗೌರವಧನಕ್ಕೆ ಶಿಕ್ಷಕರು ಬೋಧನೆ ಮಾಡಲು ಬರುತ್ತಿಲ್ಲ. ಇದರಿಂದ ಬಹಳಷ್ಟು ವಿದ್ಯಾರ್ಥಿನಿಲಯಗಳಲ್ಲಿ ಬೋಧಕರಿಲ್ಲದೆ, ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿ ಕುಂಠಿತವಾಗಿದೆ, ಈ ದೆಸೆಯಲ್ಲಿ ಕನಿಷ್ಠ ರೂ. ೧೦೦೦.೦೦ ಗೌರವಧನವನ್ನು ಅರೆಕಾಲಿಕ ಬೋಧಕರಿಗೆ ಹೆಚ್ಚಿಸಿದಲ್ಲಿ ಶೈಕ್ಷಣಿಕ ಕ್ಷೇತ್ರದಲ್ಲಿ ನಿರೀಕ್ಷಿತ ಪ್ರಗತಿಯನ್ನು ಸಾಧಿಸಲು ಸಾಧ್ಯವಿದೆ.

೪. ವಿದ್ಯಾರ್ಥಿ ನಿಲಯದಲ್ಲಿ ವಿದ್ಯಾರ್ಥಿಗಳಗೆ ವೈದ್ಯಕೀಯ ವೆಚ್ಚ ವಾರ್ಷಿಕ ರೂ. ೧೦೦೦.೦೦ ನಿಗಧಿಪಡಿಸಿರುವುದು ತುಂಬಾ ಕಡಿಮೆಯಾಗಿದೆ. ಇದರಿಂದ ವಿದ್ಯಾರ್ಥಿಗಳಿಗೆ ಯಾವುದೇ ರೀತಿಯ ಪರಿಣಾಮಕಾರಿ ವೈದ್ಯಕೀಯ ತಪಾಸಣೆಯನ್ನು ಅಥವಾ ಚಿಕಿತ್ಸೆಯನ್ನು ನೀಡಲು ಸಾಧ್ಯವಾಗುತ್ತಿಲ್ಲ. ಇದನ್ನು ಕನಿಷ್ಠ ಮಾಸಿಕ ರೂ. ೫೦೦.೦೦ ರಂತೆ ವಾರ್ಷಿಕ ಅನುದಾನ ರೂ. ೫೦೦೦.೦೦ ಗಳಿಗೆ ನಿಗಧಿಪಡಿಸಿದಲ್ಲಿ ವಿದ್ಯಾರ್ಥಿಗಳ ಉತ್ತಮ ಆರೋಗ್ಯ ಬೆಳವಣಿಗೆಗೆ ಅನುಕೂಲ ಮಾಡಿಕೊಟ್ಟಂತಾಗುತ್ತದೆ.

೫. ಸರ್ಕಾರವು ಮುಂದೆ ಹೊಸ ವಿದ್ಯಾರ್ಥಿ ನಿಲಯಗಳಿಗೆ ಮಂಜೂರಾತಿ ನೀಡುವುದರ ಬದಲು ಈಗಿರುವ ವಿದ್ಯಾರ್ಥಿ ನಿಲಯಗಳಿಗೆ ಪೂರ್ಣಪ್ರಮಾಣದ ಮೂಲಭೂತ ಸೌಕರ್ಯಗಳನ್ನು ನೀಡಿ ಮಕ್ಕಳ ವಿದ್ಯಾಭ್ಯಾಸಕ್ಕೆ ಉತ್ತಮವಾದ ವಾತಾವರಣವನ್ನು ನಿರ್ಮಿಸಲು ಕ್ರಮಕೈಗೊಂಡಿರುವುದು ನಿಜವಾಗಲು ಶ್ಲಾಘನೀಯ. ಈ ರೀತಿ ತುರ್ತುಕ್ರಮ ಕೈಗೊಂಡಲ್ಲಿ ವಿದ್ಯಾರ್ಥಿಗಳು ಶಿಕ್ಷಣದಲ್ಲಿ ಪ್ರಗತಿಯನ್ನು ಸಾಧಿಸುವುದರ ಜೊತೆಗೆ ಇತರೆ ವಿದ್ಯಾರ್ಥಿಗಳಂತೆ ಸ್ಪರ್ಧಾತ್ಮಕ ಜಗತ್ತಿನಲ್ಲಿ ಭಾಗವಹಿಸಲು ಮನೋಸ್ಥೈರ್ಯವನ್ನು ತುಂಬಿದಂತಾಗುತ್ತದೆ. ಈ ವಿಷಯಕ್ಕೆ ಸಂಬಂಧಪಟ್ಟ ಅನುಷ್ಠಾನ ಅಧಿಕಾರಿಗಳು ಸಹ ಅತಿ ತುರ್ತಾಗಿ ಕ್ರಮಕೈಗೊಳ್ಳಲು ಪ್ರಯತ್ನಿಸುವ ಅಗತ್ಯವಿದೆ.

೬. ಈ ವಿದ್ಯಾರ್ಥಿ ನಿಲಯಗಳಲ್ಲಿ ವ್ಯವಸ್ಥಿತವಾದ ಗ್ರಂಥಾಲಯದ ವ್ಯವಸ್ಥೆ ಇರುವುದಿಲ್ಲ. ಇದರ ಬಗ್ಗೆ ಸರ್ಕಾರ ಆದ್ಯತೆ ನೀಡ ಬೇಕಾಗಿದೆ.

೭. ಬಾಲಕರಿಗೆ ಕ್ಷೌರಕ್ಕಾಗಿ ನಿಗಧಿಪಡಿಸಿದ ಅನುದಾನ ವಾರ್ಷಿಕ ರೂ. ೪೦೦.೦೦ ಗಳು ತುಂಬಾ ಕಡಿಮೆಯಾಗಿದ್ದು, ಈ ಬೆಲೆಗೆ ಯಾವುದೇ ಕ್ಷೌರಿಕ ವಿದ್ಯಾರ್ಥಿಗಳಿಗೆ ಕ್ಷೌರ ಮಾಡಲು ಮುಂದೆ ಬರುತ್ತಿಲ್ಲ. ಇದರಿಂದ ಮತ್ತೊಮ್ಮೆ ವಿದ್ಯಾರ್ಥಿಗಳಲ್ಲಿ ಕೀಳರಿಮೆ ಬೆಳೆಯಲು ಸಾಧ್ಯವಾಗಿದೆ. ಆ ಕಾರಣ ಈ ಅನುದಾನವನ್ನು ಕನಿಷ್ಠ ವಾರ್ಷಿಕ ರೂ. ೧೦೦.೦೦ ಗಳಿಗೆ ಹೆಚ್ಚಿಸಬೇಕಾಗಿದೆ.

**ಸಲಹೆಗಳು**

ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳಿಗೆ ನೀಡುತ್ತಿರುವ ಎಲ್ಲಾ ಸೌಲಭ್ಯಗಳ ಜೊತೆಗೆ ವರ್ಷಕ್ಕೆ ಒಂದು ಬಾರಿ ರಾಜ್ಯದ ವಿವಿಧ ಐತಿಹಾಸಿಕ, ಶೈಕ್ಷಣಿಕ, ಪ್ರೇಕ್ಷಣೀಯ ಪ್ರವಾಸಿ

ಸ್ಥಳಗಳಿಗೆ ಕಡ್ಡಾಯವಾಗಿ ಪ್ರವಾಸ ಕರೆದುಕೊಂಡು ಹೋಗಿ ಆ ಸ್ಥಳದ ಇತಿಹಾಸ, ಅಲ್ಲಿನ ನಿಸರ್ಗ, ಪ್ರಕೃತಿ, ಜಲಪಾತ, ಸಮುದ್ರ, ಅಲ್ಲಿನ ಜನರ ಉಡುಗೆ, ತೊಡುಗೆ, ಆಚಾರ, ಭಾಷೆ, ಸಂಸ್ಕೃತಿ ಇತ್ಯಾದಿಗಳ ಬಗ್ಗೆ ಪರಿಚಯಿಸಿ ವಿದ್ಯಾರ್ಥಿಗಳ ಜ್ಞಾನ ಭಂಡಾರವನ್ನು ಹೆಚ್ಚಿಸಲು ಕ್ರಮ ಕೈಗೊಳ್ಳಬೇಕಾಗಿದೆ.

೪. ರಾಮಕೃಷ್ಣ ಆಶ್ರಮ, ಚೆನ್ನೇಹಳ್ಳಿ ಇತ್ಯಾದಿ ಗೌರವಾನ್ವಿತ ವಿದ್ಯಾಸಂಸ್ಥೆಗಳಲ್ಲಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಪ್ರವೇಶ

ಪರಿಶಿಷ್ಟಜಾತಿಯ ಮಕ್ಕಳು ಉತ್ತಮವಾದ ಪರಿಸರದಲ್ಲಿ ವಿದ್ಯಾಭ್ಯಾಸ ಮಾಡಲು ಅನುಕೂಲವಾಗುವಂತೆ ಮೈಸೂರಿನ ರಾಮಕೃಷ್ಣ ಆಶ್ರಮ, ಜೆ.ಎಸ್.ಎಸ್. ಮತ್ತು ಜನಸೇವಾ ವಿದ್ಯಾ ಕೇಂದ್ರ, ಚೆನ್ನೇಹಳ್ಳಿಯಂತಹ ಪ್ರತಿಷ್ಠಿತ ವಿದ್ಯಾಸಂಸ್ಥೆಗಳಲ್ಲಿ ಪ್ರವೇಶ ನೀಡಲು ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ೨೦೦೦೦೧ ನೇ ಸಾಲಿನಿಂದ ಪ್ರವೇಶ ನೀಡಲಾಗುತ್ತಿದೆ. ಈ ಸಂಸ್ಥೆಗಳಿಗೆ ಪ್ರವೇಶ ಪಡೆಯಲು ಪ್ರತಿ ವರ್ಷ ಏಪ್ರಿಲ್ ತಿಂಗಳಲ್ಲಿ ಸಂಬಂಧ ಪಟ್ಟ ಶಿಕ್ಷಣ ಸಂಸ್ಥೆಯವರು ನಡೆಸುವ ಲಿಖಿತ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. ಇದರ ಜೊತೆಗೆ ೭ ನೇ ತರಗತಿಯಲ್ಲಿ ಪ್ರಥಮ ಬಾರಿಗೆ ಪ್ರಥಮ ದರ್ಜೆಯಲ್ಲಿ ಪಾಸಾಗಿದ್ದ ಬುಡಕಟ್ಟು ವಿದ್ಯಾರ್ಥಿಗಳನ್ನು ೮ ನೇ ತರಗತಿಗೆ ಸೇರಿಸುವುದಕ್ಕೆ ಪ್ರವೇಶ ಅವಕಾಶವನ್ನು ನೀಡಲಾಗುತ್ತಿದೆ. ಈ ಸಂಸ್ಥೆಯಲ್ಲಿ ವಿದ್ಯಾಭ್ಯಾಸ ಮಾಡುವ ಎಲ್ಲಾ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ತಗಲುವ ಎಲ್ಲಾ ಖರ್ಚುಗಳನ್ನು ಪರಿಶಿಷ್ಟ ವರ್ಗದ ಕಲ್ಯಾಣ ಇಲಾಖೆಯೇ ಭರಿಸುತ್ತದೆ.

ಸದರಿ ತಾಲೂಕಿನಲ್ಲಿ ರಾಮಕೃಷ್ಣಾಶ್ರಮದಲ್ಲಿ ಇದುವರೆಗೆ ೪ ವಿದ್ಯಾರ್ಥಿಗಳು, ಹಾಗೂ ಚೆನ್ನೇಹಳ್ಳಿ ಜನಸೇವಾ ವಿದ್ಯಾಕೇಂದ್ರದಲ್ಲಿ ೭ ಜನ ವಿದ್ಯಾರ್ಥಿಗಳು ಇಲಾಖೆಯಿಂದ ಪ್ರಾಯೋಜಿತಗೊಂಡು ಉತ್ತಮವಾಗಿ ಕಲಿಯುತ್ತಿದ್ದಾರೆ.

೫. ಅನುದಾನಿತ ವಿದ್ಯಾರ್ಥಿನಿಲಯಗಳಿಗೆ ಧನಸಹಾಯ

ಬಡಮಕ್ಕಳಿಗೆ ವಿದ್ಯಾರ್ಥಿ ನಿಲಯಗಳನ್ನು ನಡೆಸುವ ಸ್ವಯಂ ಸೇವಾ ಸಂಸ್ಥೆಗಳಿಗೆ, ಉತ್ತೇಜನ ನೀಡಲು ಖಾಸಗಿ ವಿದ್ಯಾರ್ಥಿ ನಿಲಯಗಳಿಗೂ ಧನಸಹಾಯ ನೀಡಲಾಗುತ್ತಿದೆ. ಈ ಖಾಸಗಿ ಸಂಸ್ಥೆಗಳು ಸರ್ಕಾರದಿಂದ ಮಾನ್ಯತೆ ಪಡೆದು ನಡೆಸುವ ವಿದ್ಯಾರ್ಥಿನಿಲಯಗಳಾಗಿರಬೇಕು. ಈ ವಿದ್ಯಾರ್ಥಿನಿಲಯಗಳಲ್ಲಿ ೫ ರಿಂದ ೧೦ ನೇ ತರಗತಿಯಲ್ಲಿ ಓದುತ್ತಿರುವ ವಿದ್ಯಾರ್ಥಿಗಳಿಗೆ ಊಟ ಮತ್ತು ವಸತಿ ಕಲ್ಪಿಸುವುದು. ಇದರಿಂದ ಸರ್ಕಾರಿ ವಿದ್ಯಾರ್ಥಿ ನಿಲಯಕ್ಕೆ ಇರುವ ಬೇಡಿಕೆಯಲ್ಲಿ ಸ್ವಲ್ಪ ಪ್ರಮಾಣ ಕಡಿಮೆಯಾದಂತಾಗುತ್ತದೆ. ಈ ಯೋಜನೆಯಡಿ ರಾಜ್ಯದಲ್ಲಿ ಒಟ್ಟು ೨೫೫ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು ೮೫ ಮೆಟ್ರಿಕ್ ನಂತರದ ಅನುದಾನಿತ ವಿದ್ಯಾರ್ಥಿ ನಿಲಯಗಳಿವೆ. ಇದರಲ್ಲಿ ೩೧೩ ಬಾಲಕರು ಹಾಗೂ ೨೭ ಬಾಲಕಿಯರ ವಿದ್ಯಾರ್ಥಿ ನಿಲಯಗಳಾಗಿವೆ. ಈ ವಿದ್ಯಾರ್ಥಿನಿಲಯದಲ್ಲಿ ಪ್ರತಿ ವಿದ್ಯಾರ್ಥಿಗೆ ಮಾಸಿಕ ರೂ ೩೫೦.೦೦ ಗಳನ್ನು ಆಹಾರಕ್ಕಾಗಿ ಖರ್ಚು ಮಾಡಲಾಗುತ್ತಿದೆ. ಅನುದಾನಿತ ವಿದ್ಯಾರ್ಥಿನಿಲಯಗಳ ಕಟ್ಟಡ ನಿರ್ಮಾಣಕ್ಕೂ ಸಹ ಅನುದಾನವನ್ನು ನೀಡಲಾಗುತ್ತಿದ್ದು, ಹಗರಿಬೊಮ್ಮನಹಳ್ಳಿಯಲ್ಲಿ ಶ್ರೀ ಚಂದ್ರಮೌಳೇಶ್ವರ ನಿಲಯವು ಅನುದಾನಿತ

ವಿದ್ಯಾರ್ಥಿ ನಿಲಯವಾಗಿದ್ದು ಹಂಪಾಪಟ್ಟಣ ಗ್ರಾಮದಲ್ಲಿರುವ ಈ ವಿದ್ಯಾರ್ಥಿ ನಿಲಯದಲ್ಲಿ ೨೫ ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆಯುತ್ತಿದ್ದಾರೆ.

**ಸಲಹೆ**

ಈ ಅನುದಾನಿತ ವಿದ್ಯಾರ್ಥಿನಿಲಯಗಳಲ್ಲಿ ದುರುಪಯೋಗಕ್ಕೆ ತುಂಬಾ ಅವಕಾಶವಿರುವುದರಿಂದ ಈ ಸಂಸ್ಥೆಗಳನ್ನು ಕಾಲಕಾಲಕ್ಕೆ ತಪಾಸಣೆ ನಡೆಸಿ, ನಿಯಮಾನುಸಾರ ವಿದ್ಯಾರ್ಥಿಗಳನ್ನು ಆಯ್ಕೆ ಸಮಿತಿಯ ಮೂಲಕ ಆಯ್ಕೆ ಮಾಡಬೇಕು. ವಿದ್ಯಾರ್ಥಿನಿಲಯಗಳನ್ನು ಸಮರ್ಪಕವಾಗಿ ನಡೆಸುವಂತೆ ಸಂಬಂಧಪಟ್ಟ ಸಂಸ್ಥೆಗಳಿಗೆ ಎಚ್ಚರಿಕೆ ನೀಡಬೇಕು. ಇವರ ಕಾರ್ಯನಿರ್ವಹಣೆಯ ಬಗ್ಗೆ ಉಸ್ತುವಾರಿ ಇಟ್ಟಲ್ಲಿ ಮಾತ್ರ ಈ ಸಂಸ್ಥೆಗಳು ನಿಗದಿತ ಮಟ್ಟದಲ್ಲಿ ಕೆಲಸ ನಿರ್ವಹಿಸಲು ಸಾಧ್ಯಾವಗುತ್ತದೆ. ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲೂಕಿನಲ್ಲಿ ಒಂದು ಅನುದಾನಿತ ವಿದ್ಯಾರ್ಥಿನಿಲಯವಿದೆ. ಅದನ್ನು ಸಮೀಕ್ಷೆಯ ಕಾಲದಲ್ಲಿ ಭೇಟಿ ಕೊಟ್ಟು ಪರಿಶೀಲಿಸಿದಾಗ ಅದರ ಕಾರ್ಯನಿರ್ವಹಣೆ ತೃಪ್ತಿಕರವಾಗಿರಲಿಲ್ಲ. ಇದರ ಬಗ್ಗೆ ಸಂಬಂಧಪಟ್ಟ ಅನುಷ್ಠಾನಾಧಿಕಾರಿಗಳಾದ ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಗಳು, ಜಿಲ್ಲಾಪಂಚಾಯತ್, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ತನ್ಮೂಲಕ ಸಮಾಜ ಕಲ್ಯಾಣ ಅಧಿಕಾರಿಗಳು ಕ್ರಮ ಕೈಗೊಳ್ಳಬೇಕಾಗಿದೆ.

**೭. ಮುರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆಗಳು**

ಮುರಾರ್ಜಿ ದೇಸಾಯಿ ಮಾದರಿ ಪ್ರತಿ ಶಾಲೆಗಳ ಹಿನ್ನೆಲೆ ಹಾಗೂ ಉದ್ದೇಶ, ಪ್ರತಿಭಾವಂತ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗ ಹಾಗೂ ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ಉತ್ತಮ ಶಿಕ್ಷಣವನ್ನು ನೀಡುವುದು ಮತ್ತು ಓದಲು ಉತ್ತಮವಾದ ವಾತಾವರಣವನ್ನು ನಿರ್ಮಿಸುವುದು. ಆ ಕಾರಣದಿಂದ ಈ ಯೋಜನೆಯನ್ನು ಪ್ರಾರಂಭಿಸಿ ವಿದ್ಯಾಥಿ, ವಿದ್ಯಾರ್ಥಿನಿಯರ ಪ್ರವೇಶದ ಅನುಪಾತ ೫೦ : ೫೦ ಆಗಿರುತ್ತದೆ. ಈ ಯೋಜನೆಯನ್ನು ರಾಜ್ಯ ಸರ್ಕಾರವು ೧೯೯೬-೯೭ ನೇ ಸಾಲಿನಲ್ಲಿ ಪ್ರಾರಂಭಿಸಿ ಉತ್ತಮವಾದ ಶಿಕ್ಷಣವನ್ನು ನೀಡಲು ಅವಕಾಶ ಮಾಡಿದೆ. ಇಲ್ಲಿನ ವಸತಿ ಶಾಲೆಗಳಿಗೆ ವಿದ್ಯಾರ್ಥಿಗಳನ್ನು ಪೂರ್ವಭಾವಿ ಪರೀಕ್ಷೆಯನ್ನು ಜಿಲ್ಲಾ ಮಟ್ಟದಲ್ಲಿ ನಡೆಸಿ, ಸದರಿ ಪರೀಕ್ಷೆಯಲ್ಲಿ ಅತಿ ಹೆಚ್ಚು ಅಂಕಗಳಿಸಿದ ವಿದ್ಯಾರ್ಥಿಗಳನ್ನು, ಮೀಸಲಾತಿ ಅನ್ವಯ ದಾಖಲು ಮಾಡಿಕೊಳ್ಳಲಾಗುತ್ತದೆ. ಈ ವಸತಿ ಶಾಲೆಯ ನಿರ್ವಹಣೆಗಾಗಿ ಒಂದು ಬೋರ್ಡ ಆಫ್ ಗವರ್ನರ್ ಸಮಿತಿಯನ್ನು ರಚಿಸಲಾಗಿದೆ. ಅದರ ವಿವರ ಈ ಕೆಳಗಿನಂತಿರುತ್ತದೆ.

೧. ಜಿಲ್ಲಾಧಿಕಾರಿಗಳು ಅಧ್ಯಕ್ಷರು

೨. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾಪಂಚಾಯತ್ ಸದಸ್ಯರು

೩. ಸಂಬಂಧಪಟ್ಟ ಉಪ ವಿಭಾಗಾಧಿಕಾರಿಗಳು ಸದಸ್ಯರು

೪. ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಇಲಾಖೆ ಸದಸ್ಯರು

೫. ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಸದಸ್ಯ ಕಾರ್ಯದರ್ಶಿಗಳು

ಈ ವಸತಿ ಶಾಲೆಯಲ್ಲಿ ಇರುವ ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣದ ಜೊತೆಗೆ ಉಚಿತ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಪ್ರತಿಯೊಬ್ಬ ವಿದ್ಯಾರ್ಥಿಯು ಆಹಾರಕ್ಕಾಗಿ ಮಾಸಿಕ ರೂ.೫೦೦.೦೦ ಗಳನ್ನು ವೆಚ್ಚ ಮಾಡಲಾಗುತ್ತಿದೆ. ಉಚಿತ ಪಠ್ಯ ಪುಸ್ತಕದ ಜೊತೆಗೆ ರೂ. ೫೦೦.೦೦ ರಲ್ಲಿ ೨ ಜೊತೆ ಟೆರಿಕಾಟ್ ಸಮವಸ್ತ್ರಗಳನ್ನು ನೀಡಲಾಗುತ್ತಿದೆ. ಈ ವಸತಿ ಶಾಲೆಗಳಲ್ಲಿ ಶೇ. ೭೫ ರಷ್ಟು ಪರಿಶಿಷ್ಟ ಜಾತಿ, ಶೇ. ೨೫ ರಷ್ಟು ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗದವಿದ್ಯಾರ್ಥಿಗಳಿ ಪ್ರವೇಶದಲ್ಲಿ ಮೀಸಲಾತಿಯನ್ನು ಕಾಯ್ದಿರಿಸಲಾಗಿದೆ. ಕರ್ನಾಟಕ ರಾಜ್ಯದಲ್ಲಿ ಸುಮಾರು ४೭ ಈ ರೀತಿಯ ಶಾಲೆಗಳು ನಡೆಯುತ್ತಿದ್ದು, ಇದರಲ್ಲಿ ೮೧೦೦ ವಿದ್ಯಾರ್ಥಿಗಳು ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ. ಹಗರಿಬೊಮ್ಮನಹಳ್ಳಿ ತಾಲೂಕಿನ ವಲ್ಲಭಾಪುರ ಗ್ರಾಮದಲ್ಲಿ ವಸತಿ ಶಾಲೆ ಇರುತ್ತದೆ. ಇಲ್ಲಿ ೨೫೦ ವಿದ್ಯಾರ್ಥಿಗಳು ಸರ್ಕಾರ ನೀಡುತ್ತಿರುವ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿದ್ದಾರೆ.

**ಸಲಹೆ**

ಇಂತಹ ಉತ್ತಮ ಮಾದರಿ ವಸತಿ ಶಾಲೆಗಳಲ್ಲಿ ಪೂರ್ಣ ಪ್ರಮಾಣದ ಬೋಧಕರು ನೇಮಕಾತಿಯಾಗದೆ ಇರುವುದು ದುರಾದೃಷ್ಟಕರ. ಈ ದೆಸೆಯಲ್ಲಿ ಸರ್ಕಾರ ಪೂರ್ಣ ಪ್ರಮಾಣದ ಬೋಧಕ ವರ್ಗ ಹಾಗೂ ಸಿಬ್ಬಂದಿಯವರನ್ನು ನೇಮಕ ಮಾಡಿದರೆ ಈ ಸಂಸ್ಥೆಗಳು ಹೆಸರಿಗೆ ತಕ್ಕಂತೆ ಮಾದರಿ ಸಂಸ್ಥೆಗಳಾಗುವುದರಲ್ಲಿ ಯಾವುದೇ ಸಂಶಯವಿರುವುದಿಲ್ಲ.

**೭. ಕಾಲೇಜು ವಿದ್ಯಾರ್ಥಿಗಳಿಗಾಗಿ ಸರ್ಕಾರಿ ವಿದ್ಯಾರ್ಥಿನಿಲಯಗಳ ಪ್ರಾರಂಭ**

ಗ್ರಾಮಾಂತರ ಪ್ರದೇಶಗಳಿಂದ ವಿವಿಧ ಕಾಲೇಜುಗಳಿಗೆ ವ್ಯಾಸಂಗ ಮಾಡಲು ಬರುವ ಪರಿಶಿಷ್ಟ ಜಾತಿಗೆ ಸೇರಿದ ವಿದ್ಯಾರ್ಥಿಗಳಿಗೆ ಅವರ ಶಿಕ್ಷಣವನ್ನು ಮುಂದುವರಿಸಲು ಅನುಕೂಲವಾಗುವಂತೆ ಕಾಲೇಜು ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಿ ಉಚಿತ ಊಟ ಮತ್ತು ವಸತಿಯನ್ನು ಒದಗಿಸಲಾಗುತ್ತಿದೆ. ಈ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಿ ಉಚಿತ ಊಟ ಮತ್ತು ವಸತಿಯನ್ನು ಒದಗಿಸಲಾಗುತ್ತಿದೆ. ಈ ವಿದ್ಯಾರ್ಥಿನಿಲಯಗಳ ನಿರ್ವಹಣೆಗಾಗಿ ನಿಲಯದ ಮೇಲ್ವಿಚಾರಕರು, ಇಬ್ಬರು ಅಡಿಗೆಯವರು, ಒಬ್ಬ ಅಡಿಗೆ ಸಹಾಯಕ ನೇಮಕವಾಗಿದ್ದು ಕಾರ್ಯನಿರ್ವಹಿಸುತ್ತಿರುತ್ತಾರೆ.

ಇವರ ಉದ್ದೇಶ ಬಡತನ ಉನ್ನತ ಶಿಕ್ಷಣಕ್ಕೆ ಅಡ್ಡಿಬಾರದಂತೆ ಮಾಡುವ ಸಲುವಾಗಿ ಈ ಕಾರ್ಯಕ್ರಮವನ್ನು ರೂಪಿಸಲಾಗಿದೆ. ಇಂತಹ ವಿದ್ಯಾರ್ಥಿನಿಲಯಗಳಲ್ಲಿ ಪಿ.ಯು.ಸಿ. ಯಿಂದ ಹಿಡಿದು ಡಿಪ್ಲೊಮೋ, ಪದವಿ ತರಗತಿಗಳಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ಅವಕಾಶ ನೀಡಲಾಗುತ್ತಿದೆ. ಗ್ರಾಮಾಂತರ ಪ್ರದೇಶದಿಂದ ಬರುವಂತಹ ಬಡ ವಿದ್ಯಾರ್ಥಿಗಳಿಗೆ ಆದ್ಯತೆ ನೀಡಲಾಗುತ್ತಿದೆ. ಈ ವಿದ್ಯಾರ್ಥಿ ನಿಲಯಕ್ಕೆ ಸೇರಬಯಸುವ ವಿದ್ಯಾರ್ಥಿಗಳು ಅಂಗೀಕೃತ ವಿದ್ಯಾಸಂಸ್ಥೆಗಳಲ್ಲಿ ಓದುತ್ತಿರಬೇಕು. ಈ ವಿದ್ಯಾರ್ಥಿನಿಲಯಕ್ಕೆ ವಿದ್ಯಾರ್ಥಿಗಳನ್ನು ಆಯ್ಕೆ ಸಮಿತಿಯ ಮೂಲಕ ಆಯ್ಕೆ ಮಾಡಿಕೊಳ್ಳಲಾಗುತ್ತಿದೆ. ಪ್ರತಿಯೊಬ್ಬ ವಿದ್ಯಾರ್ಥಿಗೆ ಭೋಜನ ವೆಚ್ಚಕ್ಕಾಗಿ

ಪ್ರತಿ ತಿಂಗಳಿಗೆ ಭಾರತ ಸರ್ಕಾರದ ವಿದ್ಯಾರ್ಥಿ ವೇತನ ಹಾಗೂ ಇ.ಬಿ.ಎಲ್. ವೆಚ್ಚಗಳು ಸೇರಿ ತಲಾ ರೂ. ೪೫೦.೦೦ ಮೀರದಂತೆ ಭರಿಸಲಾಗುವುದು. ಇದರ ಜೊತೆಗೆ ಗ್ರಂಥಾಲಯದ ಸೌಲಭ್ಯ, ಆಟದ ಸಾಮಗ್ರಿಗಳು, ಟಿ.ವಿ. ಇತ್ಯಾದಿಗಳನ್ನು ಪೂರೈಸಲಾಗುತ್ತಿದೆ. ಇದರ ಜೊತೆಗೆ ಬಾಡಿಗೆ ಕಟ್ಟಡದಲ್ಲಿ ವಿದ್ಯಾರ್ಥಿ ನಿಲಯಗಳು ನಡೆಯುತ್ತಿದ್ದರೆ, ಅದರ ಬಾಡಿಗೆಯನ್ನು ಸರ್ಕಾರವೇ ಭರಿಸುತ್ತಿದೆ. ಜೊತೆಗೆ ಅವಶ್ಯಕವಾಗಿ ಬೇಕಾಗುವ ಪೀಠೋಪಕರಣಗಳನ್ನು ಒದಗಿಸಾಗಿದೆ.

ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ೧ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯವಿದ್ದು ೫೦ ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆದುಕೊಳ್ಳುತ್ತಿದ್ದಾರೆ.

ಈ ವಿದ್ಯಾರ್ಥಿನಿಲಯಕ್ಕೆ ಸ್ವಂತ ಕಟ್ಟಡವಿದ್ದರೂ ಇನ್ನೂ ಅನೇಕ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಬೇಕಾಗಿದೆ.

**೮. ವಿದ್ಯಾರ್ಥಿ ನಿಲಯಗಳ ಬಲವರ್ಧನೆ**

ಈ ಕಾರ್ಯಕ್ರಮದಡಿಯಲ್ಲಿ ಈಗಾಗಲೇ ಪ್ರಾರಂಭವಾಗಿರುವ ವಿದ್ಯಾರ್ಥಿನಿಲಯಗಳಿಗೆ ಹಾಸಿಗೆ, ಹೊದಿಕೆ, ಪೀಠೋಪಕರಣ, ಸೋಲಾರ್ ಹೀಟರ್, ಸೋಲಾರ್ ಲೈಟ್, ಟಿ.ವಿ. ಹಾಗೂ ಇತರೆ ಉಪಯುಕ್ತ ಸಾಮಗ್ರಿಗಳನ್ನು ಒದಗಿಸುವ ಕಾರ್ಯಕ್ರಮದಿಂದ ವಿದ್ಯಾರ್ಥಿನಿಲಯಗಳ ಬಲವರ್ಧನೆಗೆ ಶ್ರಮಿಸಲಾಗುತ್ತಿದೆ. ಇದು ರಾಜ್ಯದ ಕಾರ್ಯಕ್ರಮವಾಗಿದ್ದು, ಅನುದಾನ ಪೂರ್ಣ ರಾಜ್ಯದ್ದಾಗಿರುತ್ತದೆ. ಈ ಕಾರ್ಯಕ್ರಮದಡಿಯಲ್ಲಿ ಈಗಾಗಲೇ ಪ್ರಾರಂಭಿಸಲಾದ ವಿದ್ಯಾರ್ಥಿನಿಲಯದಲ್ಲಿ ಕೊರತೆ ಇರುವ ಹಾಸಿಗೆ, ಹೊದಿಕೆ, ಪೀಠೋಪಕರಣಗಳು, ಪಾತ್ರೆಗಳು ಇತ್ಯಾದಿಗಳನ್ನು ಖರೀದಿಸಲು ಅವಕಾಶ ಕಲ್ಪಿಸಲಾಗಿದೆ.

**ಬಾಧಕಗಳು**

ಈ ಯೋಜನೆಯನ್ನು ಅನುಷ್ಠಾನಗೊಳಿಸುವಾಗ ಸ್ಥಳೀಯ ವಾತಾವರಣಕ್ಕೆ ಅನುಗುಣವಾಗಿ ಹೆಚ್ಚಿನ ಆದ್ಯತೆ ನೀಡಬೇಕಾಗುತ್ತದೆ. ಬಳ್ಳಾರಿಯಲ್ಲಿ ಬಿಸಿಲಿನ ತಾಪಕ್ಕೆ ಕೊರತೆಯಿಲ್ಲ. ಇಲ್ಲಿ ಸೋಲಾರ್ ಹೀಟರ್ ಅಳವಡಿಸುವುದರಲ್ಲಿ ಪ್ರಯೋಜನವಿಲ್ಲ. ಅದೇ ರೀತಿ ಮಲೆನಾಡು ಪ್ರದೇಶಗಳಲ್ಲಿ ಬಿಸಿಲಿನ ತಾಪ ಕಡಿಮೆ ಇದ್ದು, ಅಲ್ಲಿ ವಿದ್ಯಾರ್ಥಿಗಳಿಗೆ ಹೆಚ್ಚಿನ ಬಿಸಿನೀರಿನ ಅವಶ್ಯಕತೆ ಇರುವುದರಿಂದ ಅಲ್ಲಿ ಸೋಲಾರ್ ವಾಟರ್ ಹೀಟರ್ ಅಳವಡಿಸುವುದರ ಬದಲು ವಿದ್ಯುತ್ ಗೀಜರ್‌ಗಳನ್ನು ಅಳವಡಿಸಿ ಸೌಲಭ್ಯಗಳನ್ನು ನೀಡಬೇಕಾಗಿದೆ. ಈ ಯೋಜನೆಯನ್ನು ಎಲ್ಲಾ ಜಿಲ್ಲೆಗಳಲ್ಲಿಯೂ ಏಕರೂಪದಲ್ಲಿ ಅನುಷ್ಠಾನಗೊಳಿಸಿದರೆ ಉದ್ದೇಶ ಈಡೇರುವುದಿಲ್ಲ.

**೯. ನವೋದಯ ಶಾಲೆ**

ರಾಜ್ಯದಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ಮಕ್ಕಳಿಗಾಗಿ ನಾಲ್ಕು ನವೋದಯ ಶಾಲೆಗಳನ್ನು ಆರಂಭಿಸಲಾಗಿದೆ. ಬೆಂಗಳೂರು ಜಿಲ್ಲೆಯ ಚನ್ನಪಟ್ಟಣ, ದಕ್ಷಿಣ ಕನ್ನಡ ಜಿಲ್ಲೆಯ ಮುಂಡಾಜೆ, ಬೆಳಗಾಂ ಜಿಲ್ಲೆಯ ಬೈಲಹೊಂಗಲ ಹಾಗು ರಾಯಚೂರು ಜಿಲ್ಲೆಗಳಲ್ಲಿ ಈ ಶಾಲೆಗಳು ಸ್ಥಾಪಿತವಾಗಿವೆ.

ಅರ್ಹತೆ ಈ ನವೋದಯ ಶಾಲೆಗಳಲ್ಲಿ ಪ್ರವೇಶ ಪಡೆಯಲು ಪ್ರತಿವರ್ಷ ಏಪ್ರಿಲ್‌ನಲ್ಲಿ ನಡೆಸುವ ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣರಾಗಿಬೇಕು. ೫ ನೇ ತರಗತಿಗೆ ಸೇರಬಯಸುವ ವಿದ್ಯಾರ್ಥಿಗಳಿಗೆ ಮಾತ್ರ ಪ್ರವೇಶ ನೀಡಲಾಗುವುದು. ಇವರು ೧೦ ನೇ ತರಗತಿಯವರೆಗೆ ಇಲ್ಲಿ ವಿದ್ಯಾಭ್ಯಾಸ ಮಾಡಬಹುದು. ಪರಿಶಿಷ್ಟ ಜಾತಿಯ ಶೇ ೭೫ ರಷ್ಟು ವಿದ್ಯಾರ್ಥಿಗಳು ಹಾಗು ಶೇ ೨೫ ರಷ್ಟು ಪರಿಶಿಷ್ಟ ಪಂಗಡ ಹಾಗು ಇತರೆ ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಲಾಗುವುದು.

**ಸೌಲಭ್ಯಗಳು**

೧. ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ಉಚಿತವಾಗಿ ಊಟ ಹಾಗು ವಸತಿ ಸೌಲಭ್ಯ ದೊರೆಯುವುದು.

೨. ಊಟದ ಖರ್ಚಿಗಾಗಿ ಪ್ರತಿ ವಿದ್ಯಾರ್ಥಿಗೆ ೫೦೦ ರೂಪಾಯಿಗಳ ದರದಲ್ಲಿ ನಿಗದಿತ ಸಮತೋಲನ ಆಹಾರವನ್ನು ೧೦ ತಿಂಗಳು ನೀಡಲಾಗುವುದು.

೩. ವರ್ಷವೊಂದಕ್ಕೆ ೮೦೦ ರೂಪಾಯಿ ದರದಲ್ಲಿ ಪ್ರತಿ ವಿದ್ಯಾರ್ಥಿ ೫ ಜೊತೆ ಸಮವಸ್ತ್ರ, ೨ ಕ್ಯಾನ್ವಾಸ್ ಬೂಟು, ಕಾಲು ಚೀಲ, ಎರಡು ಜೊತೆ ಚಪ್ಪಲಿ ಹಾಗು ಸ್ವೆಟರ್‌ನೊಂದಿಗೆ ೬೦೦ ರೂ. ದರದಲ್ಲಿ ಹಾಸಿಗೆ, ಹೊದಿಕೆಗಳನ್ನು ನೀಡಲಾಗುವುದು.

೪. ಪ್ರತಿ ವಿದ್ಯಾರ್ಥಿಗೂ ತಿಂಗಳಿಗೆ ೧೦೦ ರೂಪಾಯಿಗಳ ವೆಚ್ಚದಲ್ಲಿ ಎಣ್ಣೆ. ಸೋಪು. ಟೂತ್‌ಪೇಸ್ಟ್, ಕ್ಷೌರ ಇತ್ಯಾದಿಗಳ ಖರ್ಚಿಗಾಗಿ ಒದಗಿಸಲಾಗುತ್ತದೆ.

೫. ಪ್ರತಿ ವಿದ್ಯಾರ್ಥಿಗೆ ವಾರ್ಷಿಕ ರೂ. ೧೫೦ ರ ವೆಚ್ಚದಲ್ಲಿ ವೈದ್ಯಕೀಯ ಸೇವೆ ದೊರೆಯುವುದು.

೬. ಊಟ, ಮೇಜು, ಕುರ್ಚಿ, ವಾಚನಾಲಯದ ಪುಸ್ತಕ ಪ್ರಯೋಗಾಲಯ ಉಪಕರಣ, ಆಟದ ವಸ್ತುಗಳನ್ನು ಸಹ ನೀಡಲಾಗುತ್ತದೆ.

**೧೦ ಶಿಕ್ಷಣಕ್ಕೆ ಪ್ರೋತ್ಸಾಹವಾಗಿ ೧ ನೇ ತರಗತಿಯಿಂದ ಸ್ನಾತಕೋತ್ತರ ಪದವಿಯವರೆಗೂ ವಿವಿಧ ರೀತಿಯ ವಿದ್ಯಾರ್ಥಿ ವೇತನ ವಿತರಣೆ**

**೧. ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ ನೀಡಿಕೆ**

ಈ ಯೋಜನೆಯಲ್ಲಿ ಮೆಟ್ರಿಕ್ ಪೂರ್ವ ೧ ರಿಂದ ೧೦ ನೇ ತರಗತಿಯಲ್ಲಿ ಓದುತ್ತಿರುವ ಹಾಗೂ ಸರ್ಕಾರಿ ಅಥವಾ ಅನುದಾನಿತ ನಿಲಯಗಳಲ್ಲಿ ಸೌಲಭ್ಯಪಡೆಯದ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ಈ ವಿದ್ಯಾರ್ಥಿವೇತನವನ್ನು ನೀಡಲಾಗುತ್ತಿದೆ. ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳು ಮಧ್ಯದಲ್ಲಿ ಶಾಲೆ ಬಿಡುವುದನ್ನು ತಪ್ಪಿಸಲು ಹಾಗೂ ಪೋಷಕರು ಅವರ ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಪ್ರೋತ್ಸಾಹಿಸುವ ಉದ್ದೇಶದಿಂದ ಈ ವಿದ್ಯಾರ್ಥಿ ವೇತನವನ್ನು ನೀಡಲಾಗುತ್ತಿದೆ.

ವಾರ್ಷಿಕ ೧ ರಿಂದ ೭ ನೇ ತರಗತಿಯಲ್ಲಿ ಓದುತ್ತಿರುವ ವಿದ್ಯಾರ್ಥಿಗಳಿಗೆ ರೂ ೭೫.೦೦ ಹಾಗೂ ೮ ರಿಂದ ೧೦ ನೇ ತರಗತಿಯ ವಿದ್ಯಾರ್ಥಿಗಳಿಗೆ ವಾರ್ಷಿಕ ರೂ.

೧೦೦.೦೦. ಮೊದಲ ಸಲ ಪಾಸಾದ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳು ಈ ವಿದ್ಯಾರ್ಥಿ ವೇತನವನ್ನು ಪಡೆಯಲು ಅರ್ಹರಿರುತ್ತಾರೆ. ಶಿಕ್ಷಣ ಸಂಸ್ಥೆಯ ಮುಖ್ಯಸ್ಥರಿಂದ ವಿದ್ಯಾರ್ಥಿಗಳ ಅರ್ಜಿಪಟ್ಟಿಯನ್ನು ಪಡೆದು ತಾಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಈ ವಿದ್ಯಾರ್ಥಿವೇತನವನ್ನು ಮಂಜೂರು ಮಾಡಿ ಚೆಕ್ ಮೂಲಕ ಸಂಬಂಧಪಟ್ಟ ವಿದ್ಯಾಸಂಸ್ಥೆಯ ಮುಖ್ಯೋಪಾಧ್ಯಾಯರಿಗೆ ಕಳುಹಿಸಿ ನಂತರ ವಿತರಣೆ ಮಾಡಲಾಗುತ್ತದೆ.

**ಬಾಧಕಗಳು**

ಈ ಯೋಜನೆ ಅಡಿಯಲ್ಲಿ ವಿದ್ಯಾರ್ಥಿಗಳಿಗೆ ನೀಡುತ್ತಿರುವ ರೂ. ೭೫.೦೦ ಹಾಗೂ ರೂ. ೧೦೦.೦೦ ಬಹಳ ಕಡಿಮೆಯಾಗಿದ್ದು ಇದನ್ನು ಪಡೆಯಲು ವಿದ್ಯಾರ್ಥಿಗಳು ತಹಶೀಲ್ದಾರರ ಕಛೇರಿಗೆ ಜಾತಿ ಪ್ರಮಾಣ ಪಡೆಯಲು ಓಡಾಡುವ ಖರ್ಚು ವಿದ್ಯಾರ್ಥಿ ವೇತನಕ್ಕಿಂತ ಹೆಚ್ಚಾಗುವ ಪ್ರಯುಕ್ತ ಬಹಳಷ್ಟು ವಿದ್ಯಾರ್ಥಿಗಳು ಈ ವಿದ್ಯಾರ್ಥಿವೇತನವನ್ನು ಪಡೆಯಲು ಅರ್ಜಿ ಸಲ್ಲಿಸುತ್ತಿಲ್ಲ. ಹಾಗೂ 'ಈ ಯೋಜನೆಯಡಿ ಸರ್ಕಾರವು ಸಹ ಬೇಡಿಕೆಗೆ ಅನುಗುಣವಾಗಿ ಅನುದಾನವನ್ನು ಬಿಡುಗಡೆ ಮಾಡುತ್ತಿಲ್ಲ. ಆ ಕಾರಣ ಈ ಯೋಜನೆಯು ಅನುಷ್ಠಾನ ಅಷ್ಟು ಪರಿಣಾಮಕಾರಿಯಾಗದೇ ದುರುಪಯೋಗಕ್ಕೆ ದಾರಿಯಾಗಿದೆ.

**ಸಲಹೆಗಳು**

ಈ ಯೋಜನೆಯು ತುಂಬಾ ಒಳ್ಳೆಯ ಯೋಜನೆಯಾಗಿದ್ದು ಈಗ ನೀಡುತ್ತಿರುವ ರೂ. ೭೫.೦೦ ಮತ್ತು ರೂ. ೧೦೦.೦೦ರ ಬದಲಾಗಿ ರೂ. ೨೫೦.೦೦ ಹಾಗೂ ೫೦೦.೦೦ ರೂಗಳಿಗೆ ಹೆಚ್ಚಿಸುವ ಕ್ರಮ ಕೈಗೊಳ್ಳಬೇಕಾಗುತ್ತದೆ. ಹಾಗೂ ಈ ರೀತಿಯ ವಿದ್ಯಾರ್ಥಿ ವೇತನದ ವಿತರಣೆಯನ್ನು ಪರಿಶೀಲಿಸಲು ತಾಲೂಕು ಮಟ್ಟದಲ್ಲಿ ಅಧಿಕಾರಿಗಳನ್ನು ಒಳಗೊಂಡ ತಂಡಗಳನ್ನು ರಚಿಸಿ ತಪಾಸಣೆ ನಡೆಸುತ್ತಿದ್ದರೆ ದುರುಪಯೋಗ ತಡೆಗಟ್ಟುವುದರಿಂದ ಪರಿಣಾಮಕಾರಿಯಾಗಿ ವಿದ್ಯಾರ್ಥಿವೇತನವು ವಿತರಣೆಯಾಗುವ ಸಾಧ್ಯತೆ ಇದೆ.

**೨. ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳಿಗೆ ನಗದು ಬಹುಮಾನ**

ಈ ಯೋಜನೆಯಲ್ಲಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಸ್ಪರ್ಧಾತ್ಮಕ ಮನೋಭಾವವನ್ನು ಬೆಳೆಸಿಕೊಳ್ಳುವ ದೃಷ್ಟಿಯಿಂದ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಶೇ. ೬೦ ಕ್ಕಿಂತ ಹೆಚ್ಚು ಅಂಕಗಳನ್ನು ಪಡೆದು ಪ್ರಥಮ ಬಾರಿಗೆ, ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದುವ ಎಲ್ಲಾ ವಿದ್ಯಾರ್ಥಿಗಳಿಗೆ ಬಹುಮಾನದ ಹಣವನ್ನು ನೀಡಲಾಗುತ್ತಿದೆ. ಇದಕ್ಕೆ ಯಾವುದೇ ವರಮಾನದ ಮಿತಿ ಇರುವುದಿಲ್ಲ. ಪ್ರತಿಯೊಬ್ಬ ಪರಿಶಿಷ್ಟ ಜಾತಿ ವಿದ್ಯಾರ್ಥಿಗೆ ಈ ಯೋಜನೆಯಡಿಯಲ್ಲಿ ರೂ. ೫೦೦.೦೦ ಗಳು ನೀಡಲಾಗುತ್ತಿದೆ. ಶೈಕ್ಷಣಿಕ ಸಂಸ್ಥೆಗಳಿಂದ ವಿದ್ಯಾರ್ಥಿಗಳ ಪಟ್ಟಿಯನ್ನು ತರಿಸಿಕೊಂಡು ತಾಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಮಂಜೂರು ಮಾಡಿ ಇದನ್ನು ವಿತರಿಸುತ್ತಿದ್ದಾರೆ. ಪ್ರತಿವರ್ಷ ಬಹುಮಾನ ಹಣಕ್ಕಾಗಿ ಅರ್ಜಿಗಳು ಸದರಿ ತಾಲೂಕಿನಲ್ಲಿ ಹೆಚ್ಚುತ್ತಿರುವುದು ಅವರ ಶೈಕ್ಷಣಿಕ ಅಭಿವೃದ್ಧಿಯ ಸಂಕೇತವಾಗಿ. ಆದ್ದರಿಂದ ಸರ್ಕಾರ ಈ ಅನುದಾನವನ್ನು ಹೆಚ್ಚಿಸಬೇಕು. ಅಂತೆಯೇ ಬಹುಮಾನದ ಹಣದ ಮೊತ್ತವನ್ನು ರೂ. ೫೦೦ ರಿಂದ ೨೦೦೦ ದವರೆಗೆ ಹೆಚ್ಚಿಸುವುದು ಪ್ರಯೋಜನಕಾರಿಯಾಗಿದೆ.

**೩. ಪ್ರತಿಭಾ ವಿದ್ಯಾಥಿ ವೇತನ ನೀಡಿಕೆ**

ಈ ಯೋಜನೆಯಡಿಯಲ್ಲಿ ೫ ರಿಂದ ೧೦ ನೇ ತರಗತಿಯವರೆಗೆ ಅಭ್ಯಾಸ ಮಾಡುತ್ತಿರುವ ಹಾಗೂ ಶೇ.೬೦ಕ್ಕಿಂತ ಹೆಚ್ಚು ಅಂಕ ಪಡೆದ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ಈ ಪ್ರತಿಭಾ ವಿದ್ಯಾರ್ಥಿವೇತನವನ್ನು ನೀಡಲಾಗುತ್ತಿದೆ. ಇದು ಪರಿಶಿಷ್ಟ ಜಾತಿ ವಿದ್ಯಾರ್ಥಿಗಳು, ವಾರ್ಷಿಕ ಪರೀಕ್ಷೆಯಲ್ಲಿ ಹೆಚ್ಚು ಅಂಕಗಳನ್ನು ಪಡೆಯುವಂತೆ ಪ್ರೋತ್ಸಾಹಿಸುವ ಹಾಗು ಸ್ಪರ್ಧಾ ಮನೋಭಾವವನ್ನು ಬೆಳಸುವ ಉದ್ದೇಶದಿಂದ ಜಾರಿಗೊಳಿಸಿದಂತಹ ಯೋಜನೆಯಾಗಿದೆ.

ಈ ಯೋಜನೆಯಡಿಯಲ್ಲಿ ಶೇ.೬೦ ಕ್ಕಿಂತ ಹೆಚ್ಚು ಅಂಕಗಳನ್ನು ಪಡೆದ ವಸತಿನಿಲಯದಲ್ಲಿ ವಾಸಿಸುವ, ವಾಸಿಸದ ೫ ರಿಂದ ೭ನೇ ತರಗತಿಯವರೆಗೆ ಓದುತ್ತಿರುವ ವಿದ್ಯಾರ್ಥಿಗಳಿಗೆ ರೂ. ೭೫.೦೦ ಹಾಗೂ ೮ ರಿಂದ ೧೦ನೇ ತರಗತಿಯಲ್ಲಿ ಓದುತ್ತಿರುವವರು ರೂ. ೧೦೦.೦೦ ಗಳು ಪಡೆಯಲು ಅರ್ಹರಿರುತ್ತಾರೆ.

**ಸಲಹೆ**

ಈ ಕಾರ್ಯಕ್ರಮದ ಅಡಿಯಲ್ಲಿ ನೀಡುತ್ತಿರುವ ಪ್ರತಿಭಾ ವಿದ್ಯಾರ್ಥಿವೇತನದ ಮೊತ್ತ ಅತ್ಯಂತ ಕಡಿಮೆ. ಆದ್ದರಿಂದ ಅದನ್ನು ಕ್ರಮವಾಗಿ ರೂ. ೨೫೦.೦೦ ಹಾಗೂ ೫೦೦.೦೦ಗಳಿಗೆ ಹೆಚ್ಚಿಸಿದರೆ ತುಂಬಾ ಅನುಕೂಲವಾಗುತ್ತದೆ.

**೪. ಮೆಟ್ರಿಕ್ ಪೂರ್ವ ಪ್ರೋತ್ಸಾಹ ವಿದ್ಯಾರ್ಥಿ ವೇತನ ವಿದ್ಯಾರ್ಥಿನಿಯರಿಗೆ**

ವಿದ್ಯಾರ್ಥಿನಿಯರಲ್ಲಿ ಶಾಲೆ ಬಿಡುವ ಪ್ರವೃತ್ತಿ ತಪ್ಪಿಸಿ, ಅವರಲ್ಲಿಯ ಸಾಕ್ಷರತೆಯನ್ನು ಹೆಚ್ಚಿಸುವ ಸಲುವಾಗಿ ಮಾಧ್ಯಮಿಕ ಹಾಗೂ ಪ್ರೌಢ ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರಿಗೆ ಈಗಾಗಲೇ ಸಾಮಾನ್ಯ ಕಾರ್ಯಕ್ರಮದಡಿಯಲ್ಲಿ ನೀಡುವ ರೂ. ೧೦೦.೦೦ಗಳ ಜೊತೆಗೆ ರೂ. ೫೦೦.೦೦ ಗಳನ್ನು ಹೆಚ್ಚುವರಿಯಾಗಿ ನೀಡಲಾಗುವುದು. ೨೦೦೨-೦೩ ನೇ ಸಾಲಿನಿಂದ ೬ ಮತ್ತು ೭ ನೇ ತರಗತಿಗೆ ಬರುವ ವಿದ್ಯಾರ್ಥಿನಿಯರಿಗೆ ಇದೇ ಮಾದರಿಯಲ್ಲಿ ವಾರ್ಷಿಕ ರೂ. ೨೫೦.೦೦ ಗಳ ಪ್ರೋತ್ಸಾಹ ಧನ ನೀಡಲಾಗುತ್ತಿದೆ. ಸಮವಸ್ತ್ರ ಮತ್ತು ಪಠ್ಯಪುಸ್ತಕ ಖರೀದಿಸಲು ಈ ವಿದ್ಯಾರ್ಥಿವೇತನವನ್ನು ಎರಡು ಹಂತದಲ್ಲಿ ಅಂದರೆ ಶೈಕ್ಷಣಿಕ ವರ್ಷದ ಪ್ರಾರಂಭದಲ್ಲಿ ಮತ್ತು ವರ್ಷದ ಮಧ್ಯದಲ್ಲಿ ವಿತರಿಸಲಾಗುವುದು.

**೫. ಮೆಟ್ರಿಕಪೂರ್ವ ವಿದ್ಯಾರ್ಥಿನಿಲಯಗಳಲ್ಲಿರುವ ವಿದ್ಯಾರ್ಥಿಗಳಿಗೆ ವಿಶೇಷ ಬೋಧನೆ**

ಮೆಟ್ರಿಕ್‌ಪೂರ್ವ ವಿದ್ಯಾರ್ಥಿನಿಲಯಗಳ ಪ್ರೌಢ ಶಾಲೆಗಳಲ್ಲಿ ಓದುವ ವಿದ್ಯಾರ್ಥಿಗಳಿಗೆ ವಿಶೇಷ ಬೋಧನೆಯನ್ನು ನೀಡಲಾಗುವುದು. ವಿಜ್ಞಾನ, ಗಣಿತ, ಇಂಗ್ಲೀಷ್ ಮತ್ತು ಸಾಮಾನ್ಯ ವಿಷಯಗಳಲ್ಲಿ ನುರಿತ ಮತ್ತು ನಿವೃತ್ತಿ ಹೊಂದಿರುವ ಅರೆಕಾಲಿಕ ಅಧ್ಯಾಪಕರುಗಳ ಮೂಲಕ ವಿಶೇಷ ಬೋಧನೆಯನ್ನು ನೀಡಲು ಮಾಹೆಯಾನ ರೂ. ೫೦೦.೦೦ ಗೌರವ ಧನವನ್ನು ನೀಡಲಾಗುವುದು.

**೬. ಪರಿಶಿಷ್ಟ ಜಾತಿಯ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ವಿಶೇಷ ತರಬೇತಿ**

ಪರಿಶಿಷ್ಟ ಜಾತಿಯ ವರ್ಗದ ಪ್ರೌಢಶಾಲೆ ವಿದ್ಯಾರ್ಥಿಗಳ ಶೈಕ್ಷಣಿಕ ಮಟ್ಟ ಇತರೆ ವಿದ್ಯಾರ್ಥಿಗಳ ಶೈಕ್ಷಣಿಕ ಮಟ್ಟಕ್ಕೆ ಹೋಲಿಸಿ ನೋಡಿದಾಗ ಬಹಳ ಹಿಂದುಳಿದಿರುವುದನ್ನು

ಗಮನಿಸಿ, ಅವರಿಗಾಗಿ ವಿಶೇಷ ಬೋಧನಾ ತರಗತಿಯನ್ನು ರೂಪಿಸಿ ವಾರ್ಷಿಕ ಪರೀಕ್ಷೆಯ ಮುಂಚಿತವಾಗಿ ೩ ತಿಂಗಳುಗಳ ಕಾಲ ವಿಶೇಷ ಬೋಧನೆಯನ್ನು ನೀಡಲಾಗುತ್ತಿದೆ. ಇದನ್ನು ಶಿಕ್ಷಣ ಇಲಾಖೆಯ ಸಹಯೋಗದಿಂದ ಶಾಲೆಗಳಲ್ಲಿಯೇ ಬೋಧನಾ ಅವಧಿ ಮುಗಿದ ನಂತರ ವಿಶೇಷ ಬೋಧನೆ ನೀಡಲಾಗುತ್ತಿದೆ. ಇದು ನಿಜವಾಗಿಯೂ ಒಳ್ಳೆಯ ಫಲಿತಾಂಶವನ್ನು ನೀಡಿ ಈ ವರ್ಗದ ವಿದ್ಯಾರ್ಥಿಗಳ ಶಿಕ್ಷಣ ಮಟ್ಟದಲ್ಲಿ ಹೆಚ್ಚಿನ ಪ್ರಗತಿಯನ್ನು ಸಾಧಿಸುವುದರಲ್ಲಿ ಯಾವುದೇ ಸಂಶಯವಿಲ್ಲ.

**೭. ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ**

ಈ ಯೋಜನೆಯು ಪೂರ್ಣ ಪ್ರಮಾಣದ ಕೇಂದ್ರ ಪುರಸ್ಕೃತ ಯೋಜನೆಯಾಗಿದೆ. ಪರಿಶಿಷ್ಟ ಪಂಗಡದ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಲ್ಲಿ ಅವರ ವ್ಯಾಸಂಗಕ್ಕೆ ಅನುಕೂಲ ಕಲ್ಪಿಸುವ ಹಿನ್ನೆಲೆ ಹೊಂದಿದೆ. ವ್ಯಾಸಂಗವನ್ನು ಮಧ್ಯದಲ್ಲಿ ಹಲವಾರು ಕಾರಣದಿಂದ ಬಿಡುವುದನ್ನು ತಡೆಗಟ್ಟುವ ಉದ್ದೇಶದಿಂದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನವನ್ನು ನೀಡಲಾಗುತ್ತಿದೆ. ಹ.ಬೊ.ಹಳ್ಳಿ ತಾಲೂಕಿನಲ್ಲಿ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನವನ್ನು ೧೯೯೯ ೨೦೦೦, ೨೦೦೦ ೦೧, ೨೦೦೧ ೦೨, ೨೦೦೨ ೦೩, ೨೦೦೩ ೦೪ ನೀಡಲಾಗಿದೆ.

ಈ ಯೋಜನೆಯಡಿಯಲ್ಲಿ ಭಾರತ ಸರ್ಕಾರದ ನಿಬಂಧನೆ ಮೇರೆಗೆ ವಿದ್ಯಾರ್ಥಿಯ ಕುಟುಂಬದ ವಾರ್ಷಿಕ ಆದಾಯ ೬೫,೨೯೦ ಇದ್ದುದನ್ನು ಇತ್ತೀಚಿನ ಆದೇಶದಲ್ಲಿ ೧ ಲಕ್ಷಗಳವರೆಗೆ ಏರಿಸಿ ಪೂರ್ಣ ವಿದ್ಯಾರ್ಥಿವೇತನ ಪಡೆಯಲು ಅವಕಾಶ ಮಾಡಿಕೊಡಲಾಗಿದೆ. ಮೇಲೆ ತಿಳಿಸಿರುವ ವಿದ್ಯಾರ್ಥಿಯ ಕುಟುಂಬದ ವಾರ್ಷಿಕ ಆದಾಯ ರೂ. ೧ ಲಕ್ಷ ಮೀರಿದಲ್ಲಿ ಅರ್ಧ ಧರದಲ್ಲಿ ವಿದ್ಯಾರ್ಥಿ ವೇತನವನ್ನು ಮಂಜೂರು ಮಾಡಲಾಗುತ್ತಿದೆ. ಈ ವಿದ್ಯಾರ್ಥಿವೇತನದ ಮೊತ್ತ ಬೇರೆ ಬೇರೆ ತರಗತಿಗಳಿಗೆ ಬೇರೆಯಾಗಿದ್ದು ಅವುಗಳ ವಿವರಗಳನ್ನು ಈ ಕೆಳಗಿನ ಕೋಷ್ಟಕದಲ್ಲಿ ವಿವರಿಸಲಾಗಿದೆ.

**ಕೋಷ್ಟಕ ೫.೩**

**ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನದ ದರಗಳು**

**ಮಾಸಿಕ ವಿದ್ಯಾರ್ಥಿವೇತನ ಧರ ರೂಗಳಲ್ಲಿ**

| ಗುಂಪು | ಕೋರ್ಸ್ | ನಿಲಯವಾಸಿಗಳಿಗೆ | ನಿಲಯವಾಸಿಗಳಲ್ಲದವರಿಗೆ |
|---|---|---|---|
| ೧. | ವೈದ್ಯಕೀಯ, ತಾಂತ್ರಿಕ, ಕೃಷಿ ಪಶುಸಂಗೋಪನೆ, ಮೀನುಗಾರಿಕೆ ಪದವಿ ಹಾಗೂ ಸ್ನಾತಕೋತ್ತರ ಪದವಿ. | ೪೨೫ | ೧೯೦ |
| ೨. | ಕಲೆ ಮತ್ತು ವಾಣಿಜ್ಯ ಸ್ನಾತಕೋತ್ತರ ಪದವಿ ಹಾಗೂ ಸರ್ಟಿಫಿಕೇಟ್ ಕೋರ್ಸ್‌ಗಳು | ೨೯೦ | ೧೯೦ |
| ೩. | ಕಲೆ ಮತ್ತು ವಾಣಿಜ್ಯ ಸ್ನಾತಕೋತ್ತರ ಪದವಿ ಹಾಗೂ ಸರ್ಟಿಫಿಕೇಟ್ ಕೋರ್ಸ್‌ಗಳು | ೨೯೦ | ೧೯೦ |
| ೪. | ಸಾಮಾನ್ಯ ಪದವಿ ಶಿಕ್ಷಣದ ೨ ಮತ್ತು ನಂತರದ ವರ್ಷಗಳು | ೨೩೦ | ೯೦ |

ಇತ್ತೀಚೆಗೆ ಈ ಮೇಲಿನ ದರಗಳನ್ನು ಬದಲಾಯಿಸಿ ವಿದ್ಯಾರ್ಥಿವೇತನಕ್ಕೆ ಅರ್ಜಿಗಳನ್ನು

ಪ್ರಕಟಣೆಗಳ ಮೂಲಕ ಹಾಗೂ ಎಲ್ಲಾ ಕಾಲೇಜುಗಳಿಗೆ ನೀಡಿ ಇದನ್ನು ಭರ್ತಿ ಮಾಡಿ ಪ್ರಾಂಶುಪಾಲರು ತಾಲೂಕು ಸಮಾಜ ಕಲ್ಯಾಣಾಧಿಕಾರಿಗಳಿಗೆ ಕಳುಹಿಸಬೇಕು. ಮಂಜೂರಾತಿ ಮಾಡಿ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಮಂಜೂರು ಮಾಡಿ ಚೆಕ್ ವಿತರಿಸಲು ಸಂಬಂಧಪಟ್ಟ ಕಲೇಜುಗಳಿಗೆ ಕಳುಹಿಸಿ ಕೊಡಲಾಗುತ್ತಿದೆ.

ಸಲಹೆ

ಈ ಯೋಜನೆಯಡಿಯಲ್ಲಿ ನೀಡುತ್ತಿರುವ ವಿದ್ಯಾರ್ಥಿ ವೇತನ ಇತ್ತೀಚಿನ ಮೌಲ್ಯಗಳಿಗೆ ಹೋಲಿಸಿದರೆ ತುಂಬಾ ಕಡಿಮೆಯಾಗಿದ್ದು ಕಾಲ ಕಾಲಕ್ಕೆ ಬೆಲೆಯ ಅನುಬಂಧ ಬದಲಾವಣೆಯಾದಂತೆ ಕನಿಷ್ಠ ೫ ವರ್ಷಕ್ಕೊಮ್ಮೆಯಾದರು ಧರವನ್ನು ಬದಲಾಯಿಸಲು ಕ್ರಮಕ್ಕೆಗೊಂಡರೆ ಸೂಕ್ತ.

೯ ಪರಿಷ್ಕೃತ ವಿದ್ಯಾರ್ಥಿವೇತನ

ಸರ್ಕಾರಿ ಆದೇಶ ಸಂಖ್ಯೆ ನಂ. ೧೧೦೧೭ :೭: ೨೦೦೨ [illegible] ದಿನಾಂಕ ೨೮.೧.೨೦೦೪ ರಲ್ಲಿ ಭಾರತ ಸರ್ಕಾರದ ವಿದ್ಯಾರ್ಥಿ ವೇತನದ ಧರವನ್ನು ಪರಿಷ್ಕರಿಸಲಾಗಿದ್ದು ಅವುಗಳ ವಿವರಗಳನ್ನು ಕೆಳಗಿನ ಕೋಷ್ಟಕದಲ್ಲಿ ವಿವರಿಸಲಾಗಿದೆ.

**ಕೋಷ್ಟಕ ೫.೪**

ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನದ ಪರಿಷ್ಕೃತ ಧರಗಳು ಮಾಸಿಕ ವಿದ್ಯಾರ್ಥಿ ವೇತನ ಧರ ಎರೂ.ಗಳಲ್ಲಿ ಗುಂಪು ಕೋರ್ಸು ನಿಲಯವಾಸಿಗಳಿಗೆ ನಿಲಯ ವಾಸಿಗಳಲ್ಲದವರಿಗೆ

| ಗುಂಪು | ಕೋರ್ಸು | ನಿಲಯವಾಸಿಗಳಿಗೆ | ನಿಲಯವಾಸಿಗಳಲ್ಲದವರಿಗೆ |
|---|---|---|---|
| ೧. | ವೈದ್ಯಕೀಯ, ತಾಂತ್ರಿಕ, ಕೃಷಿ ಪಶುಸಂಗೋಪನೆ, ಮೀನುಗಾರಿಕೆ ಪದವಿ ಹಾಗೂ ಸ್ನಾತಕೋತ್ತರ ಪದವಿ. | ೭೪೦ | ೩೩೦ |
| ೨. | ವಿಜ್ಞಾನ ಸ್ನಾತಕೋತ್ತರ ಪದವಿ ಹಾಗೂ ಡಿಪ್ಲೋಮಾ ಶಿಕ್ಷಣ ಕಲೆ ಮತ್ತು ವಾಣಿಜ್ಯ ಸ್ನಾತಕೋತ್ತರ ಪದವಿ ಹಾಗೂ ಸರ್ಟಿಫಿಕೇಟ್ ಕೋರ್ಸುಗಳು. | ೫೧೦ | ೩೩೦ |
| ೩. | ಸಾಮಾನ್ಯ ಪದವಿ ಶಿಕ್ಷಣದ ೨ ಮತ್ತು ನಂತರದ ವರ್ಷಗಳು | .೩೫೫ | ೧೪೦ |
| ೪. | ಪಿ.ಯು.ಸಿ. ಮತ್ತು ತತ್ಸಮಾನ ಕೋರ್ಸುಗಳು | ೨೩೫ | ೧೪೦ |

ಕೃಪೆ: ಸರ್ಕಾರಿ ಆದೇಶ ಸಂಖ್ಯೆ ನಂ. ೧೧೦೧೭ :೭: ೨೦೦೨ ದಿನಾಂಕ ೮.೧.೨೦೦೪

## ೧೦. ರಾಜ್ಯ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ

ಭಾರತ ಸರ್ಕಾರದ ವಿದ್ಯಾರ್ಥಿ ವೇತನಕ್ಕೆ ಅನರ್ಹರಾದ ಪರಿಶಿಷ್ಟ ವರ್ಗದ ಮೆಟ್ರಿಕಂ ನಂತರದ ವಿದ್ಯಾರ್ಥಿಗಳು ವಿದ್ಯಾಭ್ಯಾಸವನ್ನು ಮುಂದುವರಿಸಲು ಅನುಕೂಲವಾಗುವಂತೆ ರಾಜ್ಯ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನವನ್ನು ಮಂಜೂರು ಮಾಡಲಾಗುತ್ತಿದೆ. ಇದು ರಾಜ್ಯ ಸರ್ಕಾರದ ಕಾರ್ಯಕ್ರಮವಾಗಿದ್ದು ಅನುದಾನವು ಪೂರ್ಣ ರಾಜ್ಯದ್ದಾಗಿರುತ್ತದೆ. ಪರಿಶಿಷ್ಟ ಜಾತಿಗೆ ಸೇರಿದ ವಿದ್ಯಾರ್ಥಿಗಳು ತಾವು ವ್ಯಾಸಂಗ ಮಾಡುತ್ತಿರುವ ಕಾಲೇಜುಗಳಲ್ಲಿ ಅರ್ಜಿಯನ್ನು ಪಡೆದು ಭರ್ತಿ ಮಾಡಿ ಕಾಲೇಜು ಪ್ರಾಂಶುಪಾಲರ ಮೂಲಕ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳಿಗೆ ಕಳುಹಿಸಬೇಕು. ಅದನ್ನು ಪರಿಶೀಲಿಸಿ ಅರ್ಹ ಅಭ್ಯರ್ಥಿಗಳಿಗೆ ವಿದ್ಯಾರ್ಥಿ ವೇತನ ಮಂಜೂರು ಮಾಡಿ ವಿದ್ಯಾರ್ಥಿಗಳ ಪಟ್ಟಿ ಹಾಗೂ ಚೆಕ್ಕುಗಳ ಸಮೇತ ಸಂಬಂಧಪಟ್ಟ ಕಾಲೇಜುಗಳಿಗೆ ವಿತರಿಸುವ ಸಲುವಾಗಿ ಕಳುಹಿಸಲಾಗುತ್ತದೆ.

## ೧೨. ಪುರಸ್ಕಾರ ಬಹುಮಾನದ ಹಣ

ಪರಿಶಿಷ್ಟ ಜಾತಿಗೆ ಸೇರಿದ ವಿದ್ಯಾರ್ಥಿಗಳು ಈ ಕೆಳಕಂಡ ಪಬ್ಲಿಕ್ ಪರೀಕ್ಷೆಗಳಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರೆ ಅಂತಹ ವಿದ್ಯಾರ್ಥಿಗಳಿಗೆ ನಗದು ಬಹುಮಾನ ನೀಡಲಾಗುತ್ತದೆ. ಅವುಗಳ ವಿವರಗಳು ಕೆಳಗಿನಂತಿರುತ್ತದೆ.

**ಕೋಷ್ಟಕ ೫.೫**

| | ಬಹುಮಾನದ ವಿವರ | ಬಹುಮಾನಗಳ ಮೊತ್ತ |
|---|---|---|
| ೧. | ಎಸ್.ಎಸ್.ಎಲ್.ಸಿ ವಿದ್ಯಾರ್ಥಿಗಳಿಗೆ | ರೂ. ೫೦೦ |
| ೨ | ೨ ನೇ ಪಿ.ಯು.ಸಿ. ವಿದ್ಯಾರ್ಥಿಗಳಿಗೆ | ರೂ. ೭೫೦.೦೦ |
| ೩. | ಪದವಿ ತರಗತಿ ವಿದ್ಯಾರ್ಥಿಗಳಿಗೆ | ರೂ. ೧೦೦೦.೦೦ |
| ೪. | ಸ್ನಾತಕೋತ್ತರ ಪದವಿ ಎಂ.ಎ., ಎಂಎಸ್ಸಿ., ಎಂಕಾಂ. | ರೂ. ೧೨೫೦ |
| ೫. | ತಾಂತ್ರಿಕ ಪದವಿ | ರೂ. ೧೫೦೦.೦೦ |
| ೬. | ವೈದ್ಯಕೀಯ ಪದವಿ | ರೂ. ೧೫೦೦.೦೦ |
| ೭. | ಕೃಷಿ ಮತ್ತು ಪಶು ವೈದ್ಯ | ರೂ. ೧೫೦೦.೦೦ |

ಈ ನಗದು ಬಹುಮಾನಕ್ಕಾಗಿ ಅರ್ಜಿಯನ್ನು ಕರೆದು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ವಿದ್ಯಾರ್ಥಿಯ ಜಾತಿ ಪ್ರಮಾಣ ಪತ್ರ ಮತ್ತು ಪರೀಕ್ಷೆಯಲ್ಲಿ ಪಡೆದ ಅಂಕಪಟ್ಟಿಗಳನ್ನು ಪರಿಶೀಲಿಸಿ ನಗದು ಬಹುಮಾನ ಹಣವನ್ನು ಮಂಜೂರು ಮಾಡಿ, ಸಂಬಂಧಪಟ್ಟ

ಕಾಲೇಜುಗಳಿಗೆ ವಿತರಿಸುವ ಸಲುವಾಗಿ ಕಳುಹಿಸಲಾಗುತ್ತದೆ.

೧೩. ಪೋಸ್ಟ್ ಮೆಟ್ರಿಕ್ ವಿದ್ಯಾರ್ಥಿಗಳಿಗೆ ಹೆಚ್ಚುವರಿ ಊಟ ಮತ್ತು ವಸತಿ ಭತ್ಯೆ ಮಂಜೂರಾತಿ.

ಈ ಯೋಜನೆಯ ಉದ್ದೇಶ ಹಾಗೂ ಹಿನ್ನೆಲೆ, ಎಸ್.ಎಸ್.ಎಲ್.ಸಿ. ನಂತರ ತನ್ನ ವಿದ್ಯಾಭ್ಯಾಸವನ್ನು ಮುಂದುವರೆಸಲು ಸಾಧ್ಯವಾದಾಗ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ಅಂಗೀಕೃತ ಮತ್ತು ಸರ್ಕಾರಿ ಕಲೇಜು ವಿದ್ಯಾರ್ಥಿಗಳ ವಿದ್ಯಾರ್ಥಿ ನಿಲಯಲ್ಲಿ ವಾಸ ಮಾಡುತ್ತಿರುವ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಅನುಕೂಲ ಕಲ್ಪಿಸುವ ಉದ್ದೇಶದಿಂದ ಈ ಕಾರ್ಯಕ್ರಮವನ್ನು ರೂಪಿಸಲಾಗಿದೆ.

ರಾಜ್ಯ ಸರ್ಕಾರದಲ್ಲಿರುವ ಅಂಗೀಕೃತ ಕಾಲೇಜು ವಿದ್ಯಾರ್ಥಿನಿಲಯಲ್ಲಿ ಇರುವಂತಹ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳು, ಭಾರತ ಸರ್ಕಾರದ ವಿದ್ಯಾರ್ಥಿ ವೇತನಕ್ಕೆ ಅರ್ಹರಾಗಿದ್ದು, ಭಾರತ ಸರ್ಕಾರ ನಿಗಧಿಪಡಿಸಿರುವ ವಿದ್ಯಾರ್ಥಿ ವೇತನದ ಧರಕ್ಕಿಂತಲೂ ಆಯಾ ನಿಲಯದ ವಿದ್ಯಾರ್ಥಿಗಳಿಗೆ ಹೆಚ್ಚಿನ ಖರ್ಚು ಬಂದಲ್ಲಿ ಹೆಚ್ಚುವರಿ ಊಟ ಮತ್ತು ವಸತಿ ವೆಚ್ಚವನ್ನು ನೀಡಲಾಗುತ್ತಿದೆ.

**ರ್‍ಯಾಂಕ್ ವಿದ್ಯಾರ್ಥಿಗಳಿಗೆ ನಗದು ಬಹುಮಾನ**

ಸ್ನಾತಕೋತ್ತರ ಪದವಿಗಳ ವಿವಿಧ ಕೋರ್ಸುಗಳಲ್ಲಿ ಮೊದಲನೆಯ ೩ ರ್‍ಯಾಂಕಿನ ಒಳಗೆ ಗಳಿಸಿದ ಹಾಗೂ ಪದವಿ ತರಗತಿಯಲ್ಲಿ ಮೊದಲ ೧೦ ರ್‍ಯಾಂಕ್ ಒಳಗೆ ಗಳಿಸಿದ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ತಲಾ ೫೦೦೦ ರೂಗಳ ಪ್ರೋತ್ಸಾಹ ಧನವನ್ನು ನೀಡಲಾಗುತ್ತದೆ. ಈ ಬಗ್ಗೆ ಅರ್ಜಿಯನ್ನು ಸಂಬಂಧ ಪಟ್ಟ ವಿಶವವಿದ್ಯಾನಿಲಯದ ಮೂಲಕ ಇಲಾಖೆಗೆ ಸಲ್ಲಿಸಬೇಕು.

ಪ್ರತಿಷಿಟತ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ

ಸಂಸ್ಥೆಗಳಾದ ಐ.ಟಿ.ಐ : ಐ.ಐ.ಎಮ್: ಐ.ಐ.ಎಸ್.ಸಿ. ಮುಂತಾದ ಪ್ರತಿಷ್ಠಿತ ಸಂಸ್ಥೆಗಳಲ್ಲಿ ಪ್ರವೇಶ ಪಡೆದ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ೨೦೦೨೦೩ ನೇ ಸಾಲಿನಿಂದ ಒಂದು ಅವಧಿಯ ವಿದ್ಯಾರ್ಥಿ ವೇತನಕ್ಕಾಗಿ ತಲಾ ೫೦೦೦.೦೦ ರೂ. ಗಳನ್ನು ಮಂಜೂರು ಮಾಡಲಾಗುವುದು.

ಅನೈರ್ಮಲ್ಯ ವೃತ್ತಿಯಲ್ಲಿ ತೊಡಗಿರುವ ಮಕ್ಕಳಿಗೆ ಮಟ್ರಿಕ್ ಪೂರ್ವ ವಿದ್ಯಾರ್ಥಿವೇತನ

ಚರ್ಮ ಹದ ಮಾಡುವುದು, ಚರ್ಮ ಸುಲಿಯುವುದು ಹಾಗೂ ಇತರ ಅನೈರ್ಮಲ್ಯ ಕೆಲಸ ಮಾಡುತ್ತಿರುವ ಈ ಜನಾಂಗದ ಮಕ್ಕಳು ಶಾಲೆಗೆ ಹೋಗುವಲ್ಲಿ ಹಿಂದೆ ಬಿದ್ದಿರುವುದನ್ನು ಗಮನಿಸಿ, ಇಂತಹ ಮಕ್ಕಳಲ್ಲಿ ವಿದ್ಯಾಭ್ಯಾಸದ ಬಗ್ಗೆ ಆಸಕ್ತಿ ಮೂಡಿಸುವ ಉದ್ದೇಶದಿಂದ ಅವರನ್ನು ವಿದ್ಯಾರ್ಥಿ ನಿಲಯಕ್ಕೆ ಸೇರಿಸಿ ವಿದ್ಯಾರ್ಥಿ ವೇತನ ಮಂಜೂರು ಮಾಡಲಾಗುತ್ತಿದೆ.

ವಿದ್ಯಾರ್ಥಿನಿಲಯದಲ್ಲಿ ವಾಸಿಸದವರಿಗೆ

೧ ರಿಂದ ೫ ನೇ ತರಗತಿಯವರೆಗೆ ರೂ. ೨೫.೦೦ (೧೦ ತಿಂಗಳು)

೬ ರಿಂದ ೮ ನೇ ತರಗತಿಯವರೆಗೆ ರೂ. ೪೦.೦೦ (೧೦ ತಿಂಗಳು)

೯ ರಿಂದ ೧೦ ನೇ ತರಗತಿಯವರೆಗೆ ರೂ. ೫೦.೦೦ (೧೦ ತಿಂಗಳು)

ವಿದ್ಯಾರ್ಥಿನಿಲಯದಲ್ಲಿ ವಾಸಿಸುವವರಿಗೆ

೩ ರಿಂದ ೪ ನೇ ತರಗತಿಯವರೆಗೆ ರೂ. ೨೦೦.೦೦ ಪ್ರತಿ ತಿಂಗಳು

೯ ರಿಂದ ೧೦ ನೇ ತರಗತಿಯವರೆಗೆ ರೂ. ೨೫೦.೦೦ ಪ್ರತಿ ತಿಂಗಳು

ಇದರ ಜೊತೆಗೆ ವಿದ್ಯಾರ್ಥಿ ನಿಲಯದ ವಾಸಿಗಳಿಗೆ ಹಾಗೂ ವಿದ್ಯಾರ್ಥಿ ನಿಲಯದಲ್ಲಿ ವಾಸಿಸದ ವಿದ್ಯಾರ್ಥಿಗಳಿಗೂ ಈ ಮೇಲಿನ ವಿದ್ಯಾರ್ಥಿ ವೇತನದ ಜೊತೆ ವಾರ್ಷಿಕ ಅಡಹಾಕ್ ಗ್ರಾಂಟ್ ಆಗಿ ರೂ. ೫೦೦.೦೦ ರೂಪಾಯಿಗಳನ್ನು ಮಂಜೂರು ಮಾಡಲಾಗುತ್ತಿದೆ.

ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಅನೈರ್ಮಲ್ಯ ವೃತ್ತಿಯಲ್ಲಿ ತೊಡಗಿರುವವರನ್ನು ಗುರುತಿಸಲಾಗಿದ್ದು ಸಮಾಜ ಕಲ್ಯಾಣ ಇಲಾಖೆ ಹಾಗೂ ಪರಿಶಿಷ್ಟ ಜಾತಿ । ಪರಿಶಿಷ್ಟ ವರ್ಗದ ಅಭಿವೃಕ್ಷಿ ನಿಗಮದ ವತಿಯಿಂವ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ. ಆದರೆ ಸದರಿ ಜನಾಂಗಕ್ಕೆ ವಿದ್ಯಾರ್ಥಿ ವೇತನ ನೀಡಲು ೩ ವರ್ಷಗಳಿಂದ ಸರ್ಕಾರದಿಂದ ಬಿಡುಗಡೆಯಾಗದಿರುವುದು ವಿಷಾದನೀಯ ಈ ನಿಟ್ಟಿನಲ್ಲಿ ಪ್ರತಿವರ್ಷ ಹೆಚ್ಚಿನ ಅನುದಾನವನ್ನು ಬಿಡುಗಡೆ ಮಾಡಿದಲ್ಲಿ ಸದರಿ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬಹುದಾಗಿದೆ.

**೧೫. ಎಂ.ಫಿಲ್ ಮತ್ತು ಪಿ.ಹೆಚ್.ಡಿ. ವಿದ್ಯಾರ್ಥಿಗಳಿಗೆ ಫೆಲೋಷಿಫ್**

ಈ ಯೋಜನೆಯಡಿಯಲ್ಲಿ ರಾಜ್ಯದ ವಿವಿಧ ವಿಶ್ವವಿದ್ಯಾನಿಲಯಗಳಲ್ಲಿ ವಿವಿಧ ವಿಷಯಗಳಲ್ಲಿ ಸಂಶೋಧನೆಯಲ್ಲಿ ತೊಡಗಿರುವ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ, ಸಂಶೋಧನೆ, ಮಾಹಿತಿ ಸಂಗ್ರಹಣೆ ಮುತಾದವುಗಳಿಗೆ ಅತಿ ಹೆಚ್ಚಿನ ವೆಚ್ಚ ಭರಿಸಬೇಕಾಗಿರುವುದರಿಂದ ಎಂ.ಫಿಲ್ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ರೂ. ೮೦೦೦ ಹಾಗೂ ಪಿ.ಹೆಚ್.ಡಿ. ಮಾಡುತ್ತಿರುವ ವಿದ್ಯಾರ್ಥಿಗಳಿಗೆ ರೂ. ೧೦,೦೦೦ ನೀಡುವ ಯೋಜನೆಯನ್ನು ಸಮಾಜ ಕಲ್ಯಾಣ ಇಲಾಖೆಯಿಂದ ಕಾರ್ಯಗತಗೊಳಿಸಲಾಗುತ್ತಿದೆ. ಈಗ ಈ ಕಾರ್ಯಕ್ರಮವು ತಾಲೂಕು ಮಟ್ಟದ್ದಲ್ಲಿ ಅನುಷ್ಠಾನಗೊಳ್ಳುತ್ತಿರುವುದ ಶ್ಲಾಘನೀಯವಾಗಿದೆ.

**ಸಲಹೆ**

ಪಿಎಚ್.ಡಿ ಮತ್ತು ಎಂ.ಫಿಲ್ ಅಧ್ಯಯನಕ್ಕೆ ನೀಡುತ್ತಿರುವ ಅನುದಾನ ಕಡೆಮೆಯಾಗಿದ್ದು, ೨ ವರ್ಷದ ಅವಧಿಗೆ ಹೋಲಿಸಿದಲ್ಲಿ ತುಂಬಾ ಕಡಿಮೆ. ಹಾಗೂ ಇದರಿಂದ ಸಂಶೋಧಕ ವಿದ್ಯಾರ್ಥಿ ತನ್ನ ಸಂಶೋಧನೆಯನ್ನು ಪೂರ್ಣ ಪ್ರಮಾಣದಲ್ಲಿ ಕೈಗೊಳ್ಳಲು ಸಾಧ್ಯವಾಗದ ಕಾರಣ, ಸಂಶೋಧನೆಯನ್ನು ಅರ್ಧದಲ್ಲಿ ಬಿಡುವ ಸಾಧ್ಯತೆ ಇದೆ. ಈ ಅನುಧಾನವನ್ನು

ಕನಿಷ್ಠ ರೂ. ೨೦,೦೦೦ ಗಳಿಗೆ ಏರಿಸಿದರೆ ಸಂಶೋಧನೆಯನ್ನು ಅರ್ಥಪೂರ್ಣವಾಗಿ ಕೈಗೊಳ್ಳಲು ಸಾಧ್ಯವಾಗುತ್ತದೆ.

೧೬. ವಿದೇಶಿ ವಿಶ್ವವಿದ್ಯಾನಿಲಯದಲ್ಲಿ ಉನ್ನತ ವ್ಯಾಸಂಗಮಾಡುವ ವಿದ್ಯಾರ್ಥಿಗಳಿಗೆ ಧನಸಹಾಯ

೨೦೦೧ ೦೨ ನೇ ಸಾಲಿನಿಂದ ವಿದೇಶಿ ವಿಶ್ವವಿದ್ಯಾನಿಲಯಗಳಲ್ಲಿ ಉನ್ನತ ವ್ಯಾಸಂಗಕ್ಕೆ ಆಯ್ಕೆಯಾಗುವ ಪಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಧನ ಸಹಾಯ ಮಾಡುವ ಕಾರ್ಯಕ್ರಮವನ್ನು ಹಾಕಿಕೊಳ್ಳಲಾಗಿದೆ. ಪ್ರತಿವಿದ್ಯಾರ್ಥಿಗೆ ಗರಿಷ್ಠ ೧೦.೦೦ ಲಕ್ಷ ರೂ.ಗಳು ಅಥವಾ ವಾಸ್ತವಿಕ ವೆಚ್ಚವನ್ನು ಸರ್ಕಾರದಿಂದ ಭರಿಸಲಾಗುವುದು. ಈ ಧನ ಸಹಾಯ ಪಡೆಯುವವರು ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕು.

೧. ಈ ಯೋಜನೆಯಲ್ಲಿ ಪ್ರಯೋಜನ ಪಡೆಯಲು ವಿದ್ಯಾರ್ಥಿಯು ಕರ್ನಾಟಕ ರಾಜ್ಯದ ಮೂಲ ನಿವಾಸಿಯಾಗಿದ್ದು ಪರಿಶಿಷ್ಟ ಜಾತಿಗೆ ಸೇರಿದವರಾಗಿರಬೇಕು.

೨. ರಾಜ್ಯದ ಯಾವುದೇ ಅಂಗೀಕೃತ ವಿಶ್ವವಿದ್ಯಾನಿಲಯದ ಯಾವುದೇ ವಿಭಾಗದಲ್ಲಿ ಪದವಿ, ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ ಕನಿಷ್ಠ ೬೦ ಅಂಕಗಳನ್ನು ಗಳಿಸಿರಬೇಕು.

೩. ವಿದೇಶದ ವಿಶ್ವವಿದ್ಯಾನಿಲಯದಲ್ಲಿ ಉನ್ನತ ವ್ಯಾಸಂಗಕ್ಕಾಗಿ ಅಭ್ಯರ್ಥಿಯು ಆಯ್ಕೆಯಾಗಿರಬೇಕು.

೪. ನಿಯೋಜನೆಗೆ ವಿದ್ಯಾರ್ಥಿಯು ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣವನ್ನು ಪೂರ್ಣಗೊಳಿಸಲು ಬದ್ಧನಾಗಿರಬೇಕು.

ಮಧ್ಯದಲ್ಲಿ ಶಿಕ್ಷಣವನ್ನು ತೊರೆದ ಪಕ್ಷದಲ್ಲಿ ಸರ್ಕಾರದಿಂದ ಮಾಡಿರುವ ವೆಚ್ಚವನ್ನು ಭರಿಸಿಕೊಡಬೇಕು. ವ್ಯಾಸಂಗದಲ್ಲಿ ಪೂರ್ಣಗೊಳಿಸಬೇಕು.

೫. ಆಯ್ಕೆಯಾದ ಅಭ್ಯರ್ಥಿಯ ಕುಟುಂಬದ ಯಾವುದೆ ಸದಸ್ಯರು ವಿದೇಶದಲ್ಲಿ ನೆಲೆಸಿರಬಾರದು. ಆಯ್ಕೆಯಾಗಿರುವ ಅಭ್ಯಾರ್ಥಿಯ ವಯಸ್ಸು ತರಬೇತಿಯ ಪ್ರಾರಂಭದಲ್ಲಿ ೩೦ ವರ್ಷಗಳಿಗಿಂತ ಮೀರಿರಬಾರದು. ನಿಯಮಗಳಡಿಯಲ್ಲಿ ಸೂಚಿಸಿರುವ ಷರತ್ತುಗಳನ್ನು ಪೂರೈಸಬೇಕು ಮತ್ತು ಆಯ್ಕೆ ಸಮಿತಿಯಿಂದ ಅನುಮೋದನೆ ಪಡೆದಿರಬೇಕು. ೨೨

**೩. ಕಾನೂನು ಪದವೀಧರರಿಗೆ ಆಡಳಿತದಲ್ಲಿ ತರಬೇತಿ**

ಪರಿಶಿಷ್ಟ ಜಾತಿಗೆ ಸೇರಿದ ಕಾನೂನು ಪದವಿಯನ್ನು ಪಡೆದು ನಿರುದ್ಯೋಗಿಯಾಗಿರುವ ಯುವಕ ಯುವತಿಯರಿಗೆ ನ್ಯಾಯಾಂಗ ಆಡಳಿತದಲ್ಲಿ ಹೆಚ್ಚು ಅನುಭವವನ್ನು ಹಾಗೂ ಜ್ಞಾನವನ್ನು ಪಡೆಯಲು ಅನುಕೂಲವಾಗುವಂತೆ ತರಬೇತಿಯನ್ನು ನೀಡಲಾಗುತ್ತಿದೆ. ಈ ತರಬೇತಿಯ ಅವಧಿ. ನಾಲ್ಕು ವರ್ಷದ ದೀರ್ಘಾವಧಿಯಾಗಿದ್ದು, ತರಬೇತಿ ಅವಧಿಯಲ್ಲಿ ಪ್ರತಿಯೊಬ್ಬ ಅಭ್ಯರ್ಥಿಗೆ ಮಾಸಿಕ ರೂ. ೧೦೦೦.೦೦ ಗಳ ಶಿಷ್ಯ ವೇತನವನ್ನಾಗಿ ನೀಡಲಾಗುತ್ತಿದೆ.

ಈ ಯೋಜನೆಗೆ ಆಯ್ಕೆಯಾಗಲು ಕೆಲವು ಅರ್ಹತೆಗಳಿವೆ. ಆ ಪ್ರಕಾರ

೧. ಅಭ್ಯರ್ಥಿಯು ಪರಿಶಿಷ್ಟ ಜಾತಿಗೆ ಸೇರಿದವನಾಗಿರಬೇಕು.

೨. ಕಾನೂನು ಪದವಿಯನ್ನು ಮುಗಿಸಿ ಬಾರ್ ಕೌನ್ಸಿಲ್‌ನಲ್ಲಿ ನೊಂದಣಿ ಮಾಡಿ ೨ ವರ್ಷಗಳ ಒಳಗಿರಬೇಕು.

೩. ಅಭ್ಯರ್ಥಿಗೆ ೩೫ ವರ್ಷ ವಯಸ್ಸು ಮೀರಿರಬಾರದು.

೪. ನಿರುದ್ಯೋಗಿಗಳಾಗಿರಬೇಕು.

ಅಂತಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಸರ್ಕಾರ ಈಗಾಗಲೇ ಒಂದು ಆಯ್ಕೆ ಸಮಿತಿಯನ್ನು ರಚಿಸಿದೆ ಅದರಲ್ಲಿ

೧. ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು ಅಧ್ಯಕ್ಷರು

೨. ಜಿಲ್ಲಾ ಸರ್ಕಾರಿ ವಕೀಲರು ಸದಸ್ಯರು

೩. ಅಧ್ಯಕ್ಷರು ಜಿಲ್ಲಾ ವಕೀಲರ ಸಂಘ ಸದಸ್ಯರು

೪. ಅಧ್ಯಕ್ಷರು ಕಾನೂನು ನೆರವು ಮಂಡಳಿ ಸದಸ್ಯರು

೫. ಜಿಲ್ಲ ಸರ್ಕಾರಿ ಅಭಿಯೋಜಕರು ಸದಸ್ಯರು

೬. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ಸದಸ್ಯ ಕಾರ್ಯದರ್ಶಿಗಳಾಗಿರುತ್ತಾರೆ.

ಈ ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳನ್ನು ಸರ್ಕಾರಿ ವಕೀಲರು ಅಥವಾ ೨೦ ವರ್ಷ ಅನುಭವವಿರುವ ವಕೀಲರ ಹತ್ತಿರ ತರಬೆತಿಗೆ ನಿಯೋಜಿಸಲಾಗುವುದು. ಈ ವಕೀಲರು ಆಯ್ಕೆಯಾದ ಅಭ್ಯರ್ಥಿಗಳನ್ನು ತಮ್ಮ ದಿನ ನಿತ್ಯದ ನ್ಯಾಯಾಲಯದ ಕಲಾಪಗಳಲ್ಲಿ ತೊಡಗಿಸಿಕೊಂಡು ನ್ಯಾಯಾಂಗ ಆಡಳಿತದಲ್ಲಿ ತರಬೇತಿಯನ್ನು ನೀಡುತ್ತಾರೆ. ಅವರು ನೀಡುವ ದಿನದ ಹಾಜರಾತಿಯ ಮೇಲೆ ಮಾಸಿಕ ಶಿಷ್ಯವೇತನವನ್ನು ಪಾವತಿಸಲಾಗುತ್ತಿದೆ.

**ಬಾಧಕಗಳು**

ಈ ಯೋಜನೆಯು ಎಷ್ಟರ ಮಟ್ಟಿಗೆ ಫಲಪ್ರದವಾಗಿದೆ ಎಂಬುದನ್ನು ಅಳೆಯಲು ಯಾವುದೇ ರೀತಿಯ ಮಾನದಂಡವನ್ನು ನಿಗಧಿ ಮಾಡದೇ ಇರುವುದರಿಂದ ಈ ಯೋಜನೆಯು ಅಷ್ಟೊಂದು ಪರಿಣಾಮಕಾರಿ ಫಲವನ್ನು ನೀಡುತ್ತಿಲ್ಲ. ಕೇವಲ ಹೆಸರಿಗೆ ಮಾತ್ರ ಯೋಜನೆ ನಡೆಯುತ್ತಿದ್ದು, ಸರ್ಕಾರದ ಅನುದಾನ ವ್ಯಯವಾಗುತ್ತದೆ.

**ಸಲಹೆಗಳು**

೧. ಈ ಯೋಜನೆ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಪ್ರತಿ ವರ್ಷಕ್ಕೊಮ್ಮೆ ನ್ಯಾಯಾಂಗ ಆಡಳಿತದಲ್ಲಿ ಅವರು ಪಡೆದ ತರಬೇತಿಯ ಬಗ್ಗೆ ಪರೀಕ್ಷಯನ್ನು ನಡೆಸಬೇಕು. ಅವುಗಳ ಮೌಲ್ಯ ಮಾಪನವನ್ನು ಮಾಡಿ, ನರೀಕ್ಷಿತ ಫಲಿತಾಂಶ ದೊರೆಯದಿದ್ದಲ್ಲಿ ಅಂತಹ ಅಭ್ಯರ್ಥಿಗಳನ್ನು ಕೈ ಬಿಟ್ಟು ಬೇರೆ ಪರಿಶಿಸ್ಟ ಅಭ್ಯರ್ಥಿಗಳಿಗೆ ಅನುವು ಮಾಡಿಕೊಡಬಹುದಾಗಿದೆ.

೨. ಈ ಯೋಜನೆಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವಾಗ ಬರೀ ಸಂದರ್ಶನದ ಮೂಲಕ ಆಯ್ಕೆ ಮಾಡಿಕೊಳ್ಳುತ್ತಿರುವುದರ ಬದಲು, ಅವರು ನ್ಯಾಯಾಂಗ ಪದವಿಯಲ್ಲಿ ಪಡೆದಿರುವ ಜ್ಞಾನದ ಬಗ್ಗೆ ತಿಳಿದುಕೊಳ್ಳಲು ಒಂದು ಲಿಖಿತ ಪರೀಕ್ಷೆಯನ್ನು ನಡೆಸಿ, ಅಭ್ಯರ್ಥಿಗಳನ್ನು ಆಯ್ಕೆಮಾಡಿಕೊಳ್ಳುವುದು ಸೂಕ್ತವಾಗಿದೆ.

೩. ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳಿಗೆ ಪೂರ್ಣ ಪ್ರಮಾಣದ ತರಬೇತಿಯನ್ನು ನಾಲ್ಕು ವರ್ಷಗಳ ಕಾಲ ನೀಡಿ, ಅವರೇ ಸ್ವತಃ ನ್ಯಾಯಲಯದ ಕೇಸುಗಳನ್ನು ನಡೆಸುವ ಸಾಮರ್ಥ್ಯವನ್ನು ಹೊಂದುವಂತಹ ತರಬೆತಿಯನ್ನು ನೀಡಬೇಕಾದದ್ದು ಸರ್ಕಾರಿ ವಕೀಲರ ಜವಾಬ್ದಾರಿ ಮಾಡಬೇಕು. ಆಗ ಮಾತ್ರ ಈ ಯೋಜನೆ ತುಂಬಾ ಪರಿಣಾಮಕಾರಿಯಾಗಲು ಸಾಧ್ಯ

೪. ಕಾನೂನು ಪದವೀಧರರಿಗೆ ಧನ ಸಹಾಯ

ಈ ಯೋಜನೆಯಲ್ಲಿ ಪರಿಶಿಷ್ಟ ಜಾತಿ ವರ್ಗಕ್ಕೆ ಸೇರಿದ ನಿರುದ್ಯೋಗಿ ಕಾನೂನು ಪದವೀಧರರು ಸ್ವತಂತ್ರವಾಗಿ ವಕೀಲ ವೃತ್ತಿಯನ್ನು ಕೈಗೊಳ್ಳಲು ಹಾಗೂ ಬಾರ್ ಕೌನ್ಸಿಲ್‌ನಲ್ಲಿ ಅವರ ಹೆಸರನ್ನು ನೋಂದಾಯಿಸಿ ಕೊಳ್ಳಲು ಸಹಾಯವಾಗುವಂತೆ ರೂ. ೫೦೦೦.೦೦ ಗಳ ಧನ ಸಹಾಯವನ್ನು ನೀಡಲಾಗುತ್ತಿದೆ.

**ಬಾಧಕಗಳು ಮತ್ತು ಸಲಹೆ**

ಈ ಯೋಜನೆ ಅಂತಹ ಪರಿಣಾಮಕಾರಿ ಫಲವನ್ನು ನೀಡಿರುವುದಿಲ್ಲ. ಅದರ ಬದಲು ಸರ್ಕಾರವೇ ಪರಿಶಿಷ್ಟ ಜಾತಿಯ ಕಾನೂನು ಪದವೀಧರರಿಗೆ ವಕೀಲ ವೃತ್ತಿಯನ್ನು ಪ್ರಾರಂಭಿಸಲು ನೋಂದಣಿ ಶುಲ್ಕವನ್ನು ತುಂಬಿ ಅವರ ವಕೀಲಿ ವೃತ್ತಿಗೆ ಅನುಕೂಲವಾಗುವಂತಹ ಪುಸ್ತಕಗಳನ್ನು ಖರೀದಿಸಿ ವಿತರಣೆ ಮಾಡಿದಲ್ಲಿ, ಈ ಯೋಜನೆ ಯಾವುದೇ ರೀತಿಯ ದುರುಪಯೋಗವಾಗದೇ ಫಲಪ್ರದವಾಗುತ್ತದೆ.

**೫. ಐ.ಟಿ.ಐ. ಮತ್ತು ಐ.ಟಿ.ಸಿ. ತರಬೆತಿ ಹೊಂದುವವರಿಗೆ ಶಿಷ್ಯವೇತನ**

ಈ ಯೋಜನೆಯಲ್ಲಿ ಪರಿಶಿಷ್ಟ ಜಾತಿಗೆ ಸೇರದ ಎಸ್.ಎಸ್.ಎಲ್.ಸಿ. ಪಾಸಾದ ನಿರುದ್ಯೋಗಿ ಅಭ್ಯರ್ಥಿಗಳಿಗೆ ತರಬೇತಿ ನೀಡುವ ಹಿನ್ನೆಲೆಯನ್ನು ಹೊಂದಿರುತ್ತದೆ. ಇದರ ಉದ್ದೇಶ ಪರಿಶಿಷ್ಟ ಜಾತಿ ನಿರುದ್ಯೋಗಿ ಯುವರ ಯುವತಿಯರಿಗೆ ತರಬೇತಿಯನ್ನು ನೀಡಿ ಸ್ವತಂತ್ರವಾಗಿ ಉದ್ಯೋಗ ಕಲ್ಪಿಸಿಕೊಳ್ಳುವ ಉದ್ದೇಶದಿಂದ ಈ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

ಈ ಯೋಜನೆಯಲ್ಲಿ ಪರಿಶಿಷ್ಟ ಜಾತಿಯ ಅಭ್ಯರ್ಥಿಗಳಿಗೆ ೧೮ ವರ್ಷದಿಂದ ೩೦ ವರ್ಷಗಳ ಒಳಗಿರಬೇಕು. ಬೆರಳಚ್ಚು ತರಬೇತಿಗೆ ರೂ. ೫೦.೦೦.ಶೀಘ್ರಲಿಪಿ ತರಬೇತಿಗೆ ರೂ. ೭೫.೦೦, ಪದವೀಧರ ಶೀಘ್ರಲಿಪಿ ತರಬೇತಿಗೆ ರೂ. ೨೦೦.೦೦, ಫೋರ್‌ಮೆನ್ ತರಬೇತಿಗೆ ರೂ. ೫೦೦.೦೦ ಸ್ಟೈಫಂಡ್ ನೀಡಲಾಗುತ್ತಿದೆ. ತರಬೇತಿಯ ಅವಧಿ ಒಂದು ವರ್ಷವಾಗಿರುತ್ತವೆ. ಕಾಲೇಜಿನಲ್ಲಿ ವ್ಯಾಸಾಂಗ ಮಾಡುತ್ತಿರುವವರ ಈ ಯೋಜನೆಗೆ ಅರ್ಹರಲ್ಲಿ. ಪಾಲಕರ ವಾರ್ಷಿಕ ವರಮಾನ ರೂ. ೨೪,೦೦೦ ಕ್ಕಿಂತ ಮೀರಿರಬಾರದು.

೬. ಸ್ವಯಂ ಉದ್ಯೋಗ ತರಬೇತಿ ಕೇಂದ್ರಗಳು

ಈ ಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿ ನಿರುದ್ಯೋಗಿ ಯುವಕರಿಗೆ ವಿವಿಧ ವೃತ್ತಿಗಳಲ್ಲಿ ತರಬೇತಿ ನೀಡಿ, ಸ್ವತಂತ್ರ ಉದ್ಯೋಗವನ್ನು ಆಯ್ಕೆ ಮಾಡಿಕೊಳ್ಳುವುದು ಈ ಕಾರ್ಯಕ್ರಮದ

ಉದ್ದೇಶವಾಗಿರುತ್ತದೆ. ಈ ಯೋಜನೆಯಡಿ ಆಯ್ಕೆಯಾದ ನಗರ ಪ್ರದೇಶದ ಅಭ್ಯರ್ಥಿಗಳಿಗೆ ರೂ. ೧೫೦ ಮತ್ತು ಗ್ರಾಮಾಂತರ ಪ್ರದೇಶದ ಅಭ್ಯರ್ಥಿಗಳಿಗೆ ರೂ. ೩೦೦ ಶಿಷ್ಯವೇತನವನ್ನು ನೀಡಿ ತರಬೇತಿ ನೀಡಲಾಗುತ್ತಿದೆ.

ಈ ಯೋಜನೆಯಡಿಯಲ್ಲಿ ಆಟೋ, ಡ್ರೈವಿಂಗ್, ವಾಹನ ಚಾಲನೆ, ಎಲಘು ಮತ್ತು ಭಾರಿ, ಕಂಪ್ಯೂಟರ್ ತರಬೇತಿ, ವಿವಿಧ ವೃತ್ತಿಗಳ ತರಬೇತಿಯನ್ನು ನೀಡಲಾಗುತ್ತಿದೆ.

**ಬಾಧಕಗಳು**

ಈ ಯೋಜನೆಯಡಿಯಲ್ಲಿ ಕೇವಲ ನಿರುದ್ಯೋಗಿ ಪರಿಶಿಷ್ಟ ಜಾತಿ ಯುವಕ ಯುವತಿಯರಿಗೆ ತರಬೇತಿಯನ್ನು ನೀಡಿ, ಗುರಿಯನ್ನು ಸಾಧಿಸಲಾಗುತ್ತಿದೆಯೇ ಹೊರತು, ಅವರು ಪಡೆದ ತರಬೇತಿ ಬಗ್ಗೆ ಎಷ್ಟು ಯುವಕ ಯುವತಿಯರು ಸ್ವಯಂ ಉದ್ಯೋಗವನ್ನು ಅವಲಂಬಿಸಿದ್ದಾರೆ. ಇದರ ಬಗ್ಗೆ ಮೌಲ್ಯಮಾಪನವಿಲ್ಲ.

**ಸಲಹೆಗಳು**

ಈ ರೀತಿ ತರಬೇತಿ ನೀಡಿದ ಸಂಸ್ಥೆಯವರೇ ಕನಿಷ್ಠ ೧೦ ರಷ್ಟು ವಿದ್ಯಾರ್ಥಿಗಳಿಗೆ ಉದ್ಯೋಗಾವಕಾಶವನ್ನು ಒದಗಿಸುವ ಜವಾಬ್ದಾರಿಯನ್ನು ಹೊರಿಸಬೇಕಾಗಿದೆ. ಹಾಗೂ ಸರ್ಕಾರವು ಸಹ ವಿವಿಧ ವೃತ್ತಿಗಳಿಗೆ ನೇಮಕ ಮಾಡುವಾಗ, ಸಮಾಜ ಕಲ್ಯಾಣ ಇಲಾಖೆ ಹಾಗೂ ಗಿರಿಜನ ಕಲ್ಯಾಣ ಇಲಾಖೆ ವತಿಯಿಂದ ತರಬೇತಿ ಪಡೆದ ನಿರುದ್ಯೋಗಿ ಅಭ್ಯರ್ಥಿಗಳಿಗೆ ಆದ್ಯತೆಯನ್ನು ನೀಡುವ ವ್ಯವಸ್ಥೆಯನ್ನು ಜಾರಿಗೆ ತರಬೇಕಾಗುತ್ತದೆ.

**೭. ಇಂಜನಿಯರಿಂಗ್ ವಿದ್ಯಾರ್ಥಿಗಳಿಗೆ ಸಾಧನ ಸಲಕರಣೆಗಳ ಸರಬರಾಜು**

ತಾಂತ್ರಿಕ ಶಿಕ್ಷಣದಲ್ಲಿ ಅಭ್ಯಾಸ ಮಾಡುತ್ತಿರುವ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳು ಬಡವರಾಗಿದ್ದರೆ, ಅವರ ವಿದ್ಯಾಭ್ಯಾಸಕ್ಕೆ ಬೇಕಾಗುವ ತಾಂತ್ರಿಕ ಸಲಕರಣೆಗಳನ್ನು ಪೂರೈಸುವ ಉದ್ದೇಶದಿಂದ ಈ ಕಾರ್ಯಕ್ರಮವನ್ನು ರೂಪಿಸಲಾಗಿದೆ. ಪದವಿ ಡಿಪ್ಲೊಮಾ ತಿರಗತಿಯಲ್ಲಿ ಓದುತ್ತಿರುವ ಪ್ರಥಮ ವರ್ಷದ ವಿದ್ಯಾರ್ಥಿಗಳಿಗೆ ಡ್ರಾಯಿಂಗ್ ಬೋರ್ಡ್, ಸೈಂಟಿಫಿಕ್ ಕ್ಯಾಲುಕಲೇಟರ್, ತಾಂತ್ರಿಕ ಸಲಕರಣೆಗಳನ್ನು ನೀಡಲಾಗುತ್ತಿದೆ.

ಈ ಕಾರ್ಯಕ್ರಮವನ್ನು ಜಿಲ್ಲಾ ಪಂಚಾಯತಿಯ ಸಮಾಜಿಕ ನ್ಯಾಯ ಸ್ಥಾಯಿ ಸಮಿತಿಯ ಆರ್ಥಿಕ ಅನುಮೋದನೆ ಪಡೆದು ನಿಯಮಾನುಸಾರ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಯವರರು ಖರೀದಿಸಿ ಸಂಬಂಧಪಟ್ಟ ಕಾಲೇಜುಗಳ ಪ್ರಾಂಶುಪಾಲರ ಮೂಲಕ ಸರಬರಾಜು ಮಾಡಲಾಗುತ್ತದೆ.

**ಸಲಹೆ**

ಈ ಯೋಜನೆ ಅಡಿಯಲ್ಲಿ ತಾಂತ್ರಿಕ ಸಲಕರಣೆಗಳನ್ನು ವಿತರಿಸಲು ಪ್ರತಿಯೊಬ್ಬ ವಿದ್ಯಾರ್ಥಿಗೆ ರೂ. ೭೦೦ ಗಳನ್ನು ವ್ಯಯ ಮಾಡಲಾಗುತ್ತಿದೆ. ಇದರಿಂದ ಗುಣಮಟ್ಟದ ಸಲಕರಣೆಗಳನ್ನು ಖರೀದಿಸಲು ಕಷ್ಟವಾಗಿದೆ. ಅದನ್ನು ಸುಧಾರಿಸಲು ಕನಿಷ್ಠ ರೂ. ೧೫೦೦.೦೦ ಕ್ಕೆ ಏರಿಸುವುದು ಸಮಂಜಸವಾಗಿದೆ.

**೮. ಪುಸ್ತಕ ಭಂಡಾರ ಸ್ಥಾಪಿಸುವ ಯೋಜನೆ**

ಈ ಯೋಜನೆಯ ಅಡಿಯಲ್ಲಿ ವೈದ್ಯಕೀಯ, ತಾಂತ್ರಿಕ, ವೃತ್ತಿಪರ ವಿಷಯಗಳಾದ ಕೃಷಿ, ಪಶುವಿಜ್ಞಾನ, ಪಾಲಿಟೆಕ್ನಿಕ್, ಕಾನೂನು ಮತ್ತು ಎಂ.ಬಿ.ಎ. ಕೋರ್ಸ್‌ನಲ್ಲಿ ಓದುತ್ತಿರುವ ಹಾಗೂ ಆ ಕೋರ್ಸ್‌ಗಳಿಗೆ ನಿಗಧಿಪಡಿಸಿರುವ ಪುಸ್ತಕಗಳನ್ನು ಖರೀದಿಸಲು ಸಾಧ್ಯವಾಗದ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಹಾಗೂ ಪ್ರಸ್ತುತ ಇರುವ ಗ್ರಂಥಾಲಯಗಳಲ್ಲಿ ಎಲ್ಲಾ ಬಗೆಯ ಪುಸ್ತಕಗಳು ದೊರೆಯುವುದು ಅಸಾಧ್ಯವಾದ್ದರಿಂದ ಆಯ ಸರ್ಕಾರಿ, ಅನುದಾನಿತ, ಅಂಗೀಕೃತ ಕಾಲೇಜುಗಳಲ್ಲಿ ಈ ಪುಸ್ತಕ ಭಂಡಾರವನ್ನು ಸ್ಥಾಪಿಸುವುದಕ್ಕಾಗಿ, ಪುಸ್ತಕಗಳನ್ನು ಖರೀದಿಸಿ ಸಂಬಂಧಪಟ್ಟ ಕಾಲೇಜುಗಳಿಗೆ ಪೂರೈಸುವ ಯೋಜನೆಯಾಗಿದೆ. ಇಂತಹ ಪುಸ್ತಕಗಳನ್ನು ಕಾಲೇಜುಗಳಲ್ಲಿ ಮೂರು ವರ್ಷಗಳ ಕಾಲ ಪ್ರತ್ಯೇಕವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳ ಪರಾಮರ್ಶನಕ್ಕಾಗಿ ಕಾಯ್ದಿರಿಸಲಾಗಿದೆ. ನಂತರ ಸದರಿ ಪುಸ್ತಕಗಳನ್ನು ಸಾಮಾನ್ಯ ವಿಭಾಗಕ್ಕೆ ವರ್ಗಾಯಿಸಿ ಎಲ್ಲಾ ವಿದ್ಯಾರ್ಥಿಗಳ ಉಪಯೋಗಕ್ಕೆ ಅವಕಾಶ ಮಾಡಿಕೊಡಲಾಗಿದೆ.

ಇದರಲ್ಲಿ ಮೇಲೆ ತಿಳಿಸಿರುವ ಕೋರ್ಸ್‌ಗಳಲ್ಲಿ ಅಭ್ಯಾಸ ಮಾಡುತ್ತಿರುವ ಪಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಮಾತ್ರ ಪ್ರಯೋಜನ ಪಡೆಯಲು ಅರ್ಹರಾಗಿರುತ್ತಾರೆ. ಈ ಯೋಜನೆಯ ವೆಚ್ಚವನ್ನು ೫೦ : ೫೦ ಅನುಪಾತದಲ್ಲಿ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಭರಿಸುತ್ತವೆ. ಈ ಯೋಜನೆಯಡಿಯಲ್ಲಿ ಕರೀದಿಸಿಕದ ಪುಸ್ತಕಗಳನ್ನು ವಿದ್ಯಾರ್ಥಿಗಳಿಗೆ ನೀಡುವುದು, ವಿದ್ಯಾರ್ಥಿಗಳು ಪುಸ್ತಕಗಳ ಪ್ರಯೋಜನ ಪಡೆದ ನಂತರ ಪುಸ್ತಕ ಭಂಡಾರಕ್ಕೆ ಹಿಂದುರಿಗಿಸಬೇಕಾಗಿದೆ. ಈ ಯೋಜನೆಯ ಪ್ರಕಾರ ಪ್ರತಿ ಇಬ್ಬರು ವಿದ್ಯಾರ್ಥಿಗಳಿಗೆ ಒಂದು ಸೆಟ್‌ನಂತೆ ಪುಸ್ತಕ ಖರೀದಿಸಿ ನೀಡುತ್ತಾರೆ. ಈ ಯೋಜನೆಯಡಿಯಲ್ಲಿ ಕೊಳ್ಳುವ ಪುಸ್ತಕಗಳ ಗರಿಷ್ಠ ಮಿತಿ ಈ ಕೆಳಕಂಡಂತಿರುತ್ತದೆ.

೧. ವೈದ್ಯಕೀಯ, ಹೋಮಿಯೋಪಥಿ, ಆಲೋಪತಿ, ಆಯುರ್ವೇದಿಕ್

ತಾಂತ್ರಿಕ ವಿಷಯಗಳು ಎಪ್ರತಿ ಸೆಟ್ ರೂ. ೭೫,೦೦.೦೦

೨. ಪಶುವಿಜ್ಞಾನ ವಿಷಯ ಎಪ್ರತಿ ಸೆಟ್ ರೂ. ೭೫,೦೦.೦೦

೩. ಕೃಷಿ ವಿಜ್ಞಾನ ವಿಷಯ ಎಪ್ರತಿ ಸೆಟ್ ರೂ. ೪೫,೦೦.೦೦

೪. ಕಾನೂನು ಮತ್ತು ಎಂ.ಬಿ.ಎ. ಎಪ್ರತಿ ಸೆಟ್ ರೂ. ೫೦೦೦.೦೦

೫. ವೃತ್ತಿಪರ ವಿಷಯ ಎಪ್ರತಿ ಸೆಟ್ ರೂ. ೨೪೦೦.೦೦

ಈ ಪುಸ್ತಕಗಳನ್ನು ಸುರಕ್ಷಿತವಾಗಿಡಲು ಅಗತ್ಯವಾದ ಕಪಾಟುಗಳನ್ನು ನೀಡುವ ಅವಕಾಶವಿದೆ. ಈ ಯೋಜನೆಯ ಪ್ರಾರಂಭದಲ್ಲಿ ವೈದ್ಯಕೀಯ ಮತ್ತು ಇಂಜಿನಿಯರಿಂಗ್ ವಿಷಯಗಳಿಗೆ ಮಾತ್ರ ಪುಸ್ತಕಗಳನ್ನು ಪೂರೈಸುತ್ತಿತ್ತು. ೧೯೯೧-೯೨ ರಿಂದ ಕೃಷಿ, ಪುರುಸಂಗೋಪನೆ, ವೃತ್ತಿಪರ ವಿಷಯಗಳಿಗೂ ಮುದುವರಿಸಲಾಯಿತು. ೨೦೦೨-೦೩ ಸಾಲಿನಲ್ಲಿ ಈ ಯೋಜನೆಯಡಿಯಲ್ಲಿ ದೇಶದಲ್ಲಿ ರೂ. ೪.೭೭ ಕೋಟಿಗಳನ್ನು ಖರ್ಚು ಮಾಡಲಾಗಿದೆ. ನಂತರ ೨೦೦೩-೦೪ ಸಾಲಿನಲ್ಲಿ ಈ ಯೋಜನೆಯನ್ನು ಮೆಟ್ರಿಕನಂತರದ ವಿದ್ಯಾರ್ಥಿ ವೇತನದ ಯೋಜನೆಯಲ್ಲಿ ವಿಲೀನಗೊಳಿಸಲಾಗಿದೆ.

ಈ ಯೋಜನೆಯನ್ನು ಆಯಾ ಜಿಲ್ಲೆಯ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಮತ್ತು

ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್‌ರವರು ಅನುಷ್ಠಾನಗೊಳಿಸುತ್ತಿದ್ದಾರೆ. ಪುಸ್ತಕಗಳನ್ನು ಖರೀದಿಸಲು ಒಂದು ಸಮಿತಿಯು ಸಹ ಇರುತ್ತದೆ. ಲಿಂಕ್ ಡಾಕ್ಯುಮಂಟ್‌ನಲ್ಲಿ ನಿಗಧಿತ ಅನುದಾನಕ್ಕೆ ಅನುಗುಣವಾಗಿ ಜಿಲ್ಲೆಯಲ್ಲಿರುವ ಕಾಲೇಜುಗಳಿಗೆ ಪುಸ್ತಕಗಳನ್ನು ಖರೀದಿ ಮಾಡಿ ವಿತರಣೆ ಮಾಡುವ ಮೊದಲು, ಜಿಲ್ಲಾ ಪಂಚಾಯತ್‌ನ ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯಿಂದ ಅನುಮತಿ ಪಡೆಯಬೇಕಾಗಿದೆ.

**ಬಾಧಕಗಳು**

ಈ ಯೋಜನೆಯು ಬಹಳ ಉತ್ತಮವಾದ ಯೋಜನೆಯಾಗಿರುತ್ತದೆ. ಆದರೆ ಇದನ್ನು ಅನುಷ್ಠಾನಗೊಳಿಸಲು ಇರುವ ತೊಂದರೆ ಏನೆಂದರೆ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಪುಸ್ತಕಗನ್ನು ಖರೀದಿಸಲು ಅನುದಾನ ಬಿಡುಗಡೆಯಾಗುತ್ತಿಲ್ಲ.

**ಸಲಹೆಗಳು**

ಈ ಯೋಜನೆ ಬಹಳ ಉಪಯುಕ್ತ ಯೋಜನೆಯಾಗಿದೆ. ಇದನ್ನು ಮೆಟ್ರಿಕ್ ನಂತರದ ಎಲ್ಲಾ ಕೋರ್ಸ್‌ಗಳಿಗೆ ವಿಸ್ತರಿಸಿದರೆ ಅನುಕೂಲವಾಗುತ್ತದೆ. ಮೇಲೆ ತಿಳಿಸಿರುವಂತೆ ವಿದ್ಯಾರ್ಥಿಗಳ ಸಂಖ್ಯಾ ಬಲಕ್ಕೆ ಅನುಗುಣವಾಗಿ ಪುಸ್ತಕಗಳನ್ನು ಖೀದಿಸಿ ವಿತರಿಸಿದರೆ, ಈ ಯೋಜನೆ ಪೂರ್ಣ ಫಲಪ್ರದವಾಗುತ್ತದೆ. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು, ಕಲೇಜುಗಳಿಗೆ ಬೇಟಿ ನೀಡಿ ವಿದ್ಯಾರ್ಥಿಗಳಿಗೆ ಸಮರ್ಪಕ ರೀತಿಯಲ್ಲಿ ಪುಸ್ತಕ ವಿತರಣೆಯಾಗುತ್ತಿರುವುದನ್ನು ಪಿರಶೀಲಿಸಿದಲ್ಲಿ, ಈ ಯೋಜನೆಯ ದುರುಪಯೋಗ ಪಡಿಸಿಕೊಳ್ಳುವುದನ್ನು ತಡೆಗಟ್ಟಿದಂತಾಗುತ್ತದೆ.

**ಅಧ್ಯಯನ ಪ್ರವಾಸಕ್ಕೆ ನೆರವು**

ತಾಂತ್ರಿಕ ಮತ್ತು ವೃತ್ತಿಪರ ವಿಷಯಗಳಲ್ಲಿ ಅಧ್ಯಯನ ಮಾಡುತ್ತಿರುವ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಪ್ರವಾಸ ಕಡ್ಡಾಯವಾಗಿದ್ದರೆ ಅಂತಹ ವಿದ್ಯಾರ್ಥಿಗಳಿಗೆ ಪ್ರವಾಸ ಕೈಗೊಳ್ಳುವುದು ಅರ್ಥಿಕವಾಗಿ ಕಷ್ಟವಾಗಬಹುದು. ಆದ್ದರಿಂದ ಈ ಯೋಜನೆಯಲ್ಲಿ ಪ್ರತಿ ವಿದ್ಯಾರ್ಥಿಗೆ ಅಧ್ಯಯನ ಪ್ರವಾಸ ವೆಚ್ಚವಾಗಿ ರೂ. ೧೦೦೦.೦೦ ಮೀರದಂತೆ ನೀಡಲಾಗುವುದು. ಪರಿಶಿಷ್ಟ ಜಾತಿಗೆ ಸೇರಿದ ವಿದ್ಯಾರ್ಥಿಗಳು ತಮ್ಮ ಅಧ್ಯಯನ ಪ್ರವಾಸದ ವಿವರಗಳನ್ನು ವಿದ್ಯಾಸಂಸ್ಥೆಯ ಮುಖ್ಯಸ್ಥರ ಮೂಲಕ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ಮಂಜೂರಾತಿಗಾಗಿ ಕಳುಹಿಸಬೇಕು. ಪ್ರವಾಸಕದ ನಂತರ ಪ್ರವಾಸ ಕೈಗೊಂಡ ವಿದ್ಯಾರ್ಥಿಗಳು ಅ ಬಗ್ಗೆ ವಿದ್ಯಾಸಂಸ್ಥೆಯ ಮುಖ್ಯಸ್ಥರಿಂದ ದೃಢೀಕರಿಸಿದ ವೆಚ್ಚದ ಪಟ್ಟಿಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ಕಳುಹಿಸಬೇಕು.

**ಪರೀಕ್ಷಾ ಪೂರ್ವ ತರಬೇತಿ ಕೇಂದ್ರ**

ರಾಜ್ಯ ಹಾಗೂ ಕೇಂದ್ರ ಸರ್ಕಾರದ ಲೋಕಸೇವಾ ಆಯೋಗಗಳು ಮತ್ತು ಇತರೆ ನೇಮಕಾತಿ ಆಯೋಗಗಳು ನಡೆಸುವ ಪರೀಕ್ಷೆ ತೆಗೆದು ಕೊಳ್ಳುವ ಪರಿಶಿಷ್ಟ ಜಾತಿ ಅಭ್ಯರ್ಥಿಗಳಿಗೆ ಪರೀಕ್ಷಾ ಪೂರ್ವ ಕೇಂದ್ರಗಳಲ್ಲಿ ತರಬೇತಿ ನೀಡಲು ಬೆಂಗಳೂರಿನಲ್ಲಿ ತರಬೇತಿ ಕೇಂದ್ರವನ್ನು ನಡೆಸಲಾಗುತ್ತಿದೆ. ಐ.ಎ.ಎಸ್., ಐ.ಸಿ.ಎಸ್., ಸಿ.ಇ.ಟಿ., ಹಾಗೂ ಇತರ ಸ್ಪರ್ಧಾತ್ಮಕ ಪರೀಕ್ಷೆಗೆ

ಕುಳಿತುಕೊಳ್ಳುವ ಪರಿಶಿಷ್ಟ ಜಾತಿ ಅಭ್ಯರ್ಥಿಗಳಿಗೆ ತರಬೇತಿ ನೀಡಲು ಪರೀಕ್ಷಾ ಪೂರ್ವ ತರಬೇತಿ ಶಿಬಿರ ಕಾರ್ಯ ನಿರ್ವಹಿಸುತ್ತಿದೆ.

ಬ್ಯಾಂಕಿಂಗ್ ನೇಮಕಾತಿ ಪ್ರಾಧಿಕಾರ, ರೈಲ್ವೆ ನೇಮಕಾತಿ ಪ್ರಾಧಿಕಾರ ಹಾಗೂ ಇತರ ಪ್ರಾಧಿಕಾರಗಳು ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗೆ ತರಬೇತಿ ನೀಡಲಾಗುತ್ತದೆ.

ಉದ್ಯೋಗ ಹಾಗೂ ತರಬೇತಿ ನೆರವಿನ ಯೋಜನೆಗಳು

ವಿದ್ಯಾಭ್ಯಾಸ ಪ್ರಾಥಮಿಕ ಅವಶ್ಯಕತೆಯಾದರೆ ಉದ್ಯೋಗನಂತರದ ಅಗತ್ಯವಾಗಿದೆ. ಸರ್ಕಾರ ಪರಿಶಿಷ್ಟ ಜಾತಿ ಜನರಿಗೆ ವಿದ್ಯಾಭ್ಯಾಸಕ್ಕೆ ಹೇಗೆ ನೆರವು ನೀಡುತ್ತದೆಯೋ ಹಾಗೆಯೇ ನಿರುದ್ಯೋಗ ನಿವಾರಣೆಗಾಗಿಯೂ ಹಲವಾರು ಯೋಜನೆಗಳ ಮೂಲಕ ಪ್ರಯತ್ನಿಸುತ್ತಿದೆ.

**ತರಬೇತಿ**

ಪರಿಶಿಷ್ಟ ಜಾತಿಗೆ ಸೇರಿದ ವಿದ್ಯಾವಂತ ನೀರುದ್ಯೋಗಿಯುವ ಜನರಿಗೆ ಉದ್ಯೋಗ ಸ್ವಯಂ ಉದ್ದೇಶ ಕೈಗೊಳ್ಳಲು ನೆರವಾಗುವಂತೆ ವಿವಿಧ ವಿಭಾಗಗಳಲ್ಲಿ ತರಬೇತಿಯನ್ನು ನೀಡಲಾಗುತ್ತಿದೆ.

**ನವಚೇತನ**

ಈ ಯೋಜನೆಯಡಿ ಪರಿಶಿಷ್ಟ ಜಾತಿಯ ವಿದ್ಯಾವಂತೆ ನಿರುದ್ಯೋಗ ಯುವಕರಿಗೆ ಮಾಹಿತಿ ತಂತ್ರಜ್ಞಾನ, ವೃತ್ತಿಪರ ಕೌಶಃಲ್ಯಗಳನ್ನು ಹೆಚ್ಚಿಸುವ ವಿವಿಧ ಟ್ರೇಡ್‌ಗಳಲ್ಲಿ ತರಬೇತಿ ನೀಡಲಾಗುತ್ತಿದೆ. ಇದರಿಂದ ಅವರಿಗೆ ಸೂಕ್ತ ಉದ್ಯೋಗ ದೊರಕಿಸಿಕೊಳ್ಳುವ ಅಥವಾ ಸ್ವಯಂ ಉದ್ಯೋಗ ಕೈಗೊಳ್ಳುವಲ್ಲಿ ಸಹಾಯವಾಗುವುದೆಂದು ಭಾವಿಸಲಾಗಿದೆ. ಈ ತರಬೇತಿಯಲ್ಲಿ ಹಲವಾರು ಸಾರ್ವಜನಿಕ ವಲಯದ ಉದ್ಯಮಗಳು ಖಾಸಗಿ ಸಂಸ್ಥೆಗಳು ಪಾಲುಗೊಳ್ಳುತ್ತಿವೆ.

ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ೧೯೯೯-೨೦೦೦ ರಿಂದ ೨೦೦೩-೪ ರವರೆಗೆ ೮೦ ಅಭ್ಯರ್ಥಿಗಳಿಗೆ ವಿವಿಧ ಟ್ರೇಡ್‌ಗಳಲ್ಲಿ ನವಚೇತನ ಕಾರ್ಯಕ್ರಮದಡಿ ತರಬೇತಿ ನೀಡಲಾಗಿದೆ. ಇವರುಗಳು ಸ್ವಯಂ ಉದ್ಯೋಗ ಹೊಂದುವಲ್ಲಿ ಸದರಿ ಕಾರ್ಯಕ್ರಮ ಉಪಯುಕ್ತವಾಗಿದೆ.

**ಬೆರಳಚ್ಚು ಹಾಗು ಶೀಘ್ರ ಲಿಪಿ ತರಬೇತಿ**

ಬೆರಳಚ್ಚು ಹಾಗು ಶೀಘ್ರ ಲಿಪಿಯಲ್ಲಿ ತರಬೇತಿ ಪಡೆಯಲು ಇಚ್ಛಿಸುವ ಪರಿಶಿಷ್ಟ ಜಾತಿಗೆ ಸೇರಿದಂತಹ ಅಭ್ಯರ್ಥಿಗಳಿಗೆ ಸಮಾಜ ಕಲ್ಯಾಣ ಇಲಾಖೆಯಿಂದ ಆರ್ಥಿಕ ನೆರವು ಒದಗಿಸಲಾಗುವುದು.

೧. ಬೆರಳಚ್ಚು ತರಬೇತಿಗೆ ಪ್ರತಿ ತಿಂಗಳು ರೂ.೫೦.೦೦

೨. ಶೀಘ್ರಲಿಪಿ ಎಸ್.ಎಸ್.ಎಲ್.ಸಿ. ಆದವರಿಗೆ ರೂ. ೭೫.೦೦

೩. ಶೀಘ್ರಲಿಪಿ ಎಪದವಿ ಓದಿದವರಿಗೆಃ ರೂ. ೨೦೦.೦೦

ಇದಲ್ಲದೆ ನಿಗದಿತ ದರದಲ್ಲಿ ವಾಣಿಜ್ಯ ಸಂಸ್ಥೆಗಳಿಗೆ ತರಬೇಿ ಶುಲ್ಕವನ್ನು ಸಹ ನೀಡಲಾಗುತ್ತದೆ.

**ಅರ್ಹತೆ**

ಅ. ಅಭ್ಯರ್ಥಿಯು ಪರಿಶಿಷ್ಟ ಜಾತಿಗೆ ಸೇರಿದವನಾಗಿರಬೇಕು.

ಆ. ಶಾಲಾ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವವರು ಈ ತರಬೇತಿಗೆ

ಅರ್ಹರಾಗುವುದಿಲ್ಲ.

ಇ. ತರಬೇತಿ ಪಡೆಯಲಿಚ್ಛಿಸುವ ಅಭ್ಯರ್ಥಿಯು ೧೮ ವರ್ಷಕ್ಕೆ ಮೇಲ್ಪಟ್ಟು ೩೦ ವರ್ಷಕ್ಕೆ ಒಳಗಿರಬೇಕು.

ಈ. ಅಭ್ಯರ್ಥಿಯ ಪೋಷಕರಃಪಾಲಕರ ವಾರ್ಷಿಕ ಆದಾಯ ೨೪,೦೦೦.೦೦ ರೂಪಾಯಿಗಳಿಗಿಂತ ಕಡಿಮೆಯಿರಬೇಕು. ಬಾದಕಗಳು ಮತ್ತು ಸಲಹೆಃ ಸದರಿ ಯೋಜನೆಯು ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಅನುಷ್ಠಾನಗೊಂಡಿರುವುದಿಲ್ಲ. ಕಾರಣ ಇಲ್ಲಿ ತರಬೇತಿ ನೀಡುವ ತರಬೇತಿ ಸಂಸ್ಥೆಗಳಿರುವುದಿಲ್ಲ. ಇದರಿಂದಾಗಿ ಇಲ್ಲಿನ ಅರ್ಹ ಅಭ್ಯರ್ಥಿಗಳು ಆರ್ಥಿಕ ಸಮಸ್ಯೆಗಳಿಂದ ಇಂತಹ ತರಬೇತಿಯಿಂದ ವಂಚಿತರಾಗಬೇಕಾಗುತ್ತದೆ. ಆದ್ದರಿಂದ ಸರ್ಕಾರವೇ ಇಂತಹ ತರಬೇತಿ ಸಂಸ್ಥೆಗಳನ್ನು ಸ್ಥಳೀಯವಾಗಿ ಸ್ಥಾಪಿಸಬೇಕು. ಇಲ್ಲವೆ ಎಲ್ಲಾ ಸೌಲಭ್ಯಗಳನ್ನು ನೀಡಿ ವಸತಿ ಸಹಿತ ತರಬೇತಿ ನೀಡುವುದು ಸೂಕ್ತವಾಗಿದೆ.

**ಮಹಿಳೆಯರಿಗೆ ವೃತ್ತಿ ಶಿಕ್ಷಣ ತರಬೇತಿ**

ಪರಿಶಿಷ್ಟ ಜಾತಿಯ ಮಹಿಳೆಯಂಗೆ ಹೊಲಿಗೆ ತರಬೇತಿ ನೀಡುವ ಉದ್ದೇಶದಿಂದ ರಾಜ್ಯಾದ್ಯಂತ ೬೧ ಹೊಲಿಗೆ ತರಬೇತಿ ಕೇಂದ್ರಗಳನ್ನು ನಡೆಸಲಾಗುತ್ತಿದೆ.

**ಸೌಲಭ್ಯಗಳು**

ಅ. ಹೊಲಿಗೆ ತರಬೇತಿ ಕೇಂದ್ರದಲ್ಲಿ ತರಬೇತಿ ಪಡೆಯುತ್ತಿರುವವರಿಗೆ ಪ್ರತಿ ತಿಂಗಳು ರೂ. ೧೫೦.೦೦ ಗಳನ್ನು ಶಿಷ್ಯವೇತನವನ್ನಾಗಿ ನೀಡಲಾಗುತ್ತಿದೆ.

ಆ. ಇತರ ತರಬೇತಿ ಕೇಂದ್ರದಲ್ಲಿ ತರಬೇತಿ ಪಡೆಯುತ್ತಿರುವವರಿಗೆ ಪ್ರತಿ ತಿಂಗಳಿಗೆ ರೂ. ೩೦೦.೦೦ ರಂತೆ ಶಿಷ್ಯವೇತನ ನೀಡಲಾಗುತ್ತಿದೆ.

**ಹೊಲಿಗೆ ಯಂತ್ರ ಸರಬರಾಜು**

ಹೊಲಿಗೆ ತರಬೇತಿ ಪೂರ್ಣಗೊಂಡ ನಂತರ ತಾಂತ್ರಿಕ ಶಿಕ್ಷಣ ಇಲಾಖೆಯ ಭೋಧಕ ವರ್ಗದವರ ಸಹಾಯದಿಂದ ಇಲಾಖಾವತಿಯಿಂದ ಪರೀಕ್ಷೆ ನಡೆಸಿ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದಂತಹ ಮಹಿಳೆಯರಿಗೆ ಪ್ರಮಾಣ ಪತ್ರ ಹಾಗೂ ಒಂದು ಹೊಲಿಗೆ ಯಂತ್ರ ಉಚಿತವಾಗಿ ನೀಡಲಾಗುವುದು, ಇದರಿಂದ ತಪಬೇತಿ ಹೊಂದಿದ ಮಹಿಳೆಯರು ಸ್ವತಂತ್ರವಾಗಿ ಬಟ್ಟೆ ಹೊಲಿದು ಜೀವನ ನಡೆಸಲು ಸಾಧ್ಯವಾಗುತ್ತದೆ.

ಹಗಂಬೊಮ್ಮನಹಳ್ಳಿ ತಾಲೂಕಿನಲ್ಲಿ ಇಂತಹ ಯಾವುದೇ ತರಬೇತಿ ಕೇಂದ್ರಗಳು ಇಲಾಖೆಯಿಂದ ನಡೆಯುತ್ತಿರುವುದಿಲ್ಲ. ಹಾಗಿದ್ದರೂ ಹಗಂಬೊಮ್ಮನಹಳ್ಳಿಯಲ್ಲಿ ೩೦ ಜನರಿಗೆ ಹೊಲಿಗೆ ತರಬೇತಿ ಹಾಗೂ ಲಂಬಾಣಿ ಉಡುಪು ತಯಾರಿಕೆಯಲ್ಲಿ ಸ್ವಯಂ ಸೇವಾ ಸಂಸ್ಥೆಗಳಿಂದ ತರಬೇತಿ ನೀಡಿ ಅವರುಗಳು ಸ್ವಯಂ ಉದ್ಯೋಗಕ್ಕೆ ದಾರಿ ಮಾಡಿಕೊಡಲಾಗಿದೆ. ಅಂತೆಯೇ ಮಾದೂರು ಗ್ರಾಮದ ಮಹಾಸತಿ ಮಹಿಳಾ ಸ್ವ ಸಹಾಯ ಸಂಘದ ೧೨ ಜನ ಸದಸ್ಯರಿಗೆ ೧೦ ಹೊಲಿಗೆ ಯಂತ್ರ ಹಾಗೂ ೧ ಜಿಗ್ ಜಾಗ್ ಮಿಷನ್ ಕೊಡಿಸಲಾಗಿದೆ. ಇದರಿಂದ ಅವರುಗಳು ಸ್ವಯಂ ದುಡಿಮೆ ಮಾಡಿ ಸ್ವತಂತ್ರ ಜೀವನ ಮಾಡಲು ಅವಕಾಶ ಮಾಡಿಕೊಡಲಾಗಿದೆ.

**ಸ್ವಯ ಉದ್ಯೋಗ ತರಬೇತಿ ಕಾರ್ಯಕ್ರಮ**

ಪರಿಶಿಷ್ಟ ಜಾತಿಗೆ ಸೇರಿದ ನಿರುದ್ಯೋಗಿ ಯುವ ಜನರು ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲವಾಗದಂತೆ ಜಿಲ್ಲಾ ವಲಯಗಳ ಯೋಜನೆಯಡಿಯಲ್ಲಿ ಲಘು ವಾಹನ ಚಾಲನೆ ಮತ್ತು ಆಟೋರಿಕ್ಷಾ ಚಾಲನೆಯಲ್ಲಿ ೩ ತಿಂಗಳ ಕಾಲ ತರಬೇತಿ ನೀಡಿ ನಂತರ ವಾಹನ ನಡೆಸಲು ಪರವಾನಿಗೆ ಸಹ ಒದಗಿಸಲಾಗುತ್ತಿದೆ.

ತರಬೇತಿಯ ಅವಧೀಯಲ್ಲಿ ನಗರ ಪ್ರದೇಶದ ಅಭ್ಯಾರ್ಥಿಗಳಿಗೂ ರೂ. ೧೫೦.೦೦ ಹಾಗೂ ಗ್ರಾಮಾಂತರ ಪ್ರದೇಶದ ಅಭ್ಯಾರ್ಥಿಗಳಿಗೆ ರೂ. ೩೦೦.೦೦ ಗಳನ್ನು ಶಿಷ್ಯ ವೇತನವಾಗಿ ನೀಡಲಾಗುತ್ತದೆ. ತರಬೇತಿಗೆ ನಿಗದಿಪಡಿಸಿದ ಶುಲ್ಕವನ್ನು ಸಹ ಸಮಾಜ ಕಲ್ಯಾಣ ಇಲಾಖೆಯೇ ಭರಿಸುತ್ತದೆ.

ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ೨೦೦೧-೨೦೦೨ ರಿಂದ ಇಲ್ಲಿಯವರೆಗೆ ೩೫ ಅಭ್ಯರ್ಥಿಗಳಿಗೆ ಲಘುವಾಹನ ತರಬೇತಿಯನ್ನು ನೀಡಲಾಗಿದೆ. ೫ ಜನರಿಗೆ ಬಾರಿವಾಹನ ಚಾಲನೆ ತರಬೇತಿ ನೀಡಲಾಇಗದೆ. ಇವರೆಲ್ಲರಿಗೂ ಇಲಾಖೆವತಿಯಿಂದ ತರಬೇತಿಯ ಅವಧಿಯಲ್ಲಿ ಸ್ಟೈಫಂಡ್ ನೀಡಲಾಗಿದೆ. ಅಂತೆಯೇ ಅವರುಗಳಿಗೆ ಲೈಸನ್ಸ್ ನೀಡಿ ಅವರುಗಳು ಸ್ವಯಂ ಉದ್ಯೋಗ ಕಲ್ಪಿಸಿಕೊಡುವಲ್ಲಿ ನೆರವಾಗಿದೆ.

**ಪರಿಶಿಷ್ಟ ಜಾತಿ ಮಕ್ಕಳಿಗೆ ಸೈನಿಕ ಶಾಲೆಯ ಪ್ರವೇಶಕ್ಕೆ ವಿಶೇಷ ತರಬೇತಿ**

ಬೆಳಗಾವಿ : ಬಿಜಾಪುರದಲ್ಲಿರುವ ಸೈನಿಕ ಶಾಲೆ ಹಾಗೂ ಜವಾಹರ ನವೋದಯ ವಸತಿ ಶಾಲೆಗಳಿಗೆ ಪ್ರತಿವರ್ಷ ೬ ನೇ ತರಗತಿಗೆ ವಿದ್ಯಾರ್ಥಿಗಳನ್ನು ಪ್ರವೇಶ ಪರೀಕ್ಷೆಯ ಮೂಲಕ ಆಯ್ಕೆ ಮಾಡಿಕೊಳ್ಳುತ್ತಾರೆ. ಸದರಿ ಶಾಲೆಗಳಲ್ಲಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಕಾಯ್ದಿರಿಸಿದ ಸ್ಥಳಗಳನ್ನು ಪಡೆಯಲು ತಕ್ಕ ಅರ್ಹತೆ ಹೊಂದುವ ಉದ್ದೇಶದಿಂದ ಸದರಿ ಸೈನಿಕ ತರಬೇತಿ ಶಾಲೆಯನ್ನು ತೆರೆಯಲಾಗಿದೆ. ಬೆಳಗಾವಿ ಜಿಲ್ಲೆಯಲ್ಲಿ ಮಾತ್ರ ಈ ಕಾರ್ಯಕ್ರಮವನ್ನು ವ್ಯವಸ್ಥೆಗೊಳಿಸಲಾಗಿದೆ. ಸುಮಾರು ೫೦ ಗಂಡು ಮಕ್ಕಳಿಗೆ ಪ್ರವೇಶ ಪೂರ್ವ ತರಬೇತಿಯನ್ನು ನೀಡಲು ಉದ್ದೇಶಿಸಿದೆ. ಈ ಪ್ರವೇಶ ಪೂರ್ವ ತರಬೇತಿ ಶಾಲೆಗೆ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಂದ ಅರ್ಜಿಯನ್ನು ರಾಜ್ಯಾದಾದ್ಯಂತ ಆಹ್ವಾನಿಸಿ ಪ್ರವೇಶ ಪರೀಕ್ಷೆ ಜರುಗಿಸಿ, ಹೆಚ್ಚಿನ ಅಂಶಗಳನ್ನು ಪಡೆದಂತಹ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿಕೊಳ್ಳಲಾಗುವುದು. ಪ್ರವೇಶ ಪಡೆದ ಈ ಮಕ್ಕಳಿಗೆ ಶಿಕ್ಷಣ ಇಲಾಖೆಯ ೫ ನೇ ತರಗತಿಯ ಪಠ್ಯಕ್ರಮದಂತೆ ಭೋಧನೆಯನ್ನು ಮತ್ತು ಪ್ರವೇಶ ಪರೀಕ್ಷೆಯ ಪಠ್ಯಕ್ರಮದ ವಿಷಯಗಳಿಗೆ ವಿಶೇಷ ಭೋಧಕರಿಂದ ಒಂದು ವರ್ಷದ ಅವಧೀಗೆ ಕಲಿಸಲಾಗುವುದು. ಈ ತರಬೇತಿಗೆ ಹಾಜರಾಗುವ ಮಕ್ಕಳಿಗೆ ಬೆಳಗ್ಗಾ ಹಾಲು, ಉಪಹಾರ, ಚಹಾ, ಮಧ್ಯಾಹ್ನದ ಊಟ, ಸಂಜೆ ಚಹಾ ಮತ್ತು ರಾತ್ರಿ ಊಟ ಮುಂತಾದ ನಿಯಮಿತ ಉಟೋಪಚಾರಗಳನನು ನೀಡಲಾಗುವುದು. ಇದರೊಂದಿಗೆ ನವೋದಯ ಶಾಲೆಯ ಪರೀಕ್ಷೆಯ ತಯಾರಿಗೆ ಬೇಕಾದ ಪಠ್ಯವನ್ನು ಭೋಧಿಸಲಾಗುತ್ತದೆ. ಸದರಿ ತರಬೇತಿಗೆ ತಗಲುವ ಖರ್ಚನ್ನು ಭರಿಸುವ ಸಲುವಾಗಿ ರಾಜ್ಯಸರ್ಕಾರವು ನೀಡಿರುವ ರೂ. ೩.೫೬ ಲಕ್ಷ ರೂಗಳ ಅನುದಾನವನ್ನು ಬಳಸಿಕೊಳ್ಳುವುದಲ್ಲದೆ, ವಿವಿಧ ಪುರಸಭೆಗಳಿಂದ ರೂ. ೨.೨೯ ಲಕ್ಷ ವಂತಿಗೆ ಹಣವನ್ನು ಸಂಗ್ರಹಿಸುವ ಉದ್ದೇಶ

ಹೊಂದಲಾಗಿದೆ.

**ಸಾಮಾಜಿಕ ಆರ್ಥಿಕ ನೆರವಿನ ಯೋಜನೆಗಳು**

ಪರಿಶಿಷ್ಟ ಜಾತಿಯ ಜನರ ಶ್ರೇಯೋಭಿವೃದ್ಧಿಗಾಗಿ ಸರ್ಕಾರವು ಶೈಕ್ಷಣಿಕ ನೆರವಿನ ಯೋಜನೆಗಳ ಜೊತೆಗೆ ಸಾಮಾಜಿಕ ಅಭಿವೃದ್ಧಿ ಹಾಗೂ ಆರ್ಥಿಕ ನೆರವು ನೀಡಿ ಈ ಜನಾಂಗವನ್ನು ಸಮಾಜದ ಮುಖ್ಯ ವಾಹಿನಿಗೆ ತರುವ ಉದ್ದೇಶದಿಂದ ಇನ್ನು ಹಲವಾರು ಮಹತ್ವದ ಕಾರ್ಯಕ್ರಮಗಳನ್ನು ಜಾರಿಗೆ ತಂದಿದೆ. ಡಾ॥ ಬಿ.ಆರ್. ಅಂಬೇಡ್ಕರ ಜನ್ಮ ಶತಮಾನೋತ್ಸವವನ್ನು ಆಚರಿಸುವ ಅಂಗವಾಗಿ ೧೯೯೩ ೯೪ ನೇ ಸಾಲಿನಲ್ಲಿ ಡಾ॥ ಬಿ.ಆರ್.ಅಂಬೇಡ್ಕರ್ ಸಂಶೋಧನಾ ಸಂಸ್ಥೆಯನ್ನು ಜಾರಿಗೆ ತಂದಿದೆ. ಇದು ಪರಿಶಿಷ್ಟ ಜಾತಿ ಜನರ ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಸಂಸ್ಥೆಗಳ ಕಾರ್ಯ ಚಟುವಟಿಕೆಗಳ ಬಗ್ಗೆ ಸಮೀಕ್ಷೆ ನಡೆಸಿ ಎಷ್ಟು ಕುಟುಂಬಗಳು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿವೆ. ಹಾಗೂ ಅವುಗಳ ಸಾಮಾಜಿಕ ಸ್ಥಾನಮಾನ ಹೇಗಿದೆ ಎಂಬುದನ್ನು ಅಭ್ಯಸಿಸುವುದು ಮತ್ತು ಅನುಯುಕ್ತ ಯೋಜನೆಗಳನ್ನು ಮಾರ್ಪಡಿಸಿ ಉಪಯುಕ್ತವಾಗಬಲ್ಲ ಹೊಸ ಯೋಜನೆ ರೂಪಿಸುವುದು ಮುಂತಾದ ವಿಷಯಗಳನ್ನು ಕುರಿತಂತೆ ಈ ಸಂಶೋಧನಾ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುವುದು ಅಂಬೇಡ್ಕರ್ ಸಂಶೋಧನಾ ಸಂಸ್ಥೆಯ ಸ್ಥಾಪನೆಯ ಉದ್ದೇಶ.

ಅಲ್ಲದೆ ಈ ಸಂಸ್ಥೆಯ ಮೂಲಕ ಪ್ರತ್ಯೇಕ ಪುಸ್ತಕ ಭಂಡಾರ ವ್ಯವಸ್ಥೆಗೊಳಿಸಲಾಗುತ್ತದೆ. ವಿವಿಧ ವಿಷಯಗಳ ಬಗ್ಗೆ ಸಮ್ಮೇಳನ ಹಾಗೂ ವಿಚಾರ ಸಂಕಿರಣ ನಡೆಸುವುದು. ಸಮಾಜ ಕಲ್ಯಾಣ ಇಲಾಖೆಯ ಯೋಜನೆಗಳನ್ನು ಕುರಿತು ಅಧ್ಯಯನ ನಡೆಸುವು. ಹಾಗೂ ಇಲಾಖೆಯ ಕಾರ್ಯ ಚಟುವಟಿಕೆಯ ಮೌಲ್ಯ ಮಾಪನ ಮಾಡುವುದು ಸಹ ಈ ಸಂಸ್ಥೆಯ ಉದ್ದೇಶಗಳಲ್ಲಿ ಸೇರಿದೆ.

**ರಾಜ್ಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಆಯೋಗ**

ಭಾರತ ಸಂವಿಧಾನದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ಮೂಲಭೂತವಾಗಿ ನೀಡಬೇಕಾದ ಸೌಲಭ್ಯ ಹಾಗೂ ರಕ್ಷಣೆಗಳನ್ನು ವ್ಯವಸ್ಥಿತ ರೀತಿಯಲ್ಲಿ ನೀಡಲು ಕರ್ನಾಟಕ ಸರ್ಕಾರವು ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ ಆಯೋಗವನ್ನು ರಚಿಸಿದೆ. ಸಾಮಾಜಿಕ, ಶೈಕ್ಷಣಿಕ, ಮತ್ತು ಆರ್ಥಿಕ ಹಿಂದುಳಿದಿರುವಿಕೆಯು ಅಮೂಲಾಗ್ರವಾಗಿ ಅಸ್ಪೃಶ್ಯತೆ ಆಚರಣೆಯಿಂದ ಈ ವರ್ಗದವರು ಸಮಾಜದ ಮುಖ್ಯ ವಾಹಿನಿಯಿಂದ ಪ್ರತ್ಯೇಖವಾಗಿರುವುದು ಸ್ಪಷ್ಟವಾಗಿರುತ್ತದೆ. ಆದುದರಿಂದ ಸಂವಿಧಾನವನ್ನು ರಚಿಸಿದ ಗಣ್ಯ ವ್ಯಕ್ತಿಗಳು ಪರಿಶಿಷ್ಟ ಜಾತಿ ; ಪರಿಶಿಷ್ಟ ವರ್ಗದವರಿಗೆ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯನ್ನು ತೆಗೆದುಕೊಳ್ಳಲು ದೃಢವಾದ ಮಂಡಿಸಿರುವುದಲ್ಲದೆ ಸಂವಿಧಾನದ ಅನುಚ್ಛೇದ ೩೪೧ ಮತ್ತು ೩೪೨ ರಲ್ಲಿ ಅಳವಡಿಸಲಾಗಿದೆ. ಮೇಲೆ ತಿಳಿಸಿರುವ ಅಂಶಗಲ ಆಧಾರದ ಮೇಲೆ ರಾಜ್ಯ ಪರಿಶಿಷ್ಟ ಜಾತಿ ; ಪರಿಶಿಷ್ಟ ವರ್ಗಗಳ ಆಯೋಗ ರಚಿಸಿದ್ದು ಪರಿಶಿಷ್ಟ ಜಾತಿ ; ಪರಿಶಿಷ್ಟ ವರ್ಗದವರ ಸರ್ವತೋಮುಖ ಅಭಿವೃದ್ಧಿ, ರಕ್ಷಣೆ ಮತ್ತು ತೀವ್ರ ರೀತಿಯ ಯೋಜನೆಗಳ ಅನುಷ್ಠಾನ, ಸರಿಸಮಾನ ಮೀಸಲಾತಿ, ಸರ್ಕಾರದ ನೀತಿ ನಿಯಮದಲ್ಲಿ

ಭಾಗವಹಿಸಲು ಸಂವಿಧಾನದಲ್ಲಿ ಸ್ಪಷ್ಟ ಗುರಿ ಮತ್ತು ನಿರ್ದೇಶನವನ್ನು ಹೊಂದಿರುತ್ತದೆ. ಈ ರೀತಿ ನೀಡಬೇಕಾದ ರಕ್ಷಣೆಗಳನ್ನು ಸಂವಿಧಾನದ ರಾಜ್ಯ ನಿರ್ದೇಶಕ ತತ್ವಗಳ ಅನಚ್ಛೇದ ೪೬ ರಲ್ಲಿ ಸ್ಪಷ್ಟವಾಗಿ ಅವಕಾಶ ಮಾಡಲಾಗಿದ್ದು, ಇದರಲ್ಲಿ ಅಭಿವೃದ್ಧಿ ಮತ್ತು ನಿಯಂತ್ರಿಕ ದೋರಣೆಗಳು ಸೇರಿರುತ್ತವೆ.

**ಅನುಚ್ಛೇದದ ವಿವರಣೆ ಈ ರೀತಿ ಇರುತ್ತದೆ.**

ರಾಜ್ಯ ಸರ್ಕಾರವು ಹಿಂದುಳಿದ ವರ್ಗದ ಜನರ ಅದರಲ್ಲಿಯೂ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದವರ ಶೈಕ್ಷಣಿಕ ಮತ್ತು ಆರ್ಥಿಕ ಅಭಿವೃದ್ಧಿಯಲ್ಲಿ ಹೆಚ್ಚಿನ ಗಮನ ಹರಿಸಿ ಅಥವಾ ವಿಶೇಷ ಗಮನ ಹರಿಸಿ ಸಾಮಾಜಿಕ ನ್ಯಾಯ ಮತ್ತು ಇತರೆ ದೌರ್ಜನ್ಯಗಳಿಂದ ಪೂರ್ಣ ಮತ್ತು ನಿರ್ದಿಷ್ಟ ರಕ್ಷಣೆ ನೀಡುವುದು ಎಂದು ವ್ಯಾಖ್ಯಾನಿಸಲಾಗಿದೆ.

ರಾಜ್ಯಜ ಕೆಲವೊಂದು ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಗಳ ಸಂಘ ಸಂಸ್ಥೆಗಳ ಒತ್ತಾಯ ಮತ್ತು ಬೇಡಿಕೆಯನ್ನು ಪರಿಗಣಿಸಿ ರಾಷ್ಟ್ರೀಯ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಆಯೋಗದ ಮಾದರಿಯಲ್ಲಿಯೇ ಕರ್ನಾಟಕ ಸರ್ಕಾರವು ರಾಜ್ಯ ಅನುಸೂಚಿತ ಜಾತಿ ಮತ್ತು ಅನೂಸೂಚಿತ ಬುಡಕಟ್ಟುಗಳ ಆಯೋಗವನ್ನು ಸರ್ಕಾರಿ ಸಂಖ್ಯೆ ಎಸ್.ಡಬ್ಲ್ಯು.ಡಿ.೫೮ ಎಸ್.ಎಸ್.ಎನ್. ೨೦೦೧ ದಿನಾಂಕ ೧೦.೧೦.೨೦೦೨ ರ ಅಡಿಯಲ್ಲಿ ರಚಿಸಲಾಗಿದೆ. ಆಯೋಗವು ಅಧಿಕೃತವಾಗಿ ದಿನಾಂಕ ೧೦.೦೪.೨೦೦೩ ಬಂದ ನಂ. ೧೪:೩ , ಸಿ.ಎಫ್.ಸಿ. ಕಟ್ಟಡ, ೨ ನೇ ಮಹಡಿ, ನೃಪತುಂಗ ರಸ್ತೆ, ಬೆಂಗಳೂರು ಇಲ್ಲಿ ಕಾರ್ಯನಿರ್ವಹಿಸುತ್ತಿದೆ.

**೧. ಆಯೋಗದ ರಚನೆ**

ರಾಜ್ಯ ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ ಆಯೋಗದಲ್ಲಿ ಒಬ್ಬರು ಅಧ್ಯಕ್ಷರು, ಇಬ್ಬರು ಅಧಿಕಾರೇತರ ಸದಸ್ಯರು ಹಾಗೂ ಸಮಾಜ ಕಲ್ಯಾಣ ಇಲಾಖೆಯ ಆಯುಕ್ತರ ಸದಸ್ಯ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿರುತ್ತಾರೆ. ಅಧ್ಯಕ್ಷರು ಮತ್ತು ಇಬ್ಬರು ಅಧಿಕಾರೇತರ ಸದಸ್ಯರ ಕಾಲಾವಧಿಯು ಮೂರು ವರ್ಷಗಳಿಗೆ ನಿಗದಿ ಪಡಿಸಿದ್ದು. ಈ ಅವಧಿಯಲ್ಲಿ ಅಧ್ಯಕ್ಷರ ಮತ್ತು ಸದಸ್ಯರುಗಳು ಇಷ್ಟಪಟ್ಟಲ್ಲಿ ಸರ್ಕಾರಕ್ಕೆ ಲಿಖಿತ ಮೂಲಕ ರಾಜೀನಾಮೆ ಸಲ್ಲಿಸಬಹುದಾಗಿರುತ್ತದೆ. ಸರ್ಕಾರವು ಆದೇಶ ಸಂಖ್ಯೆ ಸಕಿ : ೧೯೧ : ಎಸ್‌ಎಡಿ :೨೦೦೨ ದಿನಾಂಕ ೦೧.೦೧.೨೦೦೩ ರಂದು ಶ್ರೀ ಅಂಜನಮೂರ್ತಿ, ಶಾಸಕರು, ನೆಲಮಂಗಲ ವಿಧಾನಸಭಾ ಕ್ಷೇತ್ರ ಇವರನ್ನು ಅಧ್ಯಕ್ಷರನ್ನಾಗಿ ನೇಮಿಸಿ ಸಂಪುಟ ದರ್ಜೆಯ ಸಚಿವರ ಸ್ಥಾನಮಾನ ನೀಡಿರುತ್ತದೆ.

ಇದಲ್ಲದೆ ಇಬ್ಬರು ಅಧಿಕಾರೇತರ ಸದಸ್ಯರುಗಳನ್ನು ಆದೇಶ ಸಂಖ್ಯೆ ಸಕಿ : ೧೯೧ : ಎಸ್‌ಎಡಿ :೨೦೦೨ ದಿನಾಂಕ೧೬.೦೭.೨೦೦೩ ರಲ್ಲಿ ಶ್ರೀ ಈಶ್ವರ್ ನಾಯ್ಕ ಮತ್ತು ಶ್ರೀ ಬಸವರಾಜ ಚಿಂಚೋಳಿ ಇವರನ್ನೂ ಸಹ ಆಯೋಗದ ಸದಸ್ಯರನ್ನಾಗಿ ನೇಮಿಸಿ ಆದೇಶಿಸಲಾಗಿತ್ತು. ಇವರುಗಳು ಕಾರ್ಯನಿರ್ವಹಿಸುತ್ತಿದ್ದ ವಿವರ ಈ ಕೆಳಕಂಡಂತೆ ನೀಡಲಾಗಿದೆ.

ಶ್ರೀ ಕೆ. ಶಿವರಾಮು, ಐ.ಎ.ಎಸ್. ಸದಸ್ಯಕಾರ್ಯದರ್ಶಿಗಳು

ಆಯುಕ್ತರು, ಸಮಾಜ ಕಲ್ಯಾಣ ನಿರ್ದೇಶನಾಲಯ

ಶ್ರೀಕೆ. ಈಶ್ವರ್ ನಾಯ್ಕ ಕೆ.ಆರ್. ಬಿ.ಎ., ಬಿ.ಎಲ್. ಸದಸ್ಯರು ೨೪.೦೭.೨೦೦೩

ಶ್ರೀಬಸವರಾಜ್ ಚಿಂಚೋಳಿ ಸದಸ್ಯರು ೨೯.೦೭.೨೦೦೩
ಬಿ.ಕಾಂ. ಎಲ್.ಎಲ್.ಬಿ.ಎಸ್ಪೆಷಲ್ ಡಿ.ಡಿ.ಆರ್.ಪಿ.ಎಂ.

ಸಮಾಜ ಕಲ್ಯಾಣ ಇಲಾಖೆಯ ಒಬ್ಬರು ಜಂಟಿ ನಿರ್ದೇಶಕರು ಆಯೋಗದ ಕಾರ್ಯದರ್ಶಿಗಳಾಗಿ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದಾರೆ.

**ಆಯೋಗದ ಪ್ರಕಾರ್ಯಗಳು**

ಕರ್ನಾಟಕ ರಾಜ್ಯ ಅನುಸೂಚಿತ ಜಾತಿ ಮತ್ತು ಅನುಸೂಚಿತ ಬಡಕಟ್ಟುಗಳ ಕಾಯ್ದೆ ೨೦೦೨ ರ ಪ್ರಕಾರ ಆಯೋಗವು ಈ ಕೆಳಕಂಡ ಕಾರ್ಯಗಳನ್ನು ನಿರ್ವಹಿಸುತ್ತದೆ.

ಎ) ಕರ್ನಾಟಕ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ ಕಲ್ಯಾಣ ಮತ್ತು ಸಂರಕ್ಷಣೆಗಾಗಿ ಭಾರತ ಸಂವಿಧಾನದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಅಥವಾ ಸರ್ಕಾರದ ಯಾವುದೇ ಆದೇಶದ ಅಡಿಯಲ್ಲಿ ಉಪಬಂಧಿಸಲಾದ ವಿವಿಧ ರಕ್ಷಾಕ್ರಮಗಳ ಕಾರ್ಯ ಕ್ಷಮತೆಯನ್ನು ಪರಿಶೋಧಿಸುವುದು ಮತ್ತು ಪರೀಕ್ಷಿಸುವುದು.

ಬಿ) ಕರ್ನಾಟಕ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳಿಗೆ ಸೇರಿರುವವರನ್ನು ಅವರ ಹಕ್ಕುಗಳಿಂದ ಮತ್ತು ಸಂರಕ್ಷಣೆಯಿಂದ ವಂಚಿತಗೊಳಿಸಿರುವುದಕ್ಕೆ ಸಂಬಂಧಿಸಿದ ನಿರ್ದಿಷ್ಟ ದೂರುಗಳನ್ನು ವಿಚಾರಿಸುವುದು ಮತ್ತು ಅಂಥ ವಿಷಯದ ಬಗ್ಗೆ ಸೂಕ್ತ ಪ್ರಾಧಿಕಾರಗಳನ್ನು ಸಂಪರ್ಕಿಸುವುದು.

ಸಿ) ಅನುಸೂಚಿತ ಜಾತಿಗಳು ಮತ್ತು ಅನುಸೂಚಿನ ಬುಡಕಟ್ಟುಗಳ ಸಾಮಾಜಿಕ ಆರ್ಥಿಕ ಅಭಿವೃದ್ಧಿಯ ಯೋಜನಾ ಪ್ರಕ್ರಿಯೆಯಲ್ಲಿ ಭಾಗವಹಿಸುವುದು ಮತ್ತು ಆ ಬಗ್ಗೆ ಸಲಹೆಗಳನ್ನು ನೀಡುವುದು ಮತ್ತು ರಾಜ್ಯದಲ್ಲಿ ಅವರ ಅಭಿವೃದ್ಧಿಯಲ್ಲಾದ ಪ್ರಗತಿಯ ಮೌಲ್ಯನಿರ್ಣಯ ಮಾಡುವುದು.

ಡಿ) ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ ಸಂರಕ್ಷಣೆ, ಕಲ್ಯಾಣ ಮತ್ತು ಸಾಮಾಜಿಕ ಆರ್ಥಿಕ ಅಭಿವೃದ್ಧಿಗಾಗಿ ರಕ್ಷಾಕ್ರಮಗಳನ್ನು ಮತ್ತು ಇತರೆ ಕ್ರಮಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದಕ್ಕಾಗಿ ರಾಜ್ಯ ಸರ್ಕಾರ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಶಿಫಾರಸ್ಸು ಮಾಡುವುದು ಮತ್ತು ವಾರ್ಷಿಕವಾಗಿ ಆಯೋಗವು ತಾನು ಸೂಕ್ತವೆಂದು ಭಾಪಿಸಬಹುದಾದ ಅಂಥ ಇತರೆ ಸಮಯದಲ್ಲಿ ರಾಜ್ಯ ಸರ್ಕಾರಕ್ಕೆ ವರದಿ ಸಲ್ಲಿಸುವುದು.

ಇ) ನಿಯಮಿಸಿಬಹುದಾದಂತೆ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ ಸಂರಕ್ಷಣೆ, ಕಲ್ಯಾಣ, ಅಭಿವೃದ್ಧಿ ಮತ್ತು ಪ್ರಗತಿಗೆ ಸಂಬಂಧ ಪಟ್ಟಂತೆ ಅಂಥ ಇತರೆ ಪ್ರಕಾರ್ಯಗಳನ್ನು ನಿರ್ವಹಿಸುವುದು ಪರತು ಈ ಪ್ರರಣದಲ್ಲಿ ನಿರ್ದಿಷ್ಟ ಪಡಿಸಿದ ಯಾವುದೇ ವಿಷಯದ ಬಗ್ಗೆ ಭಾರತ ಸಂವಿಧಾನದ ೩೩೮ ನೇ ಅನುಚ್ಛೇದದ ಅಡಿಯಲ್ಲಿ ಸ್ಥಾಪಿಸಲಾದ ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ ರಾಜ್ಯ ಆಯೋಗವು ಅಂತಹ ವಿಷಯದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವುದು ನಿಂತು ಹೋಗ ತಕ್ಕದ್ದು.

ಎಫ್) ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗಗಳ ಪ್ರತಿ ಕುಟುಂಬದ ಶೈಕ್ಷಣಿಕ ಮತ್ತು

ಆರ್ಥಿಕ ಸಮೀಕ್ಷೆ ನಡೆಸಿ ಸಮಸ್ಯೆಗಳ ಪರಿಹಾರಕ್ಕೆ ವರದಿ ತಯಾರಿಸುವುದು.

**೩. ಆಯೋಗದ ಅಧಿಕಾರಗಳು**

ಆಯೋಗವು, ೮ ನೇ ಪ್ರಕರಣದ ಅಡಿಯಲ್ಲಿನ ಯಾವುದೇ ವಿಷಯದ ತನಿಖೆ ನಡೆಸುವಾಗ, ಸಿವಿಲ್ ನ್ಯಾಯಾಲಯವು ಒಂದು ದಾವೆಯ ಅಧಿ ವಿಚಾರಣೆ ನಡೆಸುವಾಗ ಮತ್ತು ಅದರಲ್ಲೂ ವಿಶೇಷವಾಗಿ ಈ ಕೆಳಗಿನ ವಿಷಯಗಳಿಗೆ ಸಂಬಂಧಪಟ್ಟಂತೆ ಹೊಂದಿರುವ ಎಲ್ಲಾ ಅಧಿಕಾರಿಗಳನ್ನು ಹೊಂದಿರತಕ್ಕದ್ದು, ಎಂದರೆ

ಎ) ಯಾವೊಬ್ಬ ವ್ಯಕ್ತಿಯನ್ನು ರಾಜ್ಯದ ಯಾವುದೇ ಭಾಗದಿಂದ ಸಮನ್ಸ್ ಮಾಡುವುದು ಮತ್ತು ಅವನ ಹಾಜರಾತಿಯನ್ನು ಅಗತ್ಯಪಡಿಸುವುದು ಮತ್ತು ಅವನನ್ನು ಪ್ರಮಾಣಮಾಡಿಸಿ ವಿಚಾರಣೆ ನಡೆಸುವುದು.

ಬಿ) ಯಾವುದೇ ದಸ್ತಾವೇಜನ್ನು ಪತ್ತೆ ಮಾಡುವುದು ಮತ್ತು ಹಾಜರು ಪಡಿಸುವಂತೆ ಅಗತ್ಯಪಡಿಸುವುದು.

ಸಿ) ಅಫಿಡಾವಿಟ್ಟುಗಳ ಮೇಲೆ ಸಾಕ್ಷ್ಯವನ್ನು ಸ್ವೀಕರಿಸುವುದು.

ಡಿ) ಯಾವುದೇ ನ್ಯಾಯಾಲಯ ಅಥವಾ ಕಛೇರಿಯಿಂದ ಯಾವುದೇ ಸಾರ್ವಜನಿಕ ದಾಖಲೆಯನ್ನು ಅಥವಾ ಪ್ರತಿಯನ್ನು ಕೋರುವುದು.

ಇ) ಸಾಕ್ಷ್ಯಗಳ ಮತ್ತು ದಸ್ತಾವೇಜುಗಳ ವಿಚಾರಣೆಗಾಗಿ ಕಮಿಷನ್ಗಳನ್ನು ಹೊರಡಿಸುವುದು, ಮತ್ತು

ಎಫ್) ನಿಯಮಿಸಬಹುದಾದ ಯಾವುದೇ ಇತರ ವಿಷಯಗಳು

೪) ಕರ್ನಾಟಕ ರಾಜ್ಯ ಅನುಸೂಚಿ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ ಆಯೋಗದ ರಕ್ಷಣೆ ಮತ್ತು ಅಭಿವೃದ್ಧಿ ಹಾಗೂ ಎಲ್ಲಾ ತರಹದ ಕುಂದುಕೊರತೆಗಳನ್ನು ಸಮಗ್ರವಾಗಿ ಪರಿಶೀಲಿಸಿ ನ್ಯಾಯದೊರಕಿಸುವ ಉದ್ದೇಶವನ್ನು ಹೊಂದಿರುತ್ತದೆ. ೨೦೦೪ ೦೫ ನೇ ಸಾಲಿನಲ್ಲಿ ಒಟ್ಟು ೧೧೬ ವಿವಿಧ ರೀತಿಯ ಅರ್ಜಿಗಳು ಉಪಜಾತಿಗಳನ್ನು ಸೇರಿಸುವ ಬಗ್ಗೆ, ಭೂ ವಿವಾಧ, ಒತ್ತುವರಿ, ದೌರ್ಜನ್ಯ ಪ್ರಕರಣಗಳು ಹಾಗೂ ಸೇವಾ ವಿಷಯಗಳ ಕುರಿತು ಆಯೋಗಕ್ಕೆ ಬಂದಿರುತ್ತವೆ. ಅವುಗಳ ವಿವರ ಈ ಕೆಳಕಂಡಂತಿವೆ.

| | **ಕೋಷ್ಟಕ ೫.೬** | |
|---|---|---|
| ಕ್ರ.ಸಂಖ್ಯೆ | ಕುಂದುಕೊರತೆಗಳ ವಿವರ | ಬಂದ ಅರ್ಜಿಗಳ ಸಂಖ್ಯೆ |
| ೧. | ಉಪಜಾತಿಗಳನ್ನು ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದ ಮುಖ್ಯ ಪಟ್ಟಿಯಲ್ಲಿ ಸೇರಿಸುವ ಕುರಿತು | ೫ |

| | | |
|---|---|---|
| ೨. | ಭೂ ವಿವಾದ | ೩೦ |
| ೩. | ಸೇವಾ ವಿಷಯ | ೩೬ |
| ೪. | ಬ್ಯಾಕಲಾಗ್ ಹುದ್ದೆಗಳ ಬಗ್ಗೆ | ೮ |
| ೫. | ದೌರ್ಜನ್ಯ ಪ್ರಕರಣಗಳು | ೧೨ |
| ೬. | ಇತರೆ ವಿಷಯದ ಬಗ್ಗೆ | ೨೫ |

ಈ ಎಲ್ಲಾ ಅರ್ಜಿಗಳನ್ನು ಸಂಬಂಧಪಟ್ಟ ಇಲಾಖೆಗಳ ಮುಖ್ಯಸ್ಥರುಗಳಿಗೆ ನಿರ್ದಿಷ್ಟ ಸೂಚನೆಯೊಂದಿಗೆ ಪರಿಶೀಲಿಸಿ ಅಗತ್ಯ ಕ್ರಮ ತೆಗೆದುಕೊಳ್ಳಲು ತಿಳಿಸಲಾಗಿರುತ್ತದೆ. ಆಯೋಗವು ಈ ಎಲ್ಲಾ ವಿಷಯಗಳ ಬಗ್ಗೆ ಸಂಬಂಧಪಟ್ಟ ಇಲಾಖೆಗಳೊಂದಿಗೆ ಸಂಪರ್ಕ ಇಟ್ಟುಕೊಂಡು ಹೆಚ್ಚಿನ ಪ್ರಕರಣಗಳಲ್ಲಿ ಅರ್ಜಿದಾರರ ಪರವಾಗಿ ತಿರ್ಮಾನಿಸಲು ಸಹಕಾರಿಯಾಗಿದೆ. ಆಯೋಗಕ್ಕೆ ಬಂದಿರುವ ೧೧೬ ವಿವಿಧ ರೀತಿಯ ಮನವಿಗಲಲ್ಲಿ ಈ ಕೆಳಗೆ ನಮೂದಿಸಿರುವ ೨ ಪ್ರತ್ಯೇಕ ಪ್ರಕರಣಗಳ ಬಗ್ಗೆ ಆಯೋಗದ ಅಧಿನಿಯಮ ೧೦ ರನ್ವಯ ವಿಚಾರಣೆ ನಡೆಸಿ ತೀರ್ಮಾನಿಸಲಾಗಿದೆ.

**೩. ಉದ್ಯೋಗದಲ್ಲಿ ಮೀಸಲಾತಿ**

- ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಗಳ ಮೀಸಲಾತಿ ನಿಯಮವನ್ನು ಅನುಸರಿಸಿದ್ದರ ಬಗ್ಗೆ ರಾಜ್ಯದ ಎಲ್ಲಾ ಸರ್ಕಾರಿ ಇಲಾಖೆಗಳು, ವಿದ್ಯಾ ಸಂಸ್ಥೆಗಳು, ಅನುದಾನಿತ ಸಂಸ್ಥೆಗಳು, ಅನುದಾನಿತ ಸಂಸ್ಥೆಗಳು, ನಿಗಮ ಮತ್ತು ಮಂಡಳಿಗಳು, ಸ್ಥಳೀಯ ಸಂಸ್ಥೆಗಳು ಹಾಗೂ ವಿಶ್ವವಿದ್ಯಾಲಯಗಳಿಂದ ಒಟ್ಟು ನೌಕರರ ಸಂಖ್ಯೆ ಎವರ್ಗವಾರು ಎ,ಬಿ,ಸಿ,ಡಿ,ಎ ಇದರಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದವರನ್ನು ಭರ್ತಿಮಾಡಿದ ವಿವರ ಸುತ್ತು ಬಾಕಿ ಉಳಿದ ವಿವರಗಳನ್ನು ಕಳುಹಿಸುವಂತೆ ಪತ್ರ ವ್ಯವಹಾರ ಮಾಡಿದ್ದ, ಮಾಹಿತಿ ಬಂದಿರುವ ಮತ್ತು ಬರಬೇಕಾಗಿರುವ ವಿವರಗಳನ್ನು ಈಕೆಳಗೆ ತೋರಿಸಲಾಗಿದೆ.

ಪೂರ್ಣ ಮಾಹಿತಿ ಬಂದ ನಂತರ ಕ್ರೋಢೀಕರಿಸಿದ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲಾಗುವುದು.

**ಕೋಷ್ಟಕ ೫.೭**

| ಕ್ರ.ಸಂ. | ವಿವರ | ಒಟ್ಟು ಇಲಾಖೆಗಳು | ಒಟ್ಟು ಮಾಹಿತಿ | ಬರಬೇಕಾದ ಮಾಹಿತಿ |
|---|---|---|---|---|
| ೧. | ಸರ್ಕಾರಿ ಇಲಾಖೆಗಳು | ೭೬ | ೬೫ | ೧೧ |
| ೨. | ಜಿಲ್ಲಾಧಿಕಾರಿಗಳು | ೨೭ | ೧೩ | ೧೪ |
| ೩. | ಜಿಲ್ಲಾ ಪಂಚಾಯತ್ | ೨೭ | ೧೩ | ೧೪ |
| ೪. | ವಿಶ್ವವಿದ್ಯಾಲಯಗಳು | ೧೨ | ೫ | ೧ |
| ೫. | ನಿಗಮ | ೬೨ | ೫೫ | ೭ |
| ೬. | ಮಹಾನಗರ ಪಾಲಿಕೆ | ೬ | ೫ | ೧ |

| | | | | |
|---|---|---|---|---|
| ೭. | ನಗರ ಸಭೆ | ೪೩ | ೬೨ | ೧೦ |
| ೮. | ಮಂಡಳಿಗಳು | ೧೫ | ೧೪ | ೧ |

ಆಯೋಗವು ಉದ್ಯೋಗ ವಿನಿಮಯ ನಿರ್ದೇಶನಾಲಯದಿಂದ ರಾಜ್ಯದಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ನಿರುದ್ಯೋಗಿ ಅಭ್ಯರ್ಥಿಗಳು ನೊಂದಾಯಿಸಿದ ವಿವರಗಳನ್ನು ಸಹ ಪಡೆದಿದ್ದು. ಅದರ ವಿವರ ಈ ಕೆಳಕಂಡಂತಿದೆ. ರಾಜ್ಯದಲ್ಲಿ ಒಟ್ಟು ೨೦೦೪ ಡಿಸೆಂಬರ್ ಅಂತ್ಯದವರೆಗೆ ೧೫, ೮೪,೧೭೭ ಲಕ್ಷ ಅಭ್ಯರ್ಥಿಗಳು ಉದ್ಯೋಗ ವಿನಿಮಯ ಕೇಂದ್ರದಲ್ಲಿ ಹೆಸರು ನೊಂದಾಯಿಸಿದ್ದು, ಇದರಲ್ಲಿ ಒಟ್ಟು ಪರಿಶಿಷ್ಟ ಜಾತಿ ೨,೬೧, ೨೯೪ ಎಮಹಿಳೆಯರೂಃ ೩,೮೨,೯೮೦ಃ ಮತ್ತು ಪರಿಶಿಷ್ಟ ವರ್ಗ ೬೨,೭೪೯ ಎಮಹಿಳೆಯರೂಃ ೬೪,೪೪೯ಃ ಅಭ್ಯರ್ಥಿಗಳು ಮೇಲೆ ತಿಳಿಸಿರುವ ೧೧೪ ಅಭ್ಯರ್ಥಿಗಳು ಉದ್ಯೋಗ ಪಡೆದಿದ್ದು ಇದರಲ್ಲಿ ಪರಿಶಿಷ್ಟ ಜಾತಿ ೨೧, ಪರಿಶಿಷ್ಟ ವರ್ಗ ಅಭ್ಯರ್ಥಿಗಳು ಸೇರಿರುತ್ತಾರೆ.

೪. ಸರ್ಕಾರಕ್ಕೆ ಸಲ್ಲಿಸಿದ ಪ್ರಸ್ತಾವನೆಗಳು

೧. ೨೦೦೩ ೦೪ ನೇ ಸಾಲಿನಲ್ಲಿ ಆಯೋಗದಿಂದ ರಾಜ್ಯದ ಎಲ್ಲಾ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಗಳ ಕುಟುಂಬದ ಶೈಕ್ಷಣಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಸಮಗ್ರ ಸಮೀಕ್ಷೆಯನ್ನು ನಡೆಸಲು ೨೦೦ ಲಕ್ಷರೂ.ಗಳ ಅನುದಾನ ಕೋರಿ ಪ್ರಸ್ತಾವನೆ ಸಲ್ಲಿಸಲಾಗಿದೆ.

೨. ಆಯೋಗವು ರಾಜ್ಯದಲ್ಲಿ ಎಲ್ಲಾ ಜಿಲ್ಲೆಗಳಿಗೆ ಪ್ರವಾಸ ಕೈಗೊಂಡು ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆಯಡಿ ತೆಗೆದುಕೊಂಡ ಎಲ್ಲಾ ಯೋಜನೆಗಳ ಸಮಗ್ರ ಪ್ರಗತಿ ಪರಿಶೀಲನೆಯನ್ನು ಆಯಾ ಜಿಲ್ಲಾ ಆಡಳಿತದೊಂದಿಗೆ ನಡೆಸಲು ಉದ್ದೇಶಿಸಿದೆ.

೩. ಆಯೋಗವು ಜಿಲ್ಲೆಗಳಿಗೆ ಭೇಟಿ ನೀಡಿದಾಗ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಗಳ ಎಲ್ಲಾ ದಲಿತ ಸಂಘ ಸಂಸ್ಥೆಗಳ ಹಾಗೂ ಅದರ ಪ್ರತಿನಿಧಿಗಳೊಂದಿಗೆ ಚರ್ಚಿಸಿ ಕೆಲವೊಂದು ಪ್ರವೇಶಗಳಿಗೆ ಖುದ್ದು ಭೇಟಿ ನೀಡಿ ತನಿಖೆ ನಡೆಸಿ ಅವರುಗಳ ಸಾಮಾಜಿಕ ಹಾಗೂ ಆರ್ಥಿಕ ಪರಿಸ್ಥಿತಿಯನ್ನು ಪರಿಶೀಲಿಸಿ ಉಪ ಜಾತಿಗಳನ್ನು ಪರಿಶಿಷ್ಟ ಜಾತಿಯ ಮುಖ್ಯ ಪಟ್ಟಿಯಲ್ಲಿ ಸೇರಿಸಲು ಪರಿಶೀಲಿಸಲಾಗುವುದು ಎಉಪಜಾತಿಗಳನ್ನು ಮುಖ್ಯ ಪಟ್ಟಿಗೆ ಸೇರಿಸಲು ಶಿಫಾರಸ್ಸು ಮಾಡಲು ಆಯೋಗಕ್ಕೆ ನೀಡುವ ಅಧಿಕಾರ ಸರ್ಕಾರದ ಪರಿಶೀಲನೆಯಲ್ಲಿದೆ.

೪. ಆಯೋಗವು ರಾಜ್ಯದ ಎಲ್ಲಾ ನಗರ ಪಾಲಿಕೆಗಳು. ನಗರ ಸಭೆ. ಪುರಸಭೆಗಳಲ್ಲಿನ. ೧೮ ಮೀಸಲಾತಿಯಲ್ಲಿ ತೆಗೆದುಕೊಂಡ ಯೋಜನೆಗಳ ಮತ್ತು ಹಣ ಖರ್ಚು ಮಾಡುವ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸುವುದು ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ ಆಯೋಗದ ಕಾರ್ಯಕ್ಕೆ ಅವಶ್ಯಕವಾಗಿ ಬೇಕಾಗಿರುವ ಪರಿಶಿಷ್ಟ ಜಾತಿ ಜನಸಂಖ್ಯೆಯ ರಾಜ್ಯ, ಜಿಲ್ಲಾವಾರು ಮಟ್ಟದ ವಿವಿಧ ಮತ್ತು ರಾಜ್ಯದ ಉದ್ಯೋಗ ವಿನಿಮಯ ಕೇಂದ್ರದಲ್ಲಿ ಒಟ್ಟು ನೊಂದಾಯಿಸಿದ ಪರಿಶಿಷ್ಟ ಜಾತಿ : ವರ್ಗಗ ಅಭ್ಯರ್ಥಿಗಳ ಸಂಖ್ಯೆ ಕೇಂದ್ರ ಸರ್ಕಾರದಿಂದ ಅನುಮೋದಿಸಿದ ಕಾರ್ನಾಟಕ ರಾಜ್ಯದಲ್ಲಿರುವ ಪರಿಶಿಷ್ಟ ಜಾತಿ : ವರ್ಗಗ ಪಟ್ಟಿಯ ವಿವರ ೨೦೦೩ ರ ಕಾಯ್ದೆ ವಿವರಗಳನ್ನು ಪುಟ ಸಂಖ್ಯೆ ೦೦ ರಿಂದ ೦೦ ರವರೆಗೆ ಸೇರಿಸಲಾಗಿದೆ.

**ಅಸ್ಪೃಶ್ಯತೆ ನಿವಾರಣೆ**

ಈ ಯೋಜನೆಯಡಿ ಎರಡು ಕಾರ್ಯಕ್ರಮ ಜಾರಿಗೊಳಿಸಲಾಗುತ್ತಿದೆ. ಅಂತರಜಾತಿ ವಿವಾಹ ಅಸ್ಪೃಶ್ಯತೆ ನಿವಾರಣೆಯ ನಿಟ್ಟಿನಲ್ಲಿ ಮಹತ್ವದ ಬೆಳವಣಿಗೆಯಾಗಿದೆ. ಇದನ್ನು ಪ್ರೋತ್ಸಾಹಿಸಲು ಸರ್ಕಾರ ಕಾರ್ಯಕ್ರಮ ಹಮ್ಮಿಕೊಂಡಿದೆ.

ಅ) ಅಂತರಜಾತಿ ವಿವಾಹವಾದ ದಂಪತಿಗಳಿಗೆ ಧನ ಸಹಾಯ

ಅಂತರ ಜಾತಿ ವಿವಾಹವಾದ ದಂಪತಿಗಳಲ್ಲಿ ಒಬ್ಬರು ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದರೆ ಅವರ ಸಾಮಾಜಿಕ ಭದ್ರತೆಯ ಉದ್ದೇಶದಿಂದ ೨೫,೦೦೦.೦೦ ರೂಪಾಯಿಗಳ ಪ್ರೋತ್ಸಾಹಧನ ನೀಡಲಾಗುತ್ತದೆ. ಇದರಲ್ಲಿ ೧೨, ೫೦೦.೦೦ ರೂ. ನಗದು ಹಾಗೂ ೧೨, ೫೦೦.೦೦ ರೂಪಾಯಿಗಳು ರಾಷ್ಟ್ರೀಯ ಉಳಿತಾಯ ಪತ್ರಗಳಾಗಿರುತ್ತದೆ.

**ಅರ್ಜಿ ಸಲ್ಲಿಸುವ ವಿಧಾನ**

ಈ ಯೋಜನೆಯನ್ನು ಜಿಲ್ಲಾ ಮಟ್ಟದಲ್ಲಿ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಜಾರಿಗೆ ತರುತ್ತಾರೆ. ಅಂತರ ಜಾತಿಯ ವಿವಾಹ ಮಾಡಿಕೊಂಡ ದಂಪತಿಗಳು ಆರ್ಥಿಕ ಸಹಾಯಕ್ಕೆ ಅರ್ಜಿ ಸಲ್ಲಿಸಲು ಅರ್ಜಿ ಜೊತೆ ಜಾತಿ ಪ್ರಮಾಣ ಪತ್ರ, ರಿಜಿಸ್ಟರ್ಡ್ ಮದುವೆ ಪತ್ರ, ವಾರ್ಷಿಕ ಆದಾಯ ಪತ್ರ ಹಾಗೂ ಎರಡು ಫೋಟೋ ಲಗತ್ತಿಸಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ಸಲ್ಲಿಸಬೇಕು. ನಂತರ ಅರ್ಜಿ ಪರಿಶೀಲಿಸಿ ತಹಶೀಲ್ದಾರ್ ನೀಡಿದ ವರದಿ ಪ್ರಕಾರ ಮಂಜೂರಾತಿ ನೀಡಲಾಗುವುದು.

**ದೌರ್ಜನ್ಯಕ್ಕೆ ಒಳ ಪಟ್ಟ ಪರಿಶಿಷ್ಟ ಜಾತಿಯವರಿಗೆ ಪರಿಹಾರ**

ದೌರ್ಜನ್ಯ ಕಾಯ್ದೆ ೧೯೮೯ ಹಾಗೂ ೧೯೯೫ ನಿಯಮದ ಅನ್ವಯ ಬರುವ ಎಲ್ಲಾ ದೌರ್ಜನ್ಯ ಪ್ರಕರಣಗಳಿಗೆ ಪರಿಹಾರ, ಪುನರ್ವಸತಿ ಕಲ್ಪಿಸುವ ಸಲುವಾಗಿ ಈ ಯೋಜನೆಯನ್ನು ರೂಪಿಸಿದೆ. ಸರ್ಕಾರದ ಆದೇಶ ಕ್ರಮ ಸಂಖ್ಯೆ ಎಸ್‌ಡಬ್ಲ್ಯೂಡಿ ೭೫: ಎಸ್ಪಿ: ೨೦೦೧. ದಿನಾಂಕ ೧೨.೦೨.೨೦೦೨ ರನ್ವಯ ದಿನಾಂಕ ೦೧.೦೪.೨೦೦೨ ರ ನಂತರ ದೌರ್ಜನ್ಯ ಪ್ರಕರಣಗಳಿಗೆ ಸಂಬಂಧಿಸದಂತೆ ಈ ಕೆಳಗೆ ನಮೂದಿಸಿದಂತೆ, ಪರಿಹಾರ ನೀಡಲಾಗುತ್ತದೆ.

ಪರಿಹಾರ ಮಂಜೂರು ಮಾಡುವ ಪೂರ್ಣ ಅಧಿಕಾರವು ಸಂಬಂಧ ಪಟ್ಟ ಜಿಲ್ಲಾಧಿಕಾರಿಯವರಿಗೆ ನೀಡಲಾಗಿದ್ದು, ಪರಿಹಾರ ನೀಡುವಾಗ ಜೀವ ಆಸ್ತಿಗಳ ನಷ್ಟವನ್ನು ಜಿಲ್ಲಾ ಆರಕ್ಷಕ ಅಧಿಕಾರಿಗಳಿಂದ ಅಂದಾಜು ಪಡೆದು ಜಿಲ್ಲಾಧಿಕಾರಿಗಳು ಮಂಜೂರು ಮಾಡುವರು.

ಪರಿಹಾರದ ವಿವರಗಳು ಕೆಳಗಿನಂತಿವೆ.

**ಕೋಷ್ಟಕ ೫.೭**

| | |
|---|---|
| ೧. ಖಾದ್ಯವಲ್ಲದ ಅಥವಾ ಅಸಹ್ಯಕರವಾದ ಯಾವುದೇ ಪದಾರ್ಥವನ್ನು ತಿನ್ನುವುದಕ್ಕೆ ಕುಡಿಯುವುದಕ್ಕೆ ಬಲತ್ಕರಿಸುವುದು. (ಪ್ರಕರಣ ೩ (೧) (೧) | ೨೫,೦೦೦ ರೂ.ಗಳು ಅಥವಾ ಅದಕ್ಕೂ ಮೀರಿದ ಮೊಬಲಗನ್ನುದೋಷಾರೋಪಣ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದಾಗ ಪೂರ್ಣಪರಿಹಾರವನ್ನು ನೀಡಲಾಗುವುದು |

| | |
|---|---|
| ೨ ಗಾಯ, ಅವಮಾನ, ಕಿರುಕುಳ ನೀಡುವುದು (ಪ್ರಕರಣ ೩ (೧) (೨) | ...ಅದೇ... |
| ೩. ಅಪಮಾನಿಸುವ ಕೃತ್ಯಗಳು (ಪ್ರಕರಣ ೩ (೧) (೩) | ...ಅದೇ... |
| ೪. ಜಮೀನು ಇತ್ಯಾದಿಗಳ ಅಕ್ರಮಣ ಸ್ವಾಧೀನ ಸಾಗುವಳಿ ಮೇಲೆ ನಮೂದಿಸಿದ, ನಿಬಂದನೆಯಂತೆ ರೂ. (ಪ್ರಕರಣ ೩(೧) (೪) | ೨೫,೦೦೦ ಪರಿಹಾರವನ್ನು ಅಪರಾಧದ ಸ್ವರೂಪ ಮತ್ತು ತೀವ್ರತೆಯನ್ನುಅನುಸರಿಸಿ. ನ್ಯಾಯಲದಲ್ಲಿ ದೋಷರೋಪಣಾ ಸಲ್ಲಿಸಿದ ನಂತರ ಸಂಪೂರ್ಣ ಪರಿಹಾರಮೊತ್ತವನ್ನು ನೀಡಲಾಗುವುದು. ಪೂರ್ವ ಸ್ಥಿತಿಗೆ ತರುವುದು |
| ೫. ಜಮೀನು, ನಿವೇಶನ, ನೀರು ಮುಂತಾದವುಗಳನ್ನು ಆಕ್ರಮಿಸಿ ಕೊಳ್ಳುವುದು (ಪ್ರಕರಣ ೩(೧) (೫) | ....ಅದೇ.... |
| ೬. ಜೀತದ ಕೆಲಸಕ್ಕೆ ಒತ್ತಾಯಿಸುವುದು. (ಪ್ರಕರಣ ೩(೧) (೬) | ಪ್ರಥಮ ವರ್ತಮಾನದ ವರದಿಸಲ್ಲಿಸುವಾಗ ಶೇ. ೨೫ ಭಾಗ ಪರಿಹಾರ ಹಾಗೂ ನ್ಯಾಯಾಲದಲ್ಲಿ ದೋಷಾರೋಪ ಸಲ್ಲಿಸಿದ ನಂತರ ಶೇ ೭೫ ರ ಸಂದಾಯ ಹೀಗೆ ಒಟ್ಟಾರೆ ಪ್ರತಿಯೊಬ್ಬರಿಗೆ ರೂ. ೨೫,೦೦೦ ಕ್ಕೆ ಮೀರದಂತೆ |
| ೭. ಮತಾಧಿಕಾರಕ್ಕೆ ಸಂಬಂಧಿಸಿದಂತೆ (ಪ್ರಕರಣ ೩(೧) (೭) | ಅಪರಾಧದ ಸ್ವರೂಪ ತೀವ್ರತೆಯನ್ನಾಧರಿಸಿ ದೌರ್ಜನ್ಯಕ್ಕೆ ಒಳಪಟ್ಟ ಪ್ರತಿ ವ್ಯಕ್ತಿಗೆ ರೂ. ೨೦,೦೦೦ ದವರೆಗೆ ಪರಿಹಾರ ನೀಡಲಾಗುವುದು. |
| ೮. ಸುಳ್ಳಿನ, ಕೃತಿಮ ಅಥವಾ ವಂಚನೆಯ ಕಾನೂನು ವ್ಯವಹಾರ | ವಿಚಾರಣೆ ಪೂರ್ಣಗೊಂಡ ನಂತರ |

| | |
|---|---|
| (ಪ್ರಕರಣ ೩(೧) (೮)) | ರೂ.೨೫,೦೦೦ ಅಥವಾ ವಾಸ್ತವಿಕವಾಗಿ ಮಾಡಿದ ಕಾನೂನು ವೆಚ್ಚ ಅಥವಾ ಹಾನಿ. |
| ೯. ಸುಳ್ಳು ಅಥವಾ ತಿರುಳಿಲ್ಲದ ಮಾಹಿತಿ ಸೃಷ್ಟಿ<br>(ಪ್ರಕರಣ ೩(೧) (೯)) | ವಿಚಾರಣೆ ಪೂರ್ಣಗೊಂಡ ನಂತರ ರೂ.೨೦,೦೦೦ ಅಥವಾ ವಾಸ್ತವಿಕವಾಗಿ ಮಾಡಿದ ಕಾನೂನು ವೆಚ್ಚ ಅಥವಾ ಹಾನಿ. |
| ೧೦. ಅವಮಾನದ ಬೆದರಿಕೆ ಮತ್ತು ಅಪಮಾನ<br>(ಪ್ರಕರಣ ೩(೧) (೧೦)) | ಅಪಮಾನದ ತೀವ್ರತೆ ಮತ್ತು ಸ್ವರೂಪವನ್ನು ಅನುಸರಿಸಿ ದೌರ್ಜನ್ಯಕ್ಕೊಳಪಟ್ಟವರಿಗೆ ರೂ. ೨೫,೦೦೦ ದವರೆಗೆ ಪರಿಹಾರವನ್ನು ನ್ಯಾಯಾಲಯದಲ್ಲಿ ದೋಷಾರೋಪ ಪಟ್ಟಿಯನ್ನು ಸಲ್ಲಿಸಿದ ನಂತರ |
| ೧೧. ಸಭ್ಯ ಮಹಿಳೆಯ ಮಾನಭಂಗ<br>(ಪ್ರಕರಣ ೩(೧) (೧೧)) | ದೌರ್ಜನ್ಯಕ್ಕೊಳಪಟ್ಟ ಮಹಿಳೆಯರಿಗೆ ರೂ. ೫೦,೦೦೦ ಪರಿಹಾರ ಈ ಪೈಕಿ ವೈದ್ಯಕೀಯ ತಪಾಸಣೆಯಲ್ಲಿ ದೃಢಪಟ್ಟಾಗ ಶೇ. ೫೦ ಭಾಗ ಹಾಗೂ ಬಾಕಿ ಶೇ. ೫೦ ಭಾಗ ದೋಷಾರೋಪಣಾ ಪಟ್ಟಿಯನ್ನು ನ್ಯಾಯಾಲಯದಲ್ಲಿ ಸಲ್ಲಿಸಿದ ನಂತರ ನೀಡಲಾಗುವುದು. |
| ೧೨. ಮಹಿಳೆಯನ್ನು ಲೈಂಗಿಕ ಶೋಷಣೆಗೆ ಒಳ ಪಡಿಸುವುದು. | ದೌರ್ಜನ್ಯಕ್ಕೊಳಪಟ್ಟ ಮಹಿಳೆಯರಿಗೆ ರೂ.೫೦,೦೦೦ ಪರಿಹಾರ ಈ ಪೈಕಿ ವೈದ್ಯಕೀಯ ತಪಾಸಣೆಯಲ್ಲಿ ದೃಢ ಪಟ್ಟಾಗ ಶೇ. ೫೦ ಭಾಗ ಹಾಗೂ ಬಾಕಿ ಶೇ. ೫೦ ಭಾಗ ದೋಷಾ ರೋಪಣಾ ಪಟ್ಟಿಯನ್ನು ನ್ಯಾಯಾ |

| | |
|---|---|
| (ಪ್ರಕರಣ ೩(೧) (೧೨)) | ಲಯದಲ್ಲಿ ಸಲ್ಲಿಸಿದ ನಂತರ ನೀಡ ಲಾಗುವುದು. |
| ೧೩. ನೀರನ್ನು ಮಲಿನಗೊಳಿಸುವುದು<br>(ಪ್ರಕರಣ ೩(೧) (೧೩)) | ರೂ. ೧,೦೦,೦೦೦ ಗಳ ಪರಿಹಾರ ಅಥವಾ ಪೂರ್ಣ ನೀರನ್ನು ಶುದ್ಧೀ ಕರಣಕ್ಕಾಗಿ ಹಾಗೂ ಮೊದಲಿನ ಸ್ಥಿತಿಗೆ ತರಲು ಪುನಃ ನಿರ್ಮಾಣ ಕ್ಕಾಗಿ ತಗಲುವ ಖರ್ಚು, ಹಣ ಸಂದಾಯವನ್ನು ಜಿಲ್ಲಾಡಾಳಿತವು ಸೂಕ್ತವೆಂದು ಭಾವಿಸುವ ಮಾದ ರಿಯಲ್ಲಿ ಮಾಡಲಾಗುವುದು. |
| ೧೪. ಸಾಂಪ್ರದಾಯಿಕವಾಗಿ ಇರುವ ದಾರಿಯ ಹಕ್ಕಿನ ನಿರಾಕರಣೆ<br>(ಪ್ರಕರಣ ೩(೧) (೧೪)) | ರೂ. ೧,೦೦,೦೦೦ ಗಳ ವರೆಗೆ ಅಥವಾ ಮಾರ್ಗಸ ಕ್ರಮಿಸುವ ಹಕ್ಕನ್ನು ಪುನರ್ ವ್ಯವಸ್ಥೆ ಮಾಡಲು ಹಾಗೂ ನಷ್ಟವನ್ನು ತುಂಬಲು ಅವ ಶ್ಯಕವಾದಷ್ಟು ಸಂಪೂರ್ಣ ಪರಿಹಾ ರದ ಮೊತ್ತವನ್ನು ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿ ಸಲ್ಲಿಸಿದ ನಂತರ ಭರಿಸಲಾಗುವುದು. |
| ೧೫. ವಾಸ ಸ್ಥಳವನ್ನು ನಾಶಪಡಿಸುವುದು.<br>(ಪ್ರಕರಣ ೩(೧) (೧೫)) | ನಿವೇಶನ, ವಾಸಿಸುವ ವ್ಯವಸ್ಥೆಯನ್ನು ಪುನಃ ಕಲ್ಪಿಸುವುದು ಮತ್ತು ದೌರ್ಜ ನ್ಯಕ್ಕೆ ಒಳಪಟ್ಟಿದ್ದರೆ ಒಬ್ಬರಿಗೆ ೨೫, ೦೦೦ ರೂ. ಪರಿಹಾರ ಮತ್ತು ಮನೆಯನ್ನು ನಾಶಪಡಿಸಿದ್ದರೆ, ಸರ್ಕಾರಿ ವೆಚ್ಚದಲ್ಲಿ ಪುನಃ ಮನೆ ನಿರ್ಮಿಸಿಕೊಡುವುದು. ಕೆಳಗಿನ ನ್ಯಾಯಾಲಯಕ್ಕೆ ಆರೋಪ ಪಟ್ಟಿ ಸಲ್ಲಿಸಿದ ನಂತರ ಸಂಪೂರ್ಣ ಮೊತ್ತ ನೀಡಲಾಗುವುದು. |

| | |
|---|---|
| ೧೬. ಸುಳ್ಳು ಸಾಕ್ಷಿ ನೀಡುವುದು<br><br>ಮೇರೆಗೆ ೧೦ ವರ್ಷ ಅಥವಾ ಅದಕ್ಕೂ ಹೆಚ್ಚು ಕಾರಾಗೃಹ ವಾಸ ಶಿಕ್ಷೆಗೆ ಒಳಪಟ್ಟ ಘಟನೆ ವ್ಯತ್ಯಾಸಗೊಳ್ಳುವುದು.<br><br>(ಪ್ರಕರಣ ೩(೨) (೧) & (೨) | ಕನಿಷ್ಠ ರೂ. ೧,೦೦,೦೦೦ ಅಥವಾ ನಷ್ಟ ಸಂಭವಿಸಿದಷ್ಟು ಪ್ರಮಾಣದ ಪರಿಹಾರ ನೀಡುವುದು ದೋಷಾ ರೋಪಣಾ ಪಟ್ಟಿಯನ್ನು ನ್ಯಾಯಾ ಲಯಕ್ಕೆ ಸಲ್ಲಿಸಿದ ಸಂಪೂರ್ಣ ಮೊತ್ತ ನೀಡಲಾಗುವುದು. |
| ೧೭. ಭಾರತೀಯ ದಂಡ ಸಂಹಿತೆಯ<br><br>(ಪ್ರಕರಣ ೩(೨) (೫) | ದೌರ್ಜನ್ಯಕ್ಕೆ ಗುರಿಯಾದಪ್ರತಿಯೊಬ್ಬ ವ್ಯಕ್ತಿ ಅಥವಾ ಅವಲಂಬಿಸಿ ಅಪ ರಾಧದ ಸ್ವರೂಪ ಮತ್ತು ತೀವ್ರತೆ ಅನುಸರಿಸಿ ಕನಿಷ್ಠ ರೂ. ೫೦,೦೦೦ ಪಾವತಿ ಅನುಸೂಚಿಯಲ್ಲಿ ನಿರ್ಧಿ ಷ್ಟವಾದ ವ್ಯತ್ಯಾಸದ ಮೊಬಲಗು ತಿಳಿಸಿದ್ದಲ್ಲಿ ಪರಿಹಾರ ಮೊತ್ತವು ವ್ಯತ್ಯಾಸಗೊಳ್ಳುವುದು. |
| ೧೮. ಸರ್ಕಾರಿ ಸೇವಕನಿಂದ ಕಿರುಕುಳ<br><br>(ಪ್ರಕರಣ ೩(೨) (೭) | ಸಂಭವಿಸಿದ ಹಾನಿ ಮತ್ತು ನಷ್ಟಕ್ಕೆ ಪೂರ್ಣ ಪರಿಹಾರ ಮೊತ್ತವನ್ನು ದೋಷಾರೋಪಣಾ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ ನಂತರ, ನೀಡಲಾಗುವುದು. |
| ೧೯. ಅಸಮರ್ಥತೆ ಮತ್ತು ಮಾನಸಿಕ ಅಸಮರ್ಥತೆಯ ಪರಿಭಾಷೆಯನ್ನು ಭಾರತ ಸರ್ಕಾರದ ಕಲ್ಯಾಣ ಮಂತ್ರಾಲಯ ಕಾಲಕಾಲಕ್ಕೆ ಹೊರಡಿಸುವ ಅಧಿಸೂಚನೆ ಯಂತೆ ಶೇ. ೧೦೦ ರಷ್ಟು ಅಸಮರ್ಥತೆ ಅ ದುಡಿಯದೇ ಇರುವ ಸದಸ್ಯ ಆಗಿದ್ದಲ್ಲಿ | ಅಸಮರ್ಥತೆಗೆ ತುತ್ತಾದ ಪ್ರತಿಯೊ ಬ್ಬನಿಗೆ ಕನಿಷ್ಠ ೧,೦೦,೦೦೦ ರೂ. ಗಳು ಇದರಲ್ಲಿ ಶೇ. ಶೇ. ೫೦ಭಾಗ ವರ್ತಮಾನ ವರದಿ ಸಲ್ಲಿಸಿದ ನಂತರ, ಬಾಕಿ ರೂ. ೫೦ ಭಾಗ ದೋಷರೋಪಣಾ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ ನಂತರ ನೀಡಲಾಗುವುದು. |

| | |
|---|---|
| ಆ ೨ ಕುಟುಂಬದಲ್ಲಿ ದುಡಿಯುವ ಸದಸ್ಯ ಆಗಿದ್ದಲ್ಲಿ | ಅಸಮರ್ಥತೆಗೆ ತುತ್ತಾದಸಂತ್ರಸ್ತರಲ್ಲಿ ಪ್ರತಿಯೊಬ್ಬರಿಗೂ ಕನಿಷ್ಠ ೨,೦೦,೦೦೦ ರೂ. ಇದರಲ್ಲಿ ಪ್ರಥಮವರ್ತಮಾನ : ವೈದ್ಯಕೀಯ ಪರೀಕ್ಷೆಯ ನಂತರ ಶೇ. ೫೦ನ್ಯಾಯಾಲಯದಲ್ಲಿದೋಷಾರೋಪಣೆ ಸಿದ್ಧವಾದ ನಂತರದ ಶೇ.೫೦ |
| ಬಿ ಅಸಮರ್ಥತೆಯು ಶೇ. ೧೦೦ ಕ್ಕಿಂತ ಕಡಿಮೆಯಾಗಿರುವಾಗ | ದುಡಿಯದೇ ಇರುವ ಸದಸ್ಯನಿಗೆ ರೂ. ೧೫,೦೦೦ ಕ್ಕಿಂತ ಕಡಿಮೆ ಇಲ್ಲದಂತೆ ಮತ್ತು ದುಡಿಯುವ ಸದಸ್ಯರಿಗೆ ರೂ. ೩೦,೦೦೦ ಕ್ಕಿಂತ ಕಡಿಮೆಇಲ್ಲದಂತೆ ಮೇಲೆ (೧) ಮತ್ತು ಎ(೨) ರಲ್ಲಿ ತಿಳಿಸಿರುವ ನಿಬಂಧನೆಯಂತೆಸಮದಾಯ ಹಂತಗಳಲ್ಲಿ ಸಂದಾಯಹಂತಗಳಲ್ಲಿ ಪಾವತಿಸುವುದು. |
| ೨೦. ಕೊಲೆ : ಸಾವು<br>ಎ. ದುಡಿಯದೇ ಇರುವ ಕುಟುಂಬದ ಸದಸ್ಯನಾಗಿದ್ದಲ್ಲಿ | ಪ್ರತಿಯೊಂದು ಪ್ರಕರಣದಲ್ಲಿ ಕನಿಷ್ಠ ೧,೦೦,೦೦೦ ರೂ. ಗಳ ಪರಿಹಾರ ಇದರಲ್ಲಿಮರಣೋತ್ತರ ಪರೀಕ್ಷೆಯ ನಂತರ ಶೇ. ೭೫ ರಷ್ಟು ಮತ್ತು ದೋಷಾ ರೋಪಣಾ ಪಟ್ಟಿ ನ್ಯಾಯಾಲಯದಲ್ಲಿ ಸಿದ್ಧವಾದ ನಂತರ ಶೇ. ೨೫ ರಷ್ಟು |
| ಬ. ದುಡಿಯುವ ಕುಟುಂಬದ | |

| | |
|---|---|
| ಸದಸ್ಯನಾಗಿದ್ದಲ್ಲಿ | ಪ್ರತಿಯೊಂದು ಪ್ರಕರಣದಲ್ಲಿ ಕನಿಷ್ಠ ೨,೦೦,೦೦೦ ರೂ. ಗಳ ಪರಿಹಾರ ಇದರಲ್ಲಿಮರ ಣೋತ್ತರ ಪರೀಕ್ಷೆಯ ನಂತರ ಶೇ. ೭೫ ರಷ್ಟು ಮತ್ತು ದೋಷಾರೋಪಣಾ ಪಟ್ಟಿ ನ್ಯಾಯಾಲಯದಲ್ಲಿಸಿದ್ಧವಾದ ನಂತರ ಶೇ. ೨೫ ರಷ್ಟು |
| ೨೧. ಮರಣ, ಕೊಲೆ, ಕಗ್ಗೊಲೆ, ಅತ್ಯಾಚಾರ, ಸಮೂಹಿಕ ಅತ್ಯಾಚಾರ, ಗುಂಪಿನಅತ್ಯಾಚಾರ, ಅಸಮರ್ಥತೆ ಮತ್ತು ದರೋಡೆಯ ಸಂತ್ರಸ್ತರಿಗೆ. | ಮೇಲ್ಕಾಣಿಸಿದ ಬಾಬ್ತುಗಳಲ್ಲಿ ಸೂಚಿಸಿದಂತಹ ಪರಿಹಾರ ಮೊತ್ತವನ್ನು ಪಾವತಿಸುವುದರ ಮೂಲಕ ದೌರ್ಜನ್ಯ ನಡೆದ ದಿನದಿಂದ ೩ ತಿಂಗಳ ಒಳ ಗಾಗಿ ಪರಿಹಾರವನ್ನು ಈ ಕೆಳಗಿನಂತೆ ನೀಡುವುದು. |

೧. ಪರಿಶಿಷ್ಟ ಜಾತಿಗಳ ಮೃತನ ವಿಧವೆಗೆ ಮತ್ತು ಅವಲಂಬಿತರಿಗೆ ಪ್ರತಿ ತಿಂಗಳು ರೂ. ೧೦೦೦.೦೦ ಪಿಂಚಣಿ ಅಥವಾ ಮೃತನ ಕುಟುಂಬದ ಒಟ್ಟು ಸದಸ್ಯನಿಗೆ ಉದ್ಯೋಗ ಅಥವಾ ಕೃಷಿ ಜಮೀನು, ಒಂದುಮನೆ ಹಂಚಿಕೆ ಅವಶ್ಯವಾದಲ್ಲಿ ಖರೀದಿ ಮಾಡಿ ನೀಡುವುದು

೨. ದೌರ್ಜನ್ಯಕ್ಕೆ ಒಳಗಾದವರ ಮಕ್ಕಳನ್ನು ಆಶ್ರಮ ಶಾಲೆಗೆ ಅಥವಾ ವಸತಿ ಶಾಲೆಗಳಿಗೆ ಸೇರಿಸಬಹುದು.

೩. ಮೂರು ತಿಂಗಳ ಅವಧಿಗೆ ಪಾತ್ರೆ, ಅಕ್ಕಿ, ಬೇಳೆ, ಗೋಧಿ, ಧಾನ್ಯ ಇತ್ಯಾದಿಗಳ ಪೂರೈಕೆ

| | |
|---|---|
| ೨೨. ಮನೆಗಳ ಸಂಪೂರ್ಣ ನಾಶ : ಸುಟ್ಟ ಮನೆಗಳು | ಸರ್ಕಾರಿ ವೆಚ್ಚದಲ್ಲಿ ಇಟ್ಟಿಗೆ : ಕಲ್ಲು ಕಟ್ಟಡದಿಂದ ಮನೆ ನಿರ್ಮಿಸಿಕೊಡು ವುದು ಅಥವಾ ಒದಗಿಸುವುದು. |

**ಜಾತಿ ಪರಿಶೀಲನೆ**

ನಿಜವಾದ ಮತ್ತು ಅರ್ಹತೆಯುಳ್ಳ ಪರಿಶಿಷ್ಟ ಜಾತಿ ಜನರಿಗೆ ಮೀಸಲಾತಿ ಸೌಲಭ್ಯ ಒದಗಿಸಲು ಅವರಿಗಾಗಿ ವಿವಿಧ ನೇಮಕಾತಿಗಳ ಸಂದರ್ಭದಲ್ಲಿ ಅವಶ್ಯಕವಾಗಿ ಬೇಕಾಗುವ ಜಾತಿ ಪರಿಶೀಲನಾ ಪ್ರಮಾಣ ಪತ್ರ ನೀಡಲು ಜಿಲ್ಲಾ ಮಟ್ಟದಲ್ಲಿ ಒಂದು ಜಾತಿ ಪರಿಶೀಲನಾ

ಸಮಿತಿ ರಚಿಸಲಾಗಿದೆ.

ಸಮಿತಿ ಈ ಕೆಳಕಂಡ ಸದಸ್ಯರನ್ನು ಒಳಗೊಂಡಿರುತ್ತದೆ.

| | |
|---|---|
| ೧. ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| ೨. ಉಪಕಾರ್ಯದರ್ಶಿಗಳು | ಸದಸ್ಯರು ಜಿಲ್ಲಾ ಪಂಚಾಯ್ತಿ ಆಡಳಿತ |
| ೩. ತಹಶೀಲ್ದಾರರು | ಸದಸ್ಯರು |
| ೪. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ | ಸದಸ್ಯ ಕಾರ್ಯದರ್ಶಿ |
| ೫. ಮೇಲ್ಮನವಿ ಪ್ರಾಧಿಕಾರಿ | ವಿಭಾಗೀಯ ಆಯುಕ್ತರು ಸಂಬಂಧಿಸಿದ ವಿಭಾಗ |

## ಡಾ ಬಿ.ಆರ್ ಅಂಬೇಡ್ಕರ್ ಶತಮಾನೋತ್ಸವ ಕಾರ್ಯಕ್ರಮಗಳು

ಡಾ॥ ಬಿ.ಆರ್ ಅಂಬೇಡ್ಕರ್ ಶತಮಾನೋತ್ಸವ ಕಾರ್ಯಕ್ರಮಗಳ ಅಂಗವಾಗಿ ಪರಿಶಿಷ್ಟ ಜಾತಿಯವರಿಗೆ ಹಲವು ಕಾರ್ಯಕ್ರಮಗಳನ್ನು ಪ್ರತಿ ವರ್ಷ ರೂಪಿಸಿ ಅನುಷ್ಠಾನಗೊಳಿಸಲಾಗುತ್ತಿದೆ. ಈ ಪೈಕಿ ವಸತಿ ಕಾರ್ಯಕ್ರಮವು ಪ್ರಮುಖ ಯೋಜನೆಯಾಗಿರುತ್ತದೆ.

### ಅಂಬೇಡ್ಕರ್ ವಸತಿ ಯೋಜನೆ

ಅಂಬೇಡ್ಕರ್ ವಸತಿ ಯೋಜನೆಯಡಿ ಗ್ರಾಮಾಂತರ ಪ್ರದೇಶದಲ್ಲಿ ವಾಸಿಸುತ್ತಿರುವ ಪರಿಶಿಷ್ಟ ಜಾತಿಯವರಿಗೆ ರೂ. ೨೦,೦೦೦,೦೦ ದಂತೆ ಪ್ರತಿ ಮನೆಗೆ ಎಶೇ. ೧೦೦ ರಷ್ಟು ಸಹಾಯಧನವ ಘಟಕ ವೆಚ್ಚದಲ್ಲಿ ನಿರ್ಮಿಸಿ ಕೊಡಲಾಗುತ್ತಿದೆ. ಈ ಯೋಜನೆಗೆ ಫಲಾನುಭವಿಗಳನ್ನು ಬಡತನ ರೇಖೆಯ ಕೆಳಗಿರುವ ಪರಿಶಿಷ್ಟ ಜಾತಿಯವರನ್ನು ಗ್ರಾಮ ಸಭೆಗಳಲ್ಲಿ ಆಯ್ಕೆ ಮಾಡಿ ಶಾಸಕರ ಸಮಿತಿಯಲ್ಲಿ ಅನುಮೋದನೆ ನೀಡಿ ಸೌಲಭ್ಯವನ್ನು ಒದಗಿಸಲಾಗುತ್ತದೆ.

### ಆಶ್ರಯ ವಸತಿಯೋಜನೆ

ಆಶಯ ವಸತಿ ಯೋಜನೆಯಡಿ ಗಾಮಾಂತರ ಪದೇಶದಲ್ಲಿ ಪರಿಶಿಷ್ಟಜಾತಿಯವರಿಗೆ ರೂ. ೨೦.೦೦೦ ದಂತೆ ಶೇ. ೧೦೦ ರಷ್ಟು ಸಹಾಯಧನದಲ್ಲಿ ಮನೆಗಳನ್ನು ನಿರ್ಮಿಸಿಕೊಡಲಾಗುತ್ತಿದೆ. ಈ ಯೋಜನೆಗೆ ಫಲಾನುಭವಿಗಳನ್ನು ಬಡತನ ರೇಖೆಗಿಂತ ಕೆಳಗಿರುವ ಪರಿಶಿಷ್ಟಜಾತಿಯವರನ್ನು ಗಾಮಸಭೆಗಳಲ್ಲಿ ಆಯ್ಕೆ ಮಾಡಿ ಶಾಸಕರ ಸಮತಿಯಲ್ಲಿ ಅನುಮೋದನೆ ಪಡೆದು ವಸತಿ ಸೌಲಭ್ಯವನ್ನ ಒದಗಿಸಲಾಗುತ್ತಿದೆ.

### ವಿಶೇಷ ಘಟಕ ಯೋಜನೆಯ ಕಾರ್ಯಕಮಗಳು

ಸದರಿ ಕಾರ್ಯಕಮದಲ್ಲಿ ಪರಿಶಿಷ್ಟಜಾತಿಯವರ ಸರ್ವಾಂಗೀಣ ಅಭಿವೃದ್ಧಿಗಾಗಿ ಸರ್ಕಾರವು ಸುಮಾರು ೨೨ ಅಭಿವೃದ್ಧಿ ಇಲಾಖೆಗಳ ಮುಖಾಂತರ ನಾನಾ ಕಾರ್ಯಕಮಗಳನ್ನು ಅನುಷ್ಠಾನಗೊಳಿಸುತ್ತಿದೆ. ವಿಶೇಷ ಘಟಕ ಯೋಜನೆಯಡಿ ರಾಜ್ಯದಲ್ಲಿ ಅನುಷ್ಠಾನವಾಗುತ್ತಿರುವ ವಿವಿಧ ಯೋಜನೆಗಳಿಗೆ ಪೂರಕವಾಗಿ ಭಾರತ ಸರ್ಕಾರದಿಂದ ವಿಶೇಷ ನೆರವನ್ನು ನೀಡಲಾಗುತ್ತಿದೆ. ಭಾರತ ಸರ್ಕಾರಕ್ಕೆ ಸಲ್ಲಿಸಿದ ಯೋಜನಾ ವರದಿಯನ್ವಯ ಪತಿ ಫಲಾನುಭವಿಗಳಿಗೆ ರೂ. ೧೦.೦೦೦ ಸಹಾಯಧನ ನೀಡಿ ಪ್ರಮುಖ ಯೋಜನೆಗಳಾದ ಕೃಷಿ. ತೋಟಗಾರಿಕೆ. ರೇಷ್ಮೆ.

ಮೀನುಗಾರಿಕೆ, ಪಶುಸಂಗೋಪನೆ, ಸಮಾಜಕಲ್ಯಾಣ ಇಲಾಖೆ, ಜಲಸಂಪನ್ಮೂಲ ಇಲಾಖೆ, ಅರಣ್ಯ ಇಲಾಖೆ, ಶಿಕ್ಷಣ ಇಲಾಖೆ ಇವೇ ಮೊದಲಾದ ಇಲಾಖೆಗಳ ಮೂಲಕ ವಿಶೇಷ ಕೇಂದ್ರೀಯ ನೆರವಿನಡಿ ಸಹಾಯಧನವನ್ನು ನೀಡಿ ಪರಿಶಿಷ್ಟಜಾತಿ ಜನರ ಅಭಿವೃದ್ಧಿಗಾಗಿ ಪ್ರತಿವರ್ಷ ಸಾಕಷ್ಟು ಅನುದಾನವನ್ನು ಬಿಡುಗಡೆ ಮಾಡಲಾಗುತ್ತದೆ.

ಈ ಯೋಜನೆಯ ಸಂಪೂರ್ಣ ವಿವರಗಳನ್ನು ಮುಂದಿನ ಅಧ್ಯಾಯದಲ್ಲಿ ಸುದೀರ್ಘವಾಗಿ ವಿಶ್ಲೇಷಿಸಲಾಗಿದೆ. ಹೀಗೆ ಸರ್ಕಾರದ ಯೋಜನೆಗಳು ಅದರಲ್ಲೂ ಶೈಕ್ಷಣಿಕ ನೆರವಿನ ಯೋಜನೆಗಳು, ಉದ್ಯೋಗ ಮತ್ತು ತರಬೇತಿ ನೆರವಿನ ಯೋಜನೆಗಳು ಹಾಗೂ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ಯೋಜನೆಗಳು ದಲಿತರ ಬದುಕನ್ನು ಸದರಿ ತಾಲೂಕಿನಲ್ಲಿ ಪ್ರಗತಿಗೆ ಪೂರಕವಾಗಿರುವುದು ಪ್ರಸ್ತುತ ಅಧ್ಯಯನದಿಂದ ಮನದಟ್ಟಾಗಿರುತ್ತದೆ.

# ಅಧ್ಯಾಯ ಆರು

# ವಿಶೇಷ ಘಟಕ ಯೋಜನೆಯಲ್ಲಿ ದಲಿತರ ಸ್ಥಿತ್ಯಂತರಗಳು

(ಹಗರಿಬೊಮ್ಮನಹಳ್ಳಿ ತಾಲೂಕನ್ನು ಅನುಲಕ್ಷಿಸಿ)

ಅ) ವಿಶೇಷ ಘಟಕ ಯೋಜನೆಯ ಉದ್ದೇಶಗಳು.

ಆ) ಹಗರಿಬೊಮ್ಮನಹಳ್ಳಿ ತಾಲೂಕಿನ ವಿಶೇಷ ಘಟಕಯೋಜನೆಯ ಅನುಷ್ಠಾನ.

ಇ) ವಿಶೇಷ ಘಟಕಯೋಜನೆಯ ಅನುಷ್ಠಾನದಲ್ಲಿ ಬ್ಯಾಂಕುಗಳು.

ಈ) ವಿಶೇಷ ಘಟಕಯೋಜನೆಯ ಪ್ರಗತಿ ಮೌಲ್ಯಮಾಪನ.

ಉ) ವಿಶೇಷ ಘಟಕಯೋಜನೆಯನ್ನು ಅನುಷ್ಠಾನಗೊಳಿಸಲು ಇರುವ ಸಾಧಕ ಬಾಧಕಗಳು, ಮತ್ತು ಪರಿಹಾರೋಪಾಯಗಳು

# ಅಧ್ಯಾಯ ಆರು

## ವಿಶೇಷ ಘಟಕ ಯೋಜನೆಯಲ್ಲಿ ದಲಿತರ ಸ್ಥಿತ್ಯಂತರಗಳು

ಭಾರತಕ್ಕೆ ಸ್ವಾತಂತ್ರ್ಯ ಲಭಿಸಿ ಅರ್ಧಶತಮಾನಗಳು ಸಂದರೂ ನಿರಂತರ ಶೋಷಣೆ ಹಾಗೂ ದೌರ್ಜನ್ಯಕ್ಕೊಳಗಾದ ದಲಿತರು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಇನ್ನೂ ಸಹ ಹಿಂದುಳಿದಿರುವುದು ವಿಷಾದನೀಯ ವಿಚಾರ. ಈ ರೀತಿ ಶೋಷಣೆಗಳಿಂದ ಜರ್ಜರಿತಗೊಂಡ ದೌರ್ಜನ್ಯ ದಬ್ಬಾಳಿಕೆಗಳೇ ತಮ್ಮ ಜೀವನವೆಂದುಕೊಂಡು ಬದುಕುತ್ತಿರುವ ದಲಿತರ ಅಭಿವೃದ್ಧಿಗಾಗಿ ಅನೇಕ ಯೋಜನೆಗಳನ್ನು ಹಮ್ಮಿಕೊಂಡಿದ್ದರೂ ಅವು ನಿರ್ದಿಷ್ಟ ಫಲಕೊಡದ ಕಾರಣ ಅನುಪಯುಕ್ತ ಯೋಜನೆಗಳನ್ನು ತೆಗೆದಹಾಕಿ ೧೯೮೦-೮೧ ನೇ ಸಾಲಿನಲ್ಲಿ ಪರಿಶಿಷ್ಟ ಜಾತಿಯವರ ಸರ್ವತೋಮುಖ ಬೆಳವಣಿಗೆಗಾಗಿ ವಿಶೇಷ ಘಟಕ ಯೋಜನೆಯನ್ನು ಜಾರಿಗೆ ತಂದಿರುವುದು ಅಭಿನಂದನಾರ್ಹ ವಿಚಾರ. ದಲಿತರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಅಭಿವೃದ್ಧಿಗಾಗಿ ಅನೇಕ ಅಭಿವೃದ್ಧಿ ಯೋಜನೆಗಳನ್ನು ಸರ್ಕಾರ ಜಾರಿಗೆ ತಂದಿದ್ದು ವಿಶೇಷ ಘಟಕ ಯೋಜನೆಯೂ ಒಂದು.

### ಅ. ವಿಶೇಷ ಘಟಕ ಯೋಜನೆಯ ಮುಖ್ಯ ಉದ್ದೇಶಗಳು

ಬಡತನ ರೇಖೆಗಿಂತ ಕೆಳಗಿರುವ ಪರಿಶಿಷ್ಟ ಜಾತಿಯವರ ಕುಟುಂಬಗಳ ಅಭಿವೃದ್ಧಿಗೆ ವಿಶೇಷ ಘಟಕ ಯೋಜನೆ ಕಾರ್ಯಕ್ರಮದಡಿಯಲ್ಲಿ ಕೈಗೊಂಡ ಕಾರ್ಯಕ್ರಮಗಳು ಹಲವಾರು ಮಹತ್ವದ ಉದ್ದೇಶಗಳನ್ನು ಹೊಂದಿವೆ.

ಅವುಗಳೆಂದರೆ

೧. ಪರಿಶಿಷ್ಟ ಜಾತಿಯವರ ಆರ್ಥಿಕ ಉನ್ನತಿಗಾಗಿ ನಿರಂತರ ಆದಾಯ ತರುವ ಆರ್ಥಿಕ ಚಟುವಟಿಕೆಗಳನ್ನು ಪ್ರಾರಂಭಿಸಿ ಸಹಾಯ ಧನ ಹಾಗೂ ಸಾಲವನ್ನೊದಗಿಸಿವುದು.

೨. ದಲಿತರಲ್ಲಿ ಮನೆಮಾಡಿಕೊಂಡಿರುವ ಮೌಢ್ಯವನ್ನು ಹೋಗಲಾಡಿಸಲು ಶಿಕ್ಷಣ ಕೊಡುವ ಉದ್ದೇಶದಿಂದ ಉಚಿತ ಸೌಲಭ್ಯಗಳನ್ನು ಒಳಗೊಂಡ ವಿಧ್ಯಾರ್ಥಿ ನಿಲಯ ಸೌಲಭ್ಯಗಳನ್ನು ಒದಗಿಸುವುದು.

೩. ಅಲ್ಲಲ್ಲಿ ಗುಡಿಸಲು ಜೋಪಡಿಗಳಲ್ಲಿ ವಾಸಿಸುತ್ತಿರುವ ದಲಿತರಿಗಾಗಿ ವಸತಿಯೋಜನೆಯನ್ನು ಪ್ರಾರಂಭಿಸಿ ವ್ಯವಸ್ಥಿತ ಬದುಕಿಗಾಗಿ ವಸತಿಯನ್ನೊದಗಿಸುವುದು

೪. ಒಂದೆಡೆ ನೆಲೆಸಿರುವ ಪರಿಶಿಷ್ಟ ಜಾತಿಯವರ ಕಾಲೋನಿಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು.

೫. ದಲಿತರು ಸ್ವಾವಲಂಭಿಯಾಗಿ ಬದುಕಲು ಹಾಗೂ ತಮ್ಮ ಸಂಸಾರವನ್ನು ನಡೆಸಲು ಬೇಕಾಗುವ ಆದಾಯದ ಉತ್ಪತ್ತಿಗಾಗಿ ನಿರಂತರ ಆದಾಯ ತರುವ ಯೋಜನೆಗಳನ್ನು ಪ್ರಾರಂಭಿಸಿ ಅವರನ್ನು ಬಡತನ ರೇಖೆಯಿಂದ ಮೇಲೆ ತರುವುದು.

೬. ಪರಿಶಿಷ್ಟ ಜಾತಿಯವರ ಆರೋಗ್ಯ ತಪಾಸಣೆಗಾಗಿ ಹಳದಿ ಕಾರ್ಡ್ ಯೋಜನೆಗಳನ್ನು ಜಾರಿಗೆ ತರುವುದು.

೭. ಸಣ್ಣ ಕೈಗಾರಿಕೆ ಹಾಗೂ ವ್ಯಾಪಾರ ವ್ಯವಹಾರ ಸೇವಾ ಕಾರ್ಯದಲ್ಲಿ ನಿರಂತರವಾಗುವಂತೆ ಮಾಡಲು ಬ್ಯಾಂಕುಗಳ ಮೂಲಕ ಶೇ. ೪೦ ರಷ್ಟು ಸಾಲ ಹಾಗೂ ಶೇ. ೬೦ ರಷ್ಟ ಸಹಾಯಧನವನ್ನು ನೀಡಿ ಆರ್ಥಿಕ ಅಭಿವೃಧ್ಧಿ ಸಾಧಿಸಲು ಕಾರ್ಯಕ್ರಮ ಹಮ್ಮಿಕೊಳ್ಳುವುದು.

೮. ಮನರಂಜನೆಗಾಗಿ ಗ್ರಾಮ ಪಂಚಾಯತಿ, ಪಟ್ಟಣ ಪಂಚಾಯಿತಿ, ನಗರ ಸಭೆ, ಪುರ ಸಭೆ, ಮಹಾನಗರ ಪಾಲಿಕೆಗಳ ಮೂಲಕ ಟಿ.ವಿ. ಮತ್ತು ರೇಡಿಯೋಗಳನ್ನು ಪೂರೈಸಿ ದಲಿತರ ಸಾಂಸ್ಕೃತಿಕ ಪ್ರಜ್ಞೆ ಹಾಗೂ ಜನಜಾ ಗೃತಿ ಮೂಡಿಸುವುದು.

೯. ಸರ್ಕಾರದ ಅಭಿವೃಧ್ಧಿ ಇಲಾಖೆಗಳಾದ ಕೃಷಿ, ತೋಟಗಾರಿಕೆ, ಕೈಗಾರಿಕೆ, ಸಮಾಜ ಕಲ್ಯಾಣ, ರೇಷ್ಮೆ, ಪಶು ಸಂಗೋಪನೆ, ಸಹಕಾರ, ಮೀನುಗಾರಿಕೆ, ಅರಣ್ಯ, ಗ್ರಾಮೀಣ ಅಭಿವೃಧ್ಧಿ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಮೊದಲಾವುಗಳ ಮೂಲಕ ಸ್ವಯಂ ಉದ್ಯೋಗಗಳನ್ನು ಕೈಗೊಳ್ಳಲು ಸಹಾಯಧನ ಸಾಲ, ತರಬೇತಿ ಸಾಧನ ಸಲಕರಣೆಗಳನ್ನು ನೀಡುವುದು.

೧೦. ಪರಿಶಿಷ್ಟ ಜಾತಿಯ ನಿರುದ್ಯೋಗಿ ಯುವಕ ಯುವತಿಯರಿಗೆ ಸ್ವಯಂ ಉದ್ಯೋಗ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

೧೧. ಸರ್ಕಾರಿ ಸೇವೆಗೆ ಸೇರುವವರಿಗಾಗಿ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಭಾಗವಹಿಸಿ ಯಶಸ್ವಿಯಾಗಲು ಪರೀಕ್ಷಾ ಪೂರ್ವ ತರಬೇತಿ. ಕೇಂದ್ರಗಳನ್ನು ಪ್ರಾರಂಭಿಸುವುದು. ಇವೇ ಮೊದಲಾದವುಗಳು ಈ ಯೋಜನೆ ಮುಖ್ಯ ಉದ್ದೇಶಗಳಾಗಿರುತ್ತವೆ.

ಸರ್ಕಾರ ಹಮ್ಮಿಕೊಂಡಿರುವ ಈ ವಿಶೇಷ ಘಟಕ ಯೋಜನೆಯಲ್ಲಿ ದಲಿತರ ಬದುಕು ಎಷ್ಟರ ಮಟ್ಟಿಗೆ ಅಬಿವೃಧ್ಧಿಯಾಗಿದೆ, ಸ್ಥಿತ್ಯಂತರಗೊಂಡಿದೆ ಎಂಬ ಅಂಶವನ್ನು ಸರ್ಕಾರಕ್ಕೆ ಸಮಾಜಕ್ಕೆ ಹಾಗೂ ದಲಿತ ಸಮುದಾಯಕ್ಕೆ ಮನವರಿಕೆ ಮಾಡಲು ಹಾಗೂ ಯಾವ ಕ್ಷೇತ್ರದಲ್ಲಿ ಅಭಿವೃಧ್ಧಿಯಾಗಿಲ್ಲ ಎಂಬುದರ ಕಾರಣಗಳನ್ನು ಕಂಡುಹಿಡಿಯಲು ಈ ಅಧ್ಯಯನ ಪ್ರಮುಖವಾಗಿದೆ.

ಕಾರ್ಯಕ್ರಮ ಪ್ರಾರಂಭವಾಗಿ ೨೦ ವರ್ಷಗಳು ಸಂದರೂ ಈ ಯೋಜನೆಯ ಅರಿವು ದಲಿತರಲ್ಲಿ ಸಂಪೂರ್ಣವಾಗಿ ಬಂದಿರವುದಿಲ್ಲ. ಯೋಜನೆಯ ಅರಿವು ಮೂಡಿಸಿ ಅದರ

ಲಾಭ ಪಡೆದು ಸಮಾಜದ ಮುಖ್ಯವಾಹಿನಿಗೆ ಬರಲು ದಲಿತರಿಗೆ ಯೋಜನೆಯ ಅರಿವು ಮೂಡಿಸುವ ಅಗತ್ಯ ಹಿಂದೆಂದಿಗಿಂತಲೂ ಈಗ ತುರ್ತಾಗಿ ಆಗಬೇಕಾಗಿದೆ.

ವಿಶೇಷ ಘಟಕ ಯೋಜನೆಯಡಿಯಲ್ಲಿ ದಲಿತರ ಸರ್ವತೋಮುಖ ಅಭಿವೃದ್ಧಿಯಾಗಬೇಕಾಗಿದೆ. ಈ ಯೋಜನೆಯಲ್ಲಿ ಸಾಕಷ್ಟು ಹಣ ಖರ್ಚುಮಾಡಿದ್ದರೂ, ಸರ್ಕಾರ ನಿರೀಕ್ಷಿಸಿದಷ್ಟು ಗುರಿ ಸಾಧಿಸಿರುವುದಿಲ್ಲ. ಶೈಕ್ಷಣಿಕ ಸೌಲಭ್ಯಗಳ ಮೂಲಕ ಆರ್ಥಿಕಾಭಿವೃದ್ಧಿಯ ಪ್ರಯೋಜನ ಪಡೆಯಲು ಸಾಧ್ಯ ಎಂಬುದರ ಅರಿವು ಅಗತ್ಯವಾಗಿದೆ.

ಬಳ್ಳಾರಿ ಜಿಲ್ಲೆಯ ಹಿಂದುಳಿದ ತಾಲೂಕಿನಲ್ಲೊಂದಾಗಿರುವ ಹಗರಿಬೊಮ್ಮನಹಳ್ಳಿ ತಾಲೂಕಿನ ದಲಿತ ಕುಟುಂಬಗಳ ವಿವರ, ಅಲ್ಲಿರುವ ಜನಸಂಖ್ಯೆ, ಅವರ ಶೈಕ್ಷಣಿಕ ಮಟ್ಟ ಆರ್ಥಿಕ ಮತ್ತು ಸಾಮಾಜಿಕ ಸ್ಥಾನಮಾನಗಳ ಬಗ್ಗೆ ಈ ಅಧ್ಯಯನದಲ್ಲಿ ವಿವರವಾಗಿ ವಿಶ್ಲೇಷಣೆ ಮಾಡಲಾಗಿದೆ.

ಪರಿಶಿಷ್ಟ ಜಾತಿಯಲ್ಲಿ ಸುಮಾರು ೧೦೧ ಜಾತಿಗಳು ಸೇರಿದ್ದು, ಅದರಲ್ಲಿ ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿರುವ ಪರಿಶಿಷ್ಟ ಜಾತಿಗಳು ಎಷ್ಟೆಷ್ಟು ಪ್ರಮಾಣದಲ್ಲಿ ಈ ಯೋಜನೆಯ ಲಾಭವನ್ನು ಪಡೆದುಕೊಂಡಿವೆ ಎಂಬುದರ ಬಗ್ಗೆ ತುಲನಾತ್ಮಕ ಅಧ್ಯಯನ ನಡೆಸಲಾಗಿದೆ. ಹಾಗೆಯೇ ಈ ಅಧ್ಯಯನದಲ್ಲಿ ಯೋಜನೆಯ ಲಾಭ ಪಡೆಯುವಲ್ಲಿ ದಲಿತರು ಎದುರಿಸುತ್ತಿರುವ ಸಮಸ್ಯೆಯನ್ನು ಅರಿಯಲು ಪ್ರಯತ್ನಿಸಲಾಗಿದೆ. ವಿಶೇಷ ಘಟಕ ಯೋಜನೆಯಡಿಯಲ್ಲಿ ಮುಂದುರೆಯುತ್ತಿರುವ ಕಲ್ಯಾಣ ಕಾರ್ಯಕ್ರಮಗಳ ಬಗ್ಗೆ ಮೌಲ್ಯಮಾಪನ ಮಾಡುವುದೂ ಸಹ ಈ ಅಧ್ಯಯನದ ಭಾಗವಾಗಿದೆ.

ವಿಶೇಷ ಘಟಕ ಯೋಜನೆಯನ್ನು ಅನುಷ್ಠಾನಗೊಳಿಸಲು ಎದುರಾಗಬಹುದಾದ ಸಾಧಕ ಭಾದಕಗಳನ್ನು ಪತ್ತೆ ಹಚ್ಚುವುದು, ಈ ಯೋಜನೆಯಡಿಯಲ್ಲಿ ದಲಿತರ ಸರ್ವತೋಮುಖ ಅಭಿವೃದ್ಧಿಪಡಿಸಲು ಬೇಕಾಗುವ ಇತರೆ ಪೂರಕ ಯೋಜನೆಗಳನ್ನು ರೂಪಿಸಲು ಸರ್ಕಾರಕ್ಕೆ ಸಲಹೆ ನೀಡುವುದು, ಇಲ್ಲಿಯವರೆಗೆ ಆಗಿರುವ ಪ್ರಗತಿ ನಿರೀಕ್ಷಿಸಿದ ಮಟ್ಟದಲ್ಲಿ ಗುರಿ ತಲುಪಿದೆಯೇ ಅಥವಾ ಇಲ್ಲವೇ ಎಂಬುದರ ಬಗ್ಗೆ ಸ್ಪಷ್ಟ ಚಿತ್ರಣವನ್ನು ನೀಡುವಂತೆ ಮಾಹಿತಿಯನ್ನು ಸಂಗ್ರಹಿಸಿ ಪರಾಮರ್ಶಿಸಲು ಪ್ರಯತ್ನಿಸಲಾಗಿದೆ. ಸರ್ಕಾರದಿಂದ ಅನುಷ್ಠಾನಗೊಳ್ಳುತ್ತಿರುವ ದಲಿತರ ಅಭಿವೃದ್ಧಿ ಪರ ಯೋಜನೆಗಳ ಬಗ್ಗೆ ಅಧ್ಯಯನ ಕಾಲದಲ್ಲಿ ಅವರಿಗೆ ಅರಿವು ಮೂಡಿಸುವುದು, ದಲಿತರ ಅಭಿವೃದ್ಧಿಗಾಗಿ ಸರ್ಕಾರ ಅಥವಾ ಸರ್ಕಾರೇತರ ಸಂಸ್ಥೆಗಳು ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಮಾಡಬಹುದಾದ ಪೈಲೆಟ್ ಪ್ರಾಜೆಕ್ಟ್‌ಗೆ ಬೇಕಾಗುವ ಅಗತ್ಯ ಮಾಹಿತಿಗಳನ್ನೊದಗಿಸುವುದು, ವಿಶೇಷ ಘಟಕ ಯೋಜನೆಯಲ್ಲಿ ಇದುವರೆಗೆ ಆಗಿರುವ ಸ್ವತ್ತುಗಳ ನಿರ್ಮಾಣದ ಮೌಲ್ಯಮಾಪನ ನಡೆಸಿ ಅಭಿವೃದ್ಧಿ ಎಷ್ಟು ಮಟ್ಟದಲ್ಲಾಗಿದೆ ಎಂಬುದರ ಸತ್ಯವನ್ನು ಕಂಡುಹಿಡಿಯಲು ಅದರಲ್ಲಾಗಿರುವ ಸ್ಥಿತ್ಯಂತರಗಳನ್ನು ಅಧ್ಯಯನ ಮಾಡಲು ಇಲ್ಲಿ ಪ್ರಯತ್ನಿಸಲಾಗಿದೆ.

**ಪರಿಶಿಷ್ಟ ಜಾತಿ ಜನರ ಅಭಿವೃದ್ಧಿಯ ಉದ್ದೇಶ**

೧. ಪರಿಶಿಷ್ಟ ಜಾತಿ ಜನರ ಹಿತಾಸಕ್ತಿಗಳನ್ನು ರಕ್ಷಿಸಲು ಕಾನೂನಿನ ಕಾಯ್ದೆಯ ಬೆಂಬಲ ಒದಗಿಸುವುದು.

೨. ಈ ಜನಾಂಗದ ಜನರ ಜೀವನ ಮಟ್ಟವನ್ನು ಅಭಿವೃದ್ಧಿಪಡಿಸುವುದು. ಇದಲ್ಲದೆ ಉದ್ಯೋಗ ಮತ್ತು ತರಬೇತಿ, ಚುನಾವಣೆಯಲ್ಲಿ ಜನರು ಸ್ಪರ್ದಿಸಲು ಮೀಸಲಾತಿ ಇತ್ಯಾದಿಗಳನ್ನು ಜಾರಿಗೊಳಿಸುವುದು. ಮೇಲೆ ತಿಳಿಸಿರುವ ಯೋಜನೆಗಳಲ್ಲಿ ಮುಖ್ಯವಾದವು.

ಪರಿಶಿಷ್ಟ ಜಾತಿಗಳ ಜನಪರ ಯೋಜನೆಗಳನ್ನು ನೇರವಾಗಿ ಫಲಾನುಭವಿಗಳಿಗೆ ಮುಟ್ಟಿಸಲು ಹಾಗೂ ಅನಾವಶ್ಯಕ ವಿಳಂಬ ತಡೆಯಲು ಮತ್ತು ಪರಿಣಾಮಕಾರಿಯಾಗಿ ಯೋಜನೆಗಳನ್ನು ಪರೀವಿಕ್ಷಿಸಲು ಅನುಕೂಲವಾಗುವಂತೆ ಅಧಿಕಾರ ವಿಕೇಂದ್ರಿಕರಿಸಿ ಜಿಲ್ಲಾ, ತಾಲೂಕ ಹಾಗೂ ಗ್ರಾಮ ಪಂಚಾಯಿತಿಗಳ ಮೂಲಕ ಜಾರಿಗೊಳಿಸಲಾಗಿದೆ.

**ಪಲಾನುಭವಿಗಳ ಸಾಮಾಜಿಕ ಆರ್ಥಿಕ ಹಿನ್ನಲೆ**

ಯಾವುದೇ ಕ್ಷೇತ್ರಕ್ಕೆ ಸಂಬಂಧಿಸಿದ ಜನತೆಗೆ ಸಂಬಂಧಿಸಿದ ಅಧ್ಯಯನವನ್ನು ಕೈಗೊಳ್ಳಬೇಕಾದಾಗ ಮೊದಲು ಆ ಕ್ಷೇತ್ರದ ಹಿನ್ನಲೆ ಅರಿಯುವುದು ಅವಶ್ಯಕ ಜನತೆಗೆ ಸಂಬಂಧಿಸಿದ್ದರೆ ಅವರ ಸಾಮಾಜಿಕ, ಆರ್ಥಿಕ, ಜೀವನವನ್ನು ತಿಳಿದುಕೊಳ್ಳುವುದು ಅವಶ್ಯಕ. ಈ ಸಂಗತಿಯನ್ನು ಒಳಗೊಳ್ಳದೇ ನಾವೂ ಯಾವುದೇ ನಿರ್ಧಾರಕ್ಕೆ ಬರಲಾಗುವುದಿಲ್ಲ. ಸಾಮಾಜಿಕ ಜೀವನದಲ್ಲಿ ಸಾಕ್ಷರತೆ ಔಪಚಾರಿಕ ಶಿಕ್ಷಣ, ಜನಸಂಖ್ಯೆ, ಲಿಂಗ ಪ್ರಮಾಣ, ಧರ್ಮ ಮತ್ತು ಜಾತಿಗಳ ಮಾಹಿತಿ ತಿಳಿಯುವುದು ಅವಶ್ಯಕ. ಈ ಎಲ್ಲಾ ಅಂಶಗಳು ಜನರ ಅಭಿವೃದ್ಧಿಗೆ ಕಾರಣವಾಗಬಲ್ಲವುಗಳಾಗಿವೆ. ಯಾವುದೇ ಯೊಜನೆಯು ಯಶಸ್ವಿ ಮತ್ತು ವೈಪಲ್ಯಕ್ಕೆ ಒಂದು ಅಂಶ ಕಾರಣವಾಗುವುದಿಲ್ಲ. ಅಲ್ಲಿ ಬಹು ವಿದವಾದ ಕಾರಣಗಳಿರುತ್ತವೆ. ಈ ರೀತಿಯ ಕಾರಣಗಳು ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆಗೆ ಯಾವ ರೀತಿಯಲ್ಲಿ ಪೂರಕವಾಗಿವೆ ಎಂಬುನ್ನು ಇಲ್ಲಿ ನೋಡಬಹುದಾಗಿದೆ

ಪ್ರಸ್ತುತ ಅಧ್ಯಯನದಲ್ಲಿ ಮಾಹಿತಿಯನ್ನು ಪುರುಷ ಹಾಗೂ ಮಹಿಳಾ ಪಲಾನುಭವಿಗಳಿಂದ ಪಡೆದುಕೊಳ್ಳಲಾಗಿದೆ. ಒಟ್ಟು ೩೩ ಜನರಿಂದ ಇಲ್ಲಿ ಮಾಹಿತಿ ಸಂಗ್ರಹಿಸಿದೆ. ಪುರುಷರು ಮತ್ತು ಮಹಿಳೆಯರು ಯಾವ ಕಾರಣಗಳಿಂದ ಯೋಜನೆಯ ಫಲ ದೊರಕಿಸಿಕೊಳ್ಳುವಲ್ಲಿ ವಿಪಲರಾಗಿದ್ದಾರೆ, ಮತ್ತು ಪ್ರಯೋಜನವಾದಲ್ಲಿ ಅವರಿಗೆ ಯಾವ ಅಂಶಗಳು ಸಹಾಯಕವಾಗಿವೆ ಎಂಬುದನ್ನು ತಿಳಿಯಬಹುದು. ಅದೇ ರೀತಿಯಲ್ಲಿ ಮಹಿಳೆಯರಿಗೂ ಸಹ ಯೋಜನೆ ಯಾವರೀತಿಯಲ್ಲಿ ಸಾಧಕ-ಬಾಧಕವಾಗಿವೆ ಎಂದು ತಿಳಿಯಬಹುದು.

ಕರ್ನಾಟಕ ಸರ್ಕಾರ ಪರಿಶಿಷ್ಟ ಜಾತಿಯವರ ಅಭಿವೃದ್ಧಿಗಾಗಿ ಸಮಾಜ ಕಲ್ಯಾಣ ಇಲಾಖೆಯ ಮೂಲಕ ವಿವಿಧ ಉದ್ದೇಶಗಳಿಗೆ ಬಿಡುಗಡೆಯಾದ ಅನುದಾನದ ವಿವರಗಳನ್ನು ಈ ಕೆಳಗಿನ ಕೋಷ್ಟಕದಲ್ಲಿ ತುಲನಾತ್ಮಕವಾಗಿ ತಾಳೆ ನೋಡಲಾಗಿದೆ.

## ಕೋಷ್ಟಕ ೬.೧

### ಸಮಾಜ ಕಲ್ಯಾಣ ಇಲಾಖೆ ಅನುಷ್ಠಾನಿಸುವ (ಪ.ಜಾ. / ಪ.ಪಂ. ಅಭಿವೃದ್ಧಿ ನಿಗಮ ಹಾಗು ಕ.ನಿ. ಶಾ. ಸಂ.ಸಂ. ಹೊರತುಪಡಿಸಿ/ ಪರಿಶಿಷ್ಟ ಜಾತಿ ಕಲ್ಯಾನ ಕಾರ್ಯಕ್ರಮಗಳಿಗೆ 2004 - 2005 ಹಾಗೂ 2003 - 2004 ನೇ ಸಾಲುಗಳಲ್ಲಿ ಒದಗಿಸಿದ ಒಟ್ಟಾರೆ ಅನುದಾನದ ತುಲನಾತ್ಮಕ ನೋಟ

(ರೂ. ಲಕ್ಷಗಳಲ್ಲಿ)

| ಪರಿಶಿಷ್ಟ ಜಾತಿ ಕಲ್ಯಾಣ ಕಾರ್ಯಕ್ರಮ | ಯೋಜನೆ | | | ಯೋಜನೇತರ | ಒಟ್ಟು |
|---|---|---|---|---|---|
| 2004 - 05 | ರಾಜ್ಯ | ಕೇಂದ್ರ | ಒಟ್ಟು | | |
| ರಾಜ್ಯ ವಲಯ | 7585.35 | 1227.00 | 8812.35 | 1081.29 | 9893.64 |
| ಜಿಲ್ಲಾ ವಲಯ | 2358.23 | 1388.91 | 3747.14 | 11781.00 | 15528.14 |
| **ಪರಿಶಿಷ್ಟ ಜಾತಿ ಒಟ್ಟು ಮೊತ್ತ** | 9943.58 | 2615.91 | 12559.49 | 12862.29 | 25421.78 |
| 2003- 2004 | | | | | |
| ರಾಜ್ಯ ವಲಯ | 13087.40 | 1227.00 | 14314.40 | 1082.91 | 15397.31 |
| ಜಿಲ್ಲಾ ವಲಯ | 2211.99 | 1220.14 | 3432.13 | 11467.28 | 14899.41 |
| **ಪರಿಶಿಷ್ಟ ಜಾತಿ ಒಟ್ಟು ಮೊತ್ತ** | 15299.39 | 2447.14 | 17746.53 | 12550.19 | 30296.72 |

## ಕೋಷ್ಟಕ ೬.೨

### 2004-05 ನೇ ಸಾಲಿನ ಆಯವ್ಯಯದಲ್ಲಿ 2003-04 ನೇ ಸಾಲಿಗೆ ತುಲನಾತ್ಮಕವಾಗಿ ವಾಸ್ತವಿಕ ಮತ್ತು ಶೇಕಡ ಹೆಚ್ಚಳ / ಇಳಿಕೆ

ಪರಿಶಿಷ್ಟ ಜಾತಿ ಕಲ್ಯಾಣ

ರಾಜ್ಯ ವಲಯ

| | | | | | |
|---|---|---|---|---|---|
| ವಾಸ್ತವಿಕ ಹೆಚ್ಚಳ / ಇಳಿಕೆ | -5502.05 | 0.00 | -5502.05 | -1.62 | -5503.67 |
| ಶೇಕಡ ಹೆಚ್ಚಳ / ಇಳಿಕೆ | -42.04 | 0.00 | -38.44 | -0.15 | -35.74 |
| ಜಿಲ್ಲಾ ವಲಯ | | | | | |
| ವಾಸ್ತವಿಕ ಹೆಚ್ಚಳ / ಇಳಿಕೆ | 146.24 | 168.77 | 315.01 | 313.72 | 628.73 |
| ಶೇಕಡ ಹೆಚ್ಚಳ / ಇಳಿಕೆ | 6.61 | 13.83 | 9.18 | 2.74 | 4.22 |

ಒಟ್ಟು

| | | | | | |
|---|---|---|---|---|---|
| ವಾಸ್ತವಿಕ ಹೆಚ್ಚಳ/ಇಳಿಕೆ | -5355.81 | 168.77 | -5187.04 | 312.10 | -4874.94 |
| ಶೇಕಡ ಹೆಚ್ಚಳ / ಇಳಿಕೆ | -35.01 | 6.90 | -29.23 | 2.49 | -16.09 |

## ಕೋಷ್ಟಕ ೬.೩

(ರೂ. ಲಕ್ಷಗಳಲ್ಲಿ)

| ಪರಿಶಿಷ್ಟ ಜಾತಿ ಕಲ್ಯಾಣ ಕಾರ್ಯಕ್ರಮ | ಯೋಜನೆ | | | ಯೋಜನೇತರ | ಒಟ್ಟು |
|---|---|---|---|---|---|
| 2004 - 05 | ರಾಜ್ಯ | ಕೇಂದ್ರ | ಒಟ್ಟು | | |
| ರಾಜ್ಯ ವಲಯ | 9496.35 | 1622.00 | 1117.35 | 1081.20 | 12198.64 |
| ಜಿಲ್ಲಾ ವಲಯ | 2358.23 | 1388.91 | 3747.14 | 11781.00 | 15528.14 |
| ಪರಿಶಿಷ್ಟ ಜಾತಿ ಒಟ್ಟು ಮೊತ್ತ | 11853.58 | 3010.91 | 14864.49 | 12862.29 | 27726.78 |
| 2003- 2004 | | | | | |
| ರಾಜ್ಯ ವಲಯ | 15867.40 | 1622.00 | 17489.40 | 1082.91 | 18572.31 |
| ಜಿಲ್ಲಾ ವಲಯ | 2211.99 | 1220.14 | 3432.13 | 11467.28 | 14899.41 |
| ಪರಿಶಿಷ್ಟ ಜಾತಿ ಒಟ್ಟು ಮೊತ್ತ | 18079.39 | 2842.14 | 20921.53 | 12550.19 | 33471.72 |

2004-05 ನೇ ಸಾಲಿನ ಆಯವ್ಯಯದಲ್ಲಿ (2003-04 ನೇ ಸಾಲಿಗೆ ಹೋಲಿಸಿ) ವಾಸ್ತವಿಕ ಮತ್ತು ಶೇಕಡ ಹೆಚ್ಚಳ / ಇಳಿಕೆ

ಪರಿಶಿಷ್ಟ ಜಾತಿ ಕಲ್ಯಾಣ

ರಾಜ್ಯ ವಲಯ

| | | | | | |
|---|---|---|---|---|---|
| ವಾಸ್ತವಿಕ ಹೆಚ್ಚಳ / ಇಳಿಕೆ | -6372.05 | 0.00 | -6372.05 | -1.62 | -6373.67 |
| ಶೇಕಡ ಹೆಚ್ಚಳ / ಇಳಿಕೆ | -40.16 | 0.00 | -36.43 | -0.15 | -34.32 |
| ಜಿಲ್ಲಾ ವಲಯ | | | | | |
| ವಾಸ್ತವಿಕ ಹೆಚ್ಚಳ / ಇಳಿಕೆ | 146.24 | 168.77 | 315.01 | 313.72 | 628.73 |
| ಶೇಕಡ ಹೆಚ್ಚಳ / ಇಳಿಕೆ | 6.61 | 13.83 | 9.18 | 2.74 | 4.22 |
| ಒಟ್ಟು | | | | | |
| ವಾಸ್ತವಿಕ ಹೆಚ್ಚಳ/ಇಳಿಕೆ | -6225.81 | 168.77 | -6057.04 | 312.10 | -5744.94 |
| ಶೇಕಡ ಹೆಚ್ಚಳ / ಇಳಿಕೆ | -34.44 | 5.94 | -28.95 | 2.49 | -17.16 |

## ಆ. ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ವಿಶೇಷ ಘಟಕ ಯೋಜನೆಯ ಅನುಷ್ಠಾನ

ಹಗರಿಬೊಮ್ಮನಹಳ್ಳಿ ತಾಲೂಕು ಬಳ್ಳಾರಿ ಜಿಲ್ಲೆಯ ಅತಿ ಹಿಂದುಳಿದ ತಾಲೂಕಿನಲ್ಲೊಂದಾಗಿದೆ. ಹೈದ್ರಾಬಾದ್ ಕರ್ನಾಟಕ ಯೋಜನೆ ಅಭಿವೃದ್ಧಿ ಕಾರ್ಯಕ್ರಮಗಳ ವ್ಯಾಪ್ತಿಯಲ್ಲಿ ಈ ತಾಲೂಕಿನ ಪ್ರಗತಿಗಾಗಿ ಸರ್ಕಾರ ಸಾಕಷ್ಟು ಪ್ರಯತ್ನ ಮಾಡಲಾಗಿದ್ದರೂ ಈ ಭಾಗದ ಪರಿಶಿಷ್ಟಜಾತಿಯ ಜನರ ಬದುಕು ತೀರಾ ಕ್ಷೀಣಿಸಿರುವುದು ಕ್ಷೇತ್ರಕಾರ್ಯದಿಂದ ತಿಳಿದು ಬಂದಿರುತ್ತದೆ. ಪರಿಶಿಷ್ಟಜಾತಿಯ ಜನರ ಸರ್ವೋತೋಮುಖ ಅಭಿವೃದ್ಧಿಗಾಗಿಯೇ ಇರುವ ವಿಶೇಷ ಘಟಕ ಯೋಜನೆಯು ೧೯೮೫-೮೬ ರಿಂದ ಈ ತಾಲೂಕಿನಲ್ಲಿ ಅನುಷ್ಠಾನಗೊಂಡಿರುವುದು ತಿಳಿದುಬರುತ್ತದೆ. ಸದರಿ ತಾಲೂಕಿನಲ್ಲಿರುವ ಪರಿಶಿಷ್ಟ ಜಾತಿಯ ಬಹುತೇಕ ಬಡತನ ರೇಖೆಗಿಂತ ಕೆಳಗಿರುವವರನ್ನು ಗುರುತಿಸಿ ಬಡತನ ರೆಖೇಗಿಂತ ಮೇಲೆ ತರುವ ಕಾರ್ಯಕ್ರಮವನ್ನು ವಿಶೇಷ ಘಟಕ ಯೋಜನೆಯಲ್ಲಿ ಹಲವಾರು ಆರ್ಥಿಕ ಚಟುವಟಿಕೆಗಳನ್ನು ಜಾರಿಗೆ ತರಲಾಗಿದೆ. ಅಂತೆಯೇ ಸಾಮಾಜಿಕ ನೆರವು ಮತ್ತು ಶೈಕ್ಷಣಿಕ ನೆರವಿನ ಸೌಲಭ್ಯಗಳನ್ನು ಒದಗಿಲಾಗುತ್ತಿದೆ. ಪರಿಶಿಷ್ಟ ಕಾಲನಿಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು, ಸಂಪರ್ಕ ರಸ್ತೆ ಹಾಗು ಸೇತುವೆಗಳ ನಿರ್ಮಾಣ, ಕುಡಿಯುವ ನೀರಿನ ಪೂರೈಕೆ, ಚರಂಡಿ ವ್ಯವಸ್ಥೆ, ಬೀದಿ ದೀಪಗಳ ಸೌಕರ್ಯ, ವಸತಿ ನಿರ್ಮಾಣ ಇತ್ಯಾದಿ ಸೌಲಭ್ಯ ನೀಡಲು ಪ್ರಾಮುಖ್ಯತೆ ನೀಡಲಾಗಿದೆ. ವಿಶೇಷ ಘಟಕ ಯೋಜನೆಯನ್ನು ವಿವಿದ ಅಭಿವೃದ್ಧಿ ಇಲಾಖೆಗಳಾದ ಸಮಜಕಲ್ಯಾಣ, ಕೃಷಿ, ಕೈಗಾರಿಕೆ ತೋಟಗಾರಿಕೆ, ಪಶುಸಂಗೋಪನೆ, ರೆಷ್ಮೆ, ಮೀನುಗಾರಿಕೆ, ಅರಣ್ಯ, ಸಹಕಾರ ಇಲಾಖೆ, ಗ್ರಾಮೀಣಾಭಿವೃದ್ಧಿ, ಪಂಚಾಯತ್‌ರಾಜ್ ಇಂಜನಿಯರಿಂಗ್, ಮಹಿಳಾ ಮತ್ತು ಮಕ್ಕಳ ಕಲ್ಯಾಣ, ಕರ್ನಾಟಕ ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ ಇವೇ ಮೊದಲಾದ ಇಲಾಖೆಗಳ ಮೂಲಕ ಪರಿಶಿಷ್ಟಜಾತಿಯಲ್ಲಿ ಬರುವ ಬಡತನ ರೇಖೆಗಿಂತ ಕೆಳಗೆ ಜೀವಿಸುತ್ತಿರುವ ಕಡುಬಡವರನ್ನು ಆಯ್ಕೆ ಮಾಲಾಗುವುದು. ಪಲಾನುಭವಿಗಳ ಆಯ್ಕೆಯು ಆಯ್ದ ಗುಂಪು ಗ್ರಾಮಗಳಲ್ಲಿ ಗ್ರಾಮ ಸಭೆಗಳಲ್ಲಿ ಸರ್ಕಾರಿ ನಿಯಮಾವಳಿಗಳ ಮೂಲಕ ಆಯ್ಕೆ ಮಾಡಲಾಗುವುದು ಆಯ್ಕೆಯಾದ ಫಲಾನುಭವಿಗಳಿಗೆ ನಿರಂತರ ಆಧಾಯ ತರುವಂತಹ ಆರ್ಥಿಕ ಚಟುವಟಿಕೆಗಳನ್ನು ನಡೆಸಲು ಸಹಾಯಧನ ನೀಡುವುದರ ಜೊತೆಗೆ ರಾಷ್ಟ್ರೀಕೃತ ಬ್ಯಾಂಕ್ ಅಥವಾ ಇತರೆ ಅಧಿಕೃತ ಹಣಕಾಸು ಸಂಸ್ಥೆಗಳ ಮೂಲಕ ಸಾಲಗಳನ್ನು ಕೊಡಿಸಿ ಆರ್ಥಿಕ ಚಟುವಟಿಕೆ ಕೈಗೊಳ್ಳಲು ನಿಯಮಗಳನ್ನು ರೂಪಿಸಲಾಗಿದೆ. ಅಂತೆಯೇ ಸರ್ಕಾರದ ವಿವಿದ ಅಭಿವೃದ್ಧಿ ಇಲಾಖೆಗಳು ವಿಶೇಷ ಘಟಕ ಯೋಜನೆಯಡಿಯಲ್ಲಿ ಅನುಷ್ಠಾನಗೊಳಿಸುತ್ತಿರುವ ಕಾರ್ಯಕ್ರಮಗಳು ಮತ್ತು ಒದಗಿಸಿರುವ ಸೌಲಭ್ಯಗಳ ವಿವರಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

### ೧. ಸಮಾಜ ಕಲ್ಯಾಣ ಇಲಾಖೆ

ಸಮಾಜದಲ್ಲಿ ತುಳಿತಕ್ಕೊಳಗಾದ ನಿರಂತರ ದೌರ್ಜನ್ಯ ದಬ್ಬಾಳಿಕೆಗಳಿಂದ ನಲುಗುತ್ತಿರುವ ದಲಿತರಿಗೆ ಆಶಾಕಿರಣವಾಗಿರುವ ಮತ್ತು ಪರಿಶಿಷ್ಟಜಾತಿ ಜನರ ಸರ್ವಾಂಗೀಣ ಪ್ರಗತಿಗಾಗಿ ನಿರಂತರ ಪರಿಶ್ರಮಿಸುತ್ತಿರುವ ಇಲಾಖೆಯೇ ಸಮಾಜ ಕಲ್ಯಾಣ ಇಲಾಖೆ. ಈ ಇಲಾಖೆಯ ಮೂಲಕ ಅರ್ಹ ಪರಿಶಿಷ್ಟಜಾತಿಯ ಕಡುಬಡತನದ ಫಲಾನುಭವಿಗಳಿಗೆ ನಿರಂತರ ಆದಾಯ ತರುವಂತಹ ಕಸುಬಗಳಾದ ಕಿರಾಣಿ ವ್ಯಾಪಾರ,ಹೋಟೆಲ್,ತರಕಾರಿಅಂಗಡಿ, ಬಟ್ಟೆ ವ್ಯಾಪಾರ, ಸೈಕಲ್ ಶಾಪ್, ಚಪ್ಪಲಿ ಅಂಗಡಿ, ಪೋಟೋ ಮತ್ತು ವಿಡಿಯೋ ಶಾಪ್‌ಗಳು, ವಾಚ್ ವರ್ಕ್ಸ್, ಚರ್ಮಗಾರಿಕೆ, ಜಾಬ್ ಟೈಪಿಂಗ್, ಕಾಳುಹೊಕ್ಕುವ ಯಂತ್ರ, ಕನ್ನಡಕದ ಅಂಗಡಿ,ಟೈಲರಿಂಗ್ ಶಾಪ್ ಮೈಕಸೆಟ್ ,ಎಸ್.ಟಿ.ಡಿ ಬೂತ್,ಟೈಲರಿಂಗ್ ಹಿಟ್ಟಿನಗಿರಣಿ ಡಿ.ಟಿ.ಪಿ ವರ್ಕ್ಸ್, ಇಟ್ಟಂಗಿಬಟ್ಟಿ, ಬಡಿಗಿತನ, ಸೆಂಟ್ರಿಂಗ್ ವರ್ಕ್ಸ್,ಕಾರಕುಟ್ಟುವಯಂತ್ರ ಇವೇ ಮೊದಲಾದ ವೃತ್ತಿಗಳನ್ನು ಕೈಗೊಳ್ಳಲು ಇಲಾಖೆಯಿಂದ ಶೇ ೬೦ % ರಷ್ಟು ಸಹಾಯಧನ ಅಂದರೆ ಘಟಕ ವೆಚ್ಚದ ಗರಿಷ್ಟ ರೂ ೧೦,೦೦೦-೦೦ (ಹತ್ತು ಸಾವಿರಗಳನ್ನು) ನೀಡುವುದರ ಜೊತೆಗೆ ಉಳಿದ ಶೇ ೪೦% ರಷ್ಟನ್ನು ಸಾಲದ ರೂಪದಲ್ಲಿ ನೀಡಿ ಸ್ವತ್ತುಗಳನ್ನು ಕಲ್ಪಿಸಿಕೊಡಲಾಗಿದೆ. ಸಮಾಜಕಲ್ಯಾಣ ಇಲಾಖೆಯಿಂದ ನಿರಂತರ ಆದಾಯ ತರುವ ಯೋಜನೆಗೆ ಒದಗಿಸಿದ ಅನುದಾನದಿಂದ ಸಾಧಿಸಿದ ಪ್ರಗತಿಯನ್ನು ಈ ಮುಂದಿನ ಕೋಷ್ಟಕದಲ್ಲಿ ವಿವರಿಸಾಗಿದೆ.

ಕೋಷ್ಟಕ-೬.೪

**ವಿಶೇಷ ಘಟಕ ಯೋಜನೆಯಡಿಯಲ್ಲಿ ಕಳೆದ ೫ ವರ್ಷಗಳಲ್ಲಿ ಸಮಾಜ ಕಲ್ಯಾಣ ಇಲಾಖೆಯಲ್ಲಿ ಸಾಧಿಸಿದ ಪ್ರಗತಿಯ ವಿವರ**

| ಕ್ರ.ಸಂ. | ವರ್ಷ | ನಿಗದಿ ಪಡಿಸಿದ ಅನುದಾನ | ಬಿಡುಗಡೆಯಾದ ಮೊತ್ತ | ಖರ್ಚು |
|---|---|---|---|---|
| 01. | 1998 - 1999 | 4.20 | 4.03 | 4.03 |
| 02. | 1999 - 2000 | 2.00 | 2.00 | 2.00 |
| 03. | 2000 - 2001 | 2.00 | 0.586 | 0.586 |
| 04. | 2001 - 2002 | 2.00 | 0.80 | 0.80 |
| 05. | 2002 - 2003 | 2.00 | 0.28 | 0.28 |
| | ಒಟ್ಟು | 12.20 | 7.696 | 7.696 |

ಮೇಲಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಸಮಾಜ ಕಲ್ಯಾಣ ಇಲಾಖೆವತಿಯಿಂದ ೧೯೯೮-೯೯ ರಿಂದ ೨೦೦೨-೦೩ ರ ವರೆಗೆ ಒಟ್ಟು ೧೨.೨೦ ಲಕ್ಷ ರೂಗಳನ್ನು ನಿಗದಿ ಪಡಿಸಲಾಗಿದ್ದು ಅದರಲ್ಲಿ ೭.೬೯೬ ಲಕ್ಷ ರೂಪಾಯಿಗಳು ಮಾತ್ರ ಸರ್ಕಾರದಿಂದ ಬಿಡುಗಡೆಯಾಗಿರುವುದು



ವಿಶೇಷ ಘಟಕ ಯೋಜನೆಯಡಿ ಬಸಿ ಕಲು ಗ್ರಾಮದ ಎಚ್.ಕೊಟ್ರೇಶ,
ಇವರಿಗೆ ಸ್ವಯಂ ಉದ್ಯೋಗಕ್ಕಾಗಿ ಕಲಿ ಸಿಕೊಟ್ಟಿರುವ ಮೈಕ್ ಸೆಟ್



ವಿಶೇಷ ಘಟಕ ಯೋಜನೆಯಡಿಯಲಿ ಶ್ರೀ ಕೆ.ಪರುಶುರಾಮ ಹಗರಿಬೊಮ್ಮನ ಹಳ್ಳಿ
ಇವರಿಗೆ ಸ್ವಯಂ ಉದ್ಯೋಗಕ್ಕಾಗಿ ಹೋಲಿಗೆ ಯಂತ್ರಗಳನು ಹೊಂದಿರುವ ಟೈಲರಿಂಗ್ ಶಾಪ್



ಸಮಾಜ ಕಲ್ಯಾಣ ಇಲಾಖೆಯಿಂದ ವಿಶೇಷ ಘಟಕ ಯೋಜನೆಯಡಿಯಲಿ
ಶ್ರೀ ಎಚ್. ಗಾಳೆಪ ತೆಲುಗೋಳಿ ಇವರಿಗೆ ನೀಡಿರುವ ಸೈಕಲ್ ಶಾಪ್






ಸಮಾಜ ಕಲ್ಯಾಣ ಇಲಾಖೆಯಿಂದ ಮಹಾಸತಿ ಅನುಸೂಯ ಸ್ವಸಹಾಯ ಗುಂಪು ಮಾದೂರು
ವಿಶೇಷ ಘಟಕ ಯೋಜನೆಯಡಿ ನೀಡಿರುವ ಹೊಲಿಗೆ ಯಂತ್ರಗಳು

ಕಂಡುಬರುತ್ತದೆ, ಬಂದಿರುವ ಅನುದಾನವನ್ನೆಲ್ಲಾ ಪೂರ್ಣ ಪ್ರಮಾಣದಲ್ಲಿ ಖರ್ಚು ಮಾಡಲಾಗಿದ್ದು ೭೭ ಜನರಿಗೆ ವಿವಿದ ರೀತಿಯ ನಿರಂತರ ಆಧಾಯ ತರುವ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗಿದೆ. ಇದರಲ್ಲಿ ಶೇ ೭೦% ರಷ್ಟು ಫಲಾನುಭವಿಗಳ ಆರ್ಥಿಕ ಮಟ್ಟ ಸುಧಾರಣೆಯಾಗಿರುವುದು ಕಂಡು ಬರುತ್ತದೆ.

**ಪಶುಸಂಗೋಪನಾ ಇಲಾಖೆ :-**

ಹೈನುಗಾರಿಕೆಯಲ್ಲಿ ಆಸಕ್ತಿ ಹೊಂದಿರುವ ಪರಿಶಿಷ್ಟ ಜಾತಿ ಫಲಾನುಭವಿಗಳಿಗೆ ಈ ಇಲಾಖೆಯವತಿಯಿಂದ ಎಮ್ಮೆಗಳು, ಮಿಶ್ರತಳಿ ಹಸುಗಳು, ಕುರಿಘಟಕ,ಹಂದಿಘಟಕ,ಇವೇ ಮೊದಲಾದ ಪಶುಸಂಗೊಪನ ಚಟುವಟಿಕೆಗಳಿಗೆ ಶೇ ೬೦% ರಷ್ಟು ಸಹಾಯಧನ ಮತ್ತು ಶೇ ೪೦% ಬ್ಯಾಂಕ್ ಸಾಲವನ್ನು ಒದಗಿಸಿ ಸ್ವತ್ತು ನಿರ್ಮಾಣ ಮಾಡಲಾಗಿರುತ್ತದೆ.

೧) ಹಸು ಘಟಕ ವೆಚ್ಚ ರೂ. ೧೭೨೦೦ ರೂ

೨) ಎಮ್ಮೆ ಘಟಕ ವೆಚ್ಚ ರೂ. ೧೨೨೦೦ ರೂ

೩) ಕುರಿ ಘಟಕದ ವೆಚ್ಚ ರೂ. ೧೧೨೦೦ ರೂ

೪) ಹಂದಿ ಘಟಕದ ವೆಚ್ಚ ರೂ. ೭೩೪೫ ರೂ

ಈ ಘಟಕದ ವೆಚ್ಚಗಳ ನಬಾರ್ಡ್ ನಿಯಮಾವಳಿಗಳ ಪ್ರಕಾರ ಕಾಲದಿಂದ ಕಾಲಕ್ಕೆ ಬದಲಾವಣೆಗಳಾಗುತ್ತಿದ್ದು ಸಹಾಯಧನದ ಮೊತ್ತವು ಗರಿಷ್ಠ ೧೦,೦೦೦=೦೦ ರೂಗಳಾಗಿರುತ್ತದೆ. ಮೇಲಿನ ಘಟಕ ವೆಚ್ಚವನ್ನು ಮೀರಿದಲ್ಲಿ ಅದನ್ನು ಫಲಾನುಭವಿಯು ಭರಿಸಬೇಕಾಗುತ್ತದೆ ಪಶುಸಂಗೋಪನಾ ಇಲಾಖೆಯ ಪ್ರಗತಿಯ ವಿವರಗಳನ್ನು ಕೆಳಗಿನ ಕೊಷ್ಟಕದಲ್ಲಿ ವಿವರಿಸಲಾಗಿದೆ.

**ಕೋಷ್ಟಕ ೬.೫**

## ವಿಶೇಷ ಘಟಕ ಯೋಜನೆಯಡಿಯಲ್ಲಿ ಕಳೆದ 5 ವರ್ಷಗಳಲ್ಲಿ ಪಶು ಸಂಗೋಪನಾ ಇಲಾಖೆಯಲ್ಲಿ ಸಾಧಿಸಿದ ಪ್ರಗತಿ ವಿವರ

| ಕ್ರ.ಸಂ. | ವರ್ಷ | ನಿಗದಿ ಪಡಿಸಿದ ಅನುದಾನ | ಬಿಡುಗಡೆಯಾದ ಮೊತ್ತ | ಖರ್ಚು | |
|---|---|---|---|---|---|
| 01. | 1998 - 1999 | ರೂ. 1, 13, 400/- | ರೂ. 1, 13, 400/- | ರೂ. 1, 13, 400/- | 14 ಘಟಕ |
| 02. | 1999 - 2000 | ರೂ. 1, 24, 800/- | ರೂ. 1, 24, 800/- | ರೂ. 1, 24, 800/- | 13 ಘಟಕ |
| 03. | 2000 - 2001 | ರೂ. 1, 10, 000/- | ರೂ. 1, 10, 000/- | ರೂ. 1, 10, 000/- | 11 ಘಟಕ |
| 04. | 2001 - 2002 | ರೂ. 1, 80, 000/- | ರೂ. 1, 80, 000/- | ರೂ. 1, 80, 000/- | 18 ಘಟಕ |
| 05. | 2002 - 2003 | ರೂ. 3, 90, 000/- | ರೂ. 3, 90, 000/- | ರೂ. 3, 90, 000/- | 39 ಘಟಕ |
| ಒಟ್ಟು | | ರೂ. 9, 18, 200/- | ರೂ. 9, 18, 200/- | ರೂ. 9, 18, 200/- | 95 ಘಟಕ |



ವಿಶೇಷ ಘಟಕ ಯೋಜನೆಯಡಿಯಲ್ಲಿ ಶ್ರೀಮತಿ ಸಿದ್ದರ ಅಂಜನಮ್ಮ, ಎಚ್. ಓಬಳಾಪುರ ಇವರಿಗೆ ಪಶುಸಂಗೋಪನ ಇಲಾಖೆಯಿಂದ ನೀಡಿರುವ ಎಮ್ಮೆ ಘಟಕ



ವಿಶೇಷ ಘಟಕ ಯೋಜನೆಯಡಿಯಲ್ಲಿ ಪಶುಸಂಗೋಪನ ಇಲಾಖೆಯಿಂದ ಶ್ರೀಮತಿ ಸಿದ್ಧ ರಾಜಮ್ಮ, ಹೆಚ್. ಓಬಳಾಪುರ ಇವರಿಗೆ ನೀಡಿರುವ ಹಸು ಘಟಕಗಳು



ಪಶುಸಂಗೋಪನ ಇಲಾಖೆಯಿಂದ ವಿಶೇಷ ಘಟಕ ಯೋಜನೆಯಡಿಯಲ್ಲಿ ಶ್ರೀಮತಿ ಯಲ್ಲವ್ವ ವಿಣಗಿ ಬಾಪೂರ ಇವರಿಗೆ ನೀಡಿರುವ ಎಮ್ಮೆ ಘಟಕಗಳು

ಮೇಲಿನ ಕೋಷ್ಟಕದಲ್ಲಿ ವಿವರಿಸಿರುವಂತೆ ೧೯೯೮-೯೯ ರಿಂದ ೨೦೦೨-೦೩ ನೇ ಸಾಲಿನವರೆವಿಗೆ ೯.೧೮೨ ಲಕ್ಷ ರೂಪಾಯಿಗಳನ್ನು ನಿಗದಿಪಡಿಸಲಾಗಿದ್ದು ಪೂರ್ಣ ಹಣ ಬಿಡುಗಡೆಯಾಗಿ ಶೇ ೧೦೦ ರಷ್ಟು ಅನುದಾನ ಸ್ವತ್ತು ನಿರ್ಮಾಣಕ್ಕೆ ಖರ್ಚಾಗಿದ್ದು ಅದರಲ್ಲಿ ೯೫ ಘಟಕಗಳನ್ನು ನಿರ್ಮಾಣ ಮಾಡಲಾಗಿರುತ್ತದೆ .ಇದು ಹೆಚ್ಚು ಉಪಯುಕ್ತವಾದ ಫಲಾನುಭವಿಗಳಿಗೆ ತುಂಬಾ ಸರಳ ಹಾಗು ಸುಲಭ ವಿಧಾನದ ಆರ್ಥಿಕ ಚಟುವಟಿಕೆಯಾಗಿದ್ದು ಬಡವರ ಜೀವನ ನಿರ್ವಹಣೆಗೆ ಅನುಕೂಲಕರವಾಗಿರುವುದು ತಿಳಿದುಬಂದಿರುತ್ತದೆ. ಆದರೂ ಕೆಲವೂ ಫಲಾನುಭವಿಗಳು ಸ್ವತ್ತುಗಳನ್ನು ದುರುಪಯೋಗ ಮಾಡಿಕೊಂಡಿರುವುದು ತಿಳಿದು ಬಂದಿರುತ್ತದೆ.

೩) ತೋಟಗಾರಿಕೆ ಇಲಾಖೆ :- ಗ್ರಾಮೀಣ ಪ್ರದೇಶದ ಬೇಸಾಯದಲ್ಲಿ ನಿರತರಾಗಿರುವ ನೀರಾವರಿ ಸೌಲಭ್ಯಗಳನ್ನು ಹೊಂದಿರುವ ಪರಿಶಿಷ್ಟ ಜಾತಿಯ ಫಲಾನುಭವಿಗಳಿಗೆ ತೋಟಗಾರಿಕಾ ಬೆಳೆಗಳನ್ನು ಬೆಳೆಯ ತೋಟ.ಕಾಲು ಎಕರೆ ಗುಲಾಬಿ ತೋಟವನ್ನು ಉಚಿತವಾಗಿ ವಿಶೇಷ ಘಟಕ ಯೋಜನೆಯಡಿಯಲ್ಲಿ ಸೌಲಭ್ಯ ಕಲ್ಪಿಸಿಕೊಡಲಾಗುತ್ತದೆ. ಪ್ರತಿವರ್ಷ ಒಬ್ಬ ಫಲಾನುಭವಿಗೆ ಒಂದು ಘಟಕ ನಿರ್ಮಾಣಕ್ಕಾಗಿ ರೂ ೨೧೬೫ ರಿಂದ ೨೭೦೦ ರೂಪಾಯಿವರೆಗೆ ವೆಚ್ಚಮಾಡಲಾಗುತ್ತಿದೆ, ಅಲ್ಲದೆ ಹಳೆಯ ತೋಟಗಳನ್ನು ಎರಡು ವರ್ಷಗಳವರೆಗೆ ತೋಟಗಾರಿಕಾ ಇಲಾಖೆಯು ಪಾಲನೆ ಮಾಡಬೇಕಾಗಿದೆ, ತೋಟದ ಪಾಲನೆಗೆ ಮೊದಲನೇ ವರ್ಷದಲ್ಲಿ ರೂ೬೫೦=೦೦ ಮತ್ತು ೨ನೇ ವರ್ಷದಲ್ಲಿ ರೂ ೩೫೦=೦೦ ಗಳನ್ನು ನೀಡಲಾಗುತ್ತಿದೆ. ಅಂತೆಯೇ ತೋಟಗಾರಿಕಾ ಇಲಾಖೆಯಲ್ಲಿ ಐದು ದಿನಗಳ ತರಬೇತಿಗಾಗಿ ಒಬ್ಬರಿಗೆ ರೂ೨೫೦=೦೦ ಗಳನ್ನು ವೆಚ್ಚ ಮಾಡಲಾಗುತ್ತದೆ ಅದರಂತೆ ಪ್ರತಿ ಪರಿಶಿಷ್ಟಜಾತಿಯ ಮನೆಗಳಿಗೆ ೨ ಉಚಿತ ತೆಂಗಿನ ಗಿಡಗಳನ್ನು ಹನಿ ನೀರಾವರಿ ಮತ್ತು ತುಂತುರು ನೀರಾವರಿಗೆ ಶೇ ೯೦% ರಷ್ಟು ಸಹಾಯ ಧನವನ್ನು ನೀಡಲಾಗುತ್ತಿದೆ. ತೋಟಗಾರಿಕೆ ಇಲಾಖೆಯಲ್ಲಿ ನೀಡಿರುವ ಸೌಲಭ್ಯಗಳು ಈ ಜನರ ಭವಿಷ್ಯತ್ತಿನ ದೃಷ್ಟಿಯಿಂದ ತುಂಬಾ ಉಪಯೋಗಕರವಾಗಿದ್ದು ಅವುಗಳನ್ನು ಸದುಪಯೋಗ ಪಡಿಸಿಕೊಂಡಿದ್ದೇ ಆದಲ್ಲಿ ಅವರ ಆರ್ಥಿಕ ಮಟ್ಟ ಉನ್ನತಿಯಾಗುವುದರಲ್ಲಿ ಯಾವುದೇ ಸಂಶಯವಿಲ್ಲ.



ತೋಟಗಾರಿಕೆ ಇಲಾಖೆಯಿಂದ ವಿಶೇಷ ಘಟಕ ಯೋಜನೆಯಡಿಯಲಿ ಶ್ರೀ ಶಾಂತಿ ಪೀರನಾಯ್ಕ
ರಾರಾಳು ತಾಂಡ ಇವರಿಗೆ ನೀಡಿರುವ ಮಾವಿನ ಗಿಡಗಳ ತೋಟ



ತೋಟಗಾರಿಕೆ ಇಲಾಖೆಯಿಂದ ವಿಶೇಷ ಘಟಕ ಯೋಜನೆಯಡಿಯಲಿ ಶ್ರೀ ಪೋಮ್ಯಾನಾಯ್ಕ
ವ್ಯಾಸಾಪುರ ತಾಂಡ ಇವರಿಗೆ ನೀಡಿರುವ ಮಾವಿನ ಗಿಡಗಳ ತೋಟ

ಕೋಷ್ಟಕ ೬.೬

## ವಿಶೇಷ ಘಟಕ ಯೋಜನೆಯಡಿಯಲ್ಲಿ ಕಳೆದ 5 ವರ್ಷಗಳಲ್ಲಿ ತೋಟಗಾರಿಕೆ ಇಲಾಖೆಯಲ್ಲಿ ಸಾಧಿಸಿದ ಪ್ರಗತಿಯ ವಿವರ

| ಕ್ರ.ಸಂ. | ವರ್ಷ | ನಿಗದಿ ಪಡಿಸಿದ ಅನುದಾನ | ಬಿಡುಗಡೆಯಾದ ಮೊತ್ತ | ಖರ್ಚು | ಭೌತಿಕ ಗುರಿ ಸಾಧನೆ |
|---|---|---|---|---|---|
| 01. | 1998 - 1999 | ರೂ. 62, 550/- | ರೂ. 62, 439/- | ರೂ. 62, 439/- | 117 |
| 02. | 1999 - 2000 | ರೂ. 25, 000/- | ರೂ. 21,760/- | ರೂ. 21,760/- | 87 |
| 03. | 2000 - 2001 | ರೂ. 50, 000/- | ರೂ. 50, 140/- | ರೂ. 50, 140/- | 42 |
| 04. | 2001 - 2002 | ರೂ. 60, 200/- | ರೂ. 60, 188/- | ರೂ. 60, 188/- | 67 |
| 05. | 2002 - 2003 | ರೂ. 35, 000/- | ರೂ. 36, 224/- | ರೂ. 36, 224/- | 59 |
| | ಒಟ್ಟು | ರೂ. 2, 32, 750/- | ರೂ. 2, 30, 731/- | ರೂ. 2, 30, 731/- | 372 |

ಮೇಲಿನ ಕೋಷ್ಟಕದಲ್ಲಿ ವಿವರಿಸಿರುವಂತೆ ೧೯೯೮-೯೯ರಿಂದ ೨೦೦೨-೦೩ ರ ವರ್ಷಗಳಲ್ಲಿ ತೋಟಗಾರಿಕಾ ಸೌಲತ್ತುಗಳನ್ನು ಈ ಇಲಾಖೆಯ ಮೂಲಕ ಒದಗಿಸಲು ಒಟ್ಟು ರೂ೨.೩೨೭೫೦ ರೂ ಗಳನ್ನು ನಿಗದಿಪಡಿಸಲಾಗಿದ್ದು, ಅದರಲ್ಲಿ ರೂ ೨.೩೦೭೩೧ ಲಕ್ಷ ಖರ್ಚಾಗಿದ್ದು ೩೭೨ ರ ಭೌತಿಕ ಗುರಿ ಸಾಧಿಸಲಾಗಿರುತ್ತದೆ. ನೈಜವಾಗಿ ಪರಿಶೀಲಿಸುವುದಾದರೆ ಶೇ ೬೦% ಸ್ವತ್ತುಗಳು ನಾನಾ ಕಾರಣಗಳಿಂದ ಅಂದರೆ ನೀರಾವರಿ ಸೌಕರ್ಯಗಳ ತೊಂದರೆ, ಹವಾಮಾನ ವೈಪರಿತ್ಯ, ವೈಜ್ಞಾನಿಕ ಮನೋಬಾವದ ಕೊರತೆ, ಫಲಾನುಭವಿಯ ನಿಲರ್ಕ್ಷತೆ, ಆಡಳಿತಾತ್ಮಕ ತೊಂದರೆ ಇವೇ ಮೊದಲಾದ ಕಾರಣಗಳಿಂದಾಗಿ ದುರುಪಯೋಗವಾಗಿರುವುದು ಕಂಡು ಬರುತ್ತದೆ.

**ರೇಷ್ಮೆ ಇಲಾಖೆ**

ರೇಷ್ಮೆ ಕೃಷಿಯು ಲಾಭದಾಯಕ ಆರ್ಥಿಕ ಚಳುವಟಿಕೆಯಾಗಿರುವುದರಿಂದ ಈ ವೃತ್ತಿಯನ್ನು ಕೈಗೊಳ್ಳುವ ಹಾಗು ಕೈಗೊಂಡಿರುವ ಪರಿಶಿಷ್ಟ ಜಾತಿಯ ಫಲಾನುಭವಿಗಳಿಗೆ ವಿಶೇಷ ಘಟಕ ಯೋಜನೆಯಡಿಯಲ್ಲಿ ಈ ಕೆಳಕಂಡ ವಿವಿದ ಸೌಲಭ್ಯಗಳನ್ನು ಕಲಿಸಿಕೊಡಲಾಗಿರುತ್ತದೆ.

೧) ಹಿಪ್ಪು ನೇರಳೆ ಬೇಸಾಯಕ್ಕೆ ರೂ ೩೦೦೦=೦೦ವರೆಗೆ ಸಹಾಯಧನ ನೀಡುವುದು.

೨)ನೀರಾವರಿ ಭಾವಿ ಹಾಗು ಪಂಪ್‌ಸೆಟ್‌ಗಾಗಿ ಆರ್ಥಿಕ ಸಹಾಯ.

೩) ರೇರಿಂಗ್ ಹೌಸ್ಗಳ ನಿರ್ಮಾಣಕ್ಕಾಗಿ ಸಹಾಯಧನ.

೪) ಚಂದ್ರಿಕೆ ಮತ್ತು ಐ.ಪಿ.ಸೆಟ್ಟುಗಳ ಸರಬರಾಜು ಇತ್ಯಾದಿಗಳನ್ನು ವಿತರಿಸುವುದು.

ಈ ಇಲಾಖೆಯಿಂದ ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಸೌಲಭ್ಯ ಪಡೆದ ಪರಿಶಿಷ್ಟ ಜಾತಿಯ ಫಲಾನುಭವಿಗಳ ಸಂಖ್ಯೆ ತೀರಾ ವಿರಳ. ಕಾರಣ ರೇಷ್ಮೆ ಕೃಷಿಯು ಈ ತಾಲೂಕಿನಲ್ಲಿ ಅಷ್ಟೊಂದು ಲಾಭದಾಯಕವಾಗದೇ ಇರುವುದು ಮತ್ತು ನಿಗದಿತ ಅವಧಿಯಲ್ಲಿ ಸರ್ಕಾರದದಿಂದ ಅನುದಾನ

ಬಿಡುಗಡೆಯಾಗದೇ ಇರುವುದು ಹಾಗು ಫಲಾನುಭವಿಗಳು ಆಸಕ್ತಿವಹಿಸದೇ ಇರುವುದು ಪ್ರಮುಖವಾದವುಗಳಾಗಿವೆ.

ಕೋಷ್ಟಕ ೬.೭

## ವಿಶೇಷ ಘಟಕ ಯೋಜನೆಯಡಿಯಲ್ಲಿ ಕಳೆದ 5 ವರ್ಷಗಳಲ್ಲಿ ರೇಷ್ಮೆ ಇಲಾಖೆಯಲ್ಲಿ ಸಾಧಿಸಿದ ಪ್ರಗತಿ ವಿವರ

| ಕ್ರ.ಸಂ. | ವರ್ಷ | ನಿಗದಿ ಪಡಿಸಿದ ಅನುದಾನ | ಬಿಡುಗಡೆಯಾದ ಮೊತ್ತ | ಖರ್ಚು | ಭೌ. ಗುರಿಸಾಧನೆ |
|---|---|---|---|---|---|
| 01. | 1998 - 1999 | ರೂ. 20, 000/- | ರೂ. 12, 000/- | ರೂ. 12, 000/- | 8 |
| 02. | 1999 - 2000 | ರೂ. 30, 000/- | ರೂ. 15, 991/- | ರೂ. 15, 991/- | 8 |
| 03. | 2000 - 2001 | ರೂ. 12, 000/- | ರೂ. 3, 988/- | ರೂ. 3, 9888/- | 2 |
| 04. | 2001 - 2002 | ರೂ. 12, 000/- | ರೂ. 3, 000/- | ರೂ. 3, 000/- | 2 |
| 05. | 2002 - 2003 | ರೂ. 2, 000/ | ರೂ. 2, 000/- | ರೂ. 2, 000/- | 1 |
| ಒಟ್ಟು | | ರೂ. 76, 000/- | ರೂ. 36, 979/- | ರೂ. 36, 979/- | 21 |

ಮೇಲಿನ ಕೋಷ್ಟಕದಲ್ಲಿ ವಿವರಿಸಿರುವಂತೆ ೫ ವರ್ಷಗಳಲ್ಲಿ ೭೬ ಸಾವಿರ ರೂಪಾಯಿಗಳನ್ನು ವಿವಿಧ ಉದ್ದೇಶಗಳಿಗಾಗಿ ನಿಗದಿ ಪಡಿಸಲಾಗಿರುತ್ತದೆ. ಆದರೆ ಈ ತಾಲೂಕಿನಲ್ಲಿ ಅಷ್ಟೇನು ಲಾಭದಾಯಕವಾಗದೇ ಇರುವುದರಿಂದ ಕೇವಲ ೩೬ ಸಾವಿರ ರೂ. ಗಳು ಬಿಡುಗಡೆಯಾಗಿದ್ದು ೨೧ ಭೌತಿಕ ಪ್ರಗತಿಯನ್ನು ಸಾಧಿಸಿರುವುದು ಕಂಡುಬರುತ್ತದೆ.

**ಕೃಷಿ ಇಲಾಖೆ**

ಕೃಷಿ ಚಟುವಟಿಕೆ ಮಾಡುತ್ತಿರುವ ಪರಿಶಿಷ್ಟಜಾತಿಯ ಜನರಿಗೆ ಕೃಷಿ ಇಲಾಖೆಯಿಂದ ಹಲವಾರು ಸೌಲಭ್ಯಗಳು ಲಭ್ಯವಾಗುತ್ತಿವೆ. ಅವುಗಳೆಂದರೆ,

೧) ಕೃಷಿ ಪರಿಕರಗಳ ವಿತರಣೆ (ಶೇ ೧೦೦ ರಷ್ಟು ಸಹಾಯ ಧನದಲ್ಲಿ ರೂ ೨೮೦೦=೦೦ (ಪ್ರತಿ ಹೆಕ್ಟೇರ್‌ಗೆ)

೨) ದಾನ್ಯ ಸಂಗ್ರಹಣಾ ಕಣಜಗಳು (ಶೇ೬೦ ರ ಸಹಾಯ ಧನದಲ್ಲಿ ರೂ ೧೦೦೦=೦೦ ಗರಿಷ್ಟ ಮಿತಿಯಲ್ಲಿ)

೩) ಆಧುನಿಕ ಕೃಷಿ ಉಪಕರಣಗಳು (ಶೇ ೬೦% ರ ಸಹಾಯಧನದಲ್ಲಿ ರೂ ೫೦.೦೦೦=೦೦ ಮಿತಿಯಲ್ಲಿ )

೪) ಕೈಚಾಲಿತ ಸಸ್ಯ ಸಂರಕ್ಷಣಾ ಉಪಕರಣಗಳು (ಶೇ ೬೦% ರ ಸಹಾಯ ಧನದಲ್ಲಿ ರೂ ೧೦೦೦=೦೦ ಮಿತಿಯಲ್ಲಿ)

೫) ಡಿಸೆಲ್ ಅಥವಾ ಸೀಮೆ ಎಣ್ಣೆ ಪಂಪ್ಸೆಟ್(ಶೇ೬೦=೦೦ ರ ಸಹಾಯ ಧನದಲ್ಲಿ ರೂ ೧೦.೦೦೦=೦೦ ಮಿತಿಯಲ್ಲಿ)

೬) ಪವರ್ ಟಿಲ್ಲರ್ಗಳು (ಶೇ೬೦ ರಸಹಾಯಧನದಲ್ಲಿ)

೭)ಎತ್ತಿನಗಾಡಿಗಾಗಿ(ಶೇ ೬೦% ರಸಹಾಯ ಧನದಲ್ಲಿ)

೮) ನಿರಾವರಿ ಸೌಲಭ್ಯಕ್ಕಾಗಿ ಹನಿ ನೀರಾವರಿ ಮತ್ತು ತುಂತುರು ನೀರಾವರಿಗಾಗಿ ಸಹಾಯ ಒದಗಿಸಲಾಗುತ್ತಿದೆ.

ಕೋಷ್ಟಕ ೬.೮

## ವಿಶೇಷ ಘಟಕ ಯೋಜನೆಯಡಿಯಲ್ಲಿ ಕಳೆದ 5 ವರ್ಷಗಳಲ್ಲಿ ಕೃಷಿ ಇಲಾಖೆಯಲ್ಲಿ ಸಾಧಿಸಿದ ಪ್ರಗತಿಯ ವಿವರ

| ಕ್ರ.ಸಂ. | ವರ್ಷ | ನಿಗದಿ ಪಡಿಸಿದ ಅನುದಾನ | ಬಿಡುಗಡೆಯಾದ ಮೊತ್ತ | ಖರ್ಚು | ಭೌ. ಸಾಧನೆ |
|---|---|---|---|---|---|
| 01. | 1998 - 1999 | ರೂ. 40, 000/- | ರೂ. 38, 966/- | ರೂ. 38, 966/- | 4 |
| 02. | 1999 - 2000 | - | - | .. | - |
| 03. | 2000 - 2001 | ರೂ. 60, 000/- | ರೂ. 60, 000/- | ರೂ. 60, 000/- | 6 |
| 04. | 2001 - 2002 | - | - | - | - |
| 05. | 2002 - 2003 | ರೂ. 1, 28, 000/- | ರೂ. 89, 925/- | ರೂ. 89, 925/- | 16 |
| | ಒಟ್ಟು | ರೂ. 2, 28, 000/- | ರೂ. 1, 88, 891/- | ರೂ. 1, 88, 891/- 30 | 30 |

ಮೇಲಿನ ಕೋಷ್ಟಕದಲ್ಲಿ ವಿವರಿಸಿರುವಂತೆ ೧೯೯೮-೯೯ ರಿಂದ ೨೦೦೨-೦೩ ರ ವರೆಗೆ ಒಟ್ಟು ರೂ ೨.೨೬ ಲಕ್ಷ ರೂಪಾಯಿಗಳನ್ನು ಹಗರಿಬೊಮ್ಮನಹಳ್ಳಿ ತಾಲೂಕಿನ ಪರಿಶಿಷ್ಟ ಜಾತಿ ಜನರ ಅಭಿವೃದ್ಧಿಗಾಗಿ ಕೃಷಿ ಇಲಾಖೆಗೆ ನಿಗದಿಪಡಿಸಲಾಗಿದ್ದು ಅದರಲ್ಲಿ ಕೇವಲ ೧.೮೮೮ ಲಕ್ಷ ರೂಪಾಯಿಗಳು ಬಿಡುಗಡೆಗೊಂಡು ಕೇವಲ ೩೦ ಬೌತಿಕ ಪ್ರಗತಿ ಸಾಧಿಸಲಾಗಿರುತ್ತದೆ. ಕೃಷಿಯು ಋತುಮಾನದ ಉದ್ಯೋಗವಾಗಿದ್ದು ಮಳೆಗಾಲ ಪ್ರಾರಂಭವಾಗುವ ಸಮಯಕ್ಕೆ ಸರಿಯಾಗಿ ಸರ್ಕಾರದಿಂದ ಬಿಡುಗಡೆಯಾಗದೇ ಇರುವುದು ಕಾರ್ಯನುಷ್ಠಾನದಲ್ಲಿರುವ ಆಡಳಿತಾತ್ಮಕ ಮತ್ತು ತಾಂತ್ರಿಕ ದೋಷಗಳಿಂದಾಗಿ ಈ ತಾಲೂಕಿನ ಪರಿಶಿಷ್ಟ ಜಾತಿಯ ಜನರ ಕೃಷಿ ಚಟುವಟಿಕೆ ಲಾಭದಾಯಕವಾಗಿರದೆ ಅವರ ಜೀವನ ಮಟ್ಟ ಅಷ್ಟೇನು ಸುಧಾರಣೆಯಾಗಿರುವುದಿಲ್ಲವೆಂದು ಹೇಳಬಹುದು.

**ಕೈಗಾರಿಕಾ ಇಲಾಖೆ**

ಕೈಗಾರಿಕಾ ಚಟುವಟಿಕೆಗಳಲ್ಲಿ ಆಸಕ್ತಿಯಿರುವ ಪರಿಶಿಷ್ಟ ಜಾತಿಯ ಜನರಿಗೆ ವಿವಿಧ ವೃತ್ತಿಗಳಿಗೆ ತರಬೇತಿಯನ್ನು ಈ ಇಲಾಖೆಯಿಂದ ಪ್ರತಿವರ್ಷ ನೀಡಲಾಗುತ್ತಿದೆ. ವಿದ್ಯುತ್ ರಿಪೇರಿ ಇಟ್ಟಂಗಿಬಟ್ಟ ತಯಾರಿಕೆ, ಕಟ್ಟಡ ಕೆಲಸ, ಟೈಲರಿಂಗ್, ಫಿಟ್ಟರ್, ಎಲೆಕ್ಟ್ರೀಷಿಯನ್, ವಾಚ್

ರಿಪೇರಿ ಮೋಬೈಲ್ ರಿಪೇರಿ ಇವೇ ಮೊದಲಾದ ವೃತ್ತಿಗಳನ್ನು ಕೈಗೊಳ್ಳಲು ಸೂಕ್ತ ತರಬೇತಿಯನ್ನು ನೀಡುವುದು ಮತ್ತು ಅದಕ್ಕೆ ಸೂಕ್ತ ಉಪಕರಣಗಳನ್ನು ವಿಶೇಷ ಘಟಕ ಯೋಜನೆಯ ಸಹಾಯ ಧನದೊಂದಿಗೆ ಪೂರೈಸಲಾಗುತ್ತಿದೆ.

ಸದರಿ ತಾಲೂಕಿನಲ್ಲಿ ಇಂತಹ ಸೂಕ್ತ ತರಬೇತಿ ಕೇಂದ್ರಗಳಿರದೇ ಕೇವಲ ದಾಖಲೆಗಾಗಿ ತರಬೇತಿ ನೀಡಿರುವುದಾಗಿ ತಿಳಿಸಿ ವಿವಿಧ ರೀತಿಯ ಉಪಕರಣಗಳನ್ನು ನೀಡಲಾಗಿರುತ್ತದೆ. ನೈಪುಣ್ಯತೆಯನ್ನು ಪಡೆಯುವ ಫಲಾನುಭವಿಗಳು ಕಡಿಮೆ ಹಣಕ್ಕೆ ಅವುಗಳನ್ನು ಮಾರಾಟಮಾಡಿ ತಮ್ಮ ಕ್ಷಣಿಕ ಆಸೆಗಳನ್ನು ಪೂರೈಸಿಕೊಳ್ಳುವುದು ತಿಳಿದು ಬಂದಿರುತ್ತದೆ.

**ಮೀನುಗಾರಿಕಾ ಇಲಾಖೆ**

ಪರಿಶಿಷ್ಟ ಜಾತಿಯ ಜನರು ಉಪ ಜೀವನ ನಡೆಸಲು ಮೀನುಗಾರಿಕಾ ಚಟುವಟಿಕೆಗಳನ್ನು ಕೈಗೊಳ್ಳಲು ಮೀನುಗಾರಿಕೆಗೆ ಬೇಕಾಗುವ ಬಲೆ, ಹರಿಗೋಲು, ಸೈಕಲ್ಲು ಮತ್ತಿತರ ಉಪಕರಣಗಳನ್ನು ರೂ ೩೦೦೦=೦೦ ವೆಚ್ಚದಲ್ಲಿ ಉಚಿತವಾಗಿ ನೀಡಲಾಗುತ್ತಿದೆ. ಇದಲ್ಲದೆ ಕೆರೆಗಳಲ್ಲಿ ಮೀನುಗಾರಿಕೆ ಮಾಡಲು ಬೇಕಾಗುವ ಸಹಾಯಧನ ಕೊಳದಲ್ಲಿ ಮೀನು ಮರಿ ಸಾಕಾಣಿಕೆಗೆ ಸಹಾಯಧನ, ಇತ್ಯಾದಿ ಸೌಲಭ್ಯಗಳನ್ನು ನೀಡಲಾಗುತ್ತದೆ.

ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಕೆಲವು ಪರಿಶಿಷ್ಟಜಾತಿಯ ಯುವಕರಿಗೆ ಈ ನಿಟ್ಟಿನಲ್ಲಿ ತರಬೇತಿ ಕೊಡಿಸಲಾಗಿದ್ದು ಅದರ ಚಟುವಟಿಕೆ ಕೈಗೊಳ್ಳಲು ಸಹಾಯಧನ ನೀಡಲಾಗಿರುತ್ತದೆ. ಆದರೆ ಸದರಿ ತಾಲೂಕಿನಲ್ಲಿ ಈ ಇಲಾಖಾ ಕಛೇರಿ ಇಲ್ಲದೇ ಇರುವುದರಿಂದ ಮೀನುಗಾರಿಕಾ ಚಟುವಟಿಕೆ ಅಷ್ಟೇನೂ ಪರಿಣಾಮಕಾರಿಯಾಗಿ ಅನುಷ್ಠಾನಗೊಂಡಿರುವುದಿಲ್ಲ.

**ಅರಣ್ಯ ಇಲಾಖೆ**

ಅರಣ್ಯ ಇಲಾಖೆಯಿಂದ ಪರಿಶಿಷ್ಟಜಾತಿಯ ಫಲಾನುಭವಿಗಳಿಗೆ ಭದ್ರತಾ ನೆಡುತೋಪು ನಿರ್ವಹಣೆಗಾಗಿ ಆರ್ಥಿಕ ಸಹಾಯವನ್ನು ನೀಡಲಾಗುತ್ತಿದೆ

೧) ಅರ್ಧ ಹೆಕ್ಟೇರ್ ನೆಡುತೋಪು ನಿರ್ಮಾಣಕ್ಕಾಗಿ ರೂ೨೫೦೦=೦೦ಗಳನ್ನು ನೆರವು ನೀಡಲಾಗುತ್ತಿದೆ.

೨) ಪರಿಶಿಷ್ಟ ಜಾತಿಯ ಕಸುಬುದಾರರು ಬುಟ್ಟಿ ಹೆಣೆಯಲು ಮತ್ತಿತರೆ ಬಿದರಿನ ಕೆಲಸ ಮಾಡಲು ಬೇಕಾಗುವ ಬೆತ್ತ ಮತ್ತು ಬಿದಿರುಗಳನ್ನು ಉಚಿತವಾಗಿ ನೀಡಲಾಗುತ್ತಿದೆ.

೩) ಪ್ರತಿ ಫಲಾನುಭವಿಗೆ ೫೦೦ ಬಿದಿರು ಮತ್ತು ೫೦೦ ಬೆತ್ತವನ್ನು ನೀಡಲಾಗುತ್ತಿದೆ.

೪) ಮನೆಗಳ ನಿರ್ಮಾಣಕ್ಕೆ ಬೇಕಾಗುವ ತೊಲೆ, ಕಿಟಕಿ ಬಾಗಿಲುಗಳನ್ನು ಉಚಿತವಾಗಿ ಒದಗಿಸಲಾಗುತ್ತದೆ. ಅದರ ಗರಿಷ್ಟ ಸಹಾಯಧನ ರೂ ೧೦,೦೦೦.೦೦

**ಗ್ರಾಮೀಣ ಆರೋಗ್ಯ**

ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಪರಿಶಿಷ್ಟ ಜಾತಿಯ ಜನರ ಆರೋಗ್ಯ ಸುಧಾರಣೆಗಾಗಿ ವಿಶೇಷ ಘಟಕ ಯೋಜನೆಯ ಮೂಲಕ ಆರೋಗ್ಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ. ಗ್ರಾಮೀಣ ಪ್ರದೇಶದಲ್ಲಿರುವ ಪ್ರಾಥಮಿಕ ಆರೋಗ್ಯಕೇಂದ್ರ ಮತ್ತು ಆರೋಗ್ಯಘಟಕಗಳ ಮೂಲಕ ಹಳದಿ ಕಾರ್ಡ್ ನೀಡಿ ಆರೋಗ್ಯ ಸುಧಾರಣೆಗಾಗಿ ಉಚಿತ ಔಷದಿ ಮತ್ತು ಚಿಕಿತ್ಸೆ ನೀಡಲಾಗುತ್ತಿದೆ. ಆದರೆ ಗ್ರಾಮೀಣ ಪ್ರದೇಶದಲ್ಲಿ ವೈದ್ಯರ ಕೊರತೆ, ಇತರೆ ಆಡಳಿತಾತ್ಮಕ ಕಾರಣಗಳಿಂದಾಗಿ ಇರುವ ನಾನಾ ಸಮಸ್ಯೆಗಳಿಂದ ಪರಿಶಿಷ್ಟಜಾತಿ ಜನರ ಆರೋಗ್ಯ ಇನ್ನೂ ಸುಧಾರಿಸಬೇಕಾಗಿದೆ. ಸರ್ಕಾರ ಇದಕ್ಕೆ ಪ್ರತ್ಯೇಕ ಅನುದಾನ ನೀಡಿ ಸಂಚಾರಿ ಆರೋಗ್ಯ ಘಟಕಗಳ ಮೂಲಕ ಪರಿಶಿಷ್ಟ ಜಾತಿಯ ಜನರ ಆರೋಗ್ಯಸುಧಾರಣೆಗೆ ಕ್ರಮ ಕೈಗೊಳ್ಳುವುದು ಸೂಕ್ತವಾಗಿದೆ.

**ಜಿಲ್ಲಾಪಂಚಾಯತ್ ಇಂಜಿನಿಯರಿಂಗ್ ಇಲಾಖೆ**

ಈ ಇಲಾಖೆಯಿಂದ ಪರಿಶಿಷ್ಟ ಜಾತಿಯ ಕಾಲನಿಗಳಿಗೆ ಮೂಲಭೂತ ಸೌಕರ್ಯಗಳ ಅಭಿವೃದ್ಧಿ, ರಸ್ತೆ ಮತ್ತು ಚರಂಡಿ ನಿರ್ಮಾಣ ಮುಖ್ಯ ರಸ್ತೆಗಳಿಗೆ ಪರಿಶಿಷ್ಟ ಜಾತಿಯ ಕಾಲನಿಗಳಿಗೆ ಸಂಪರ್ಕ ರಸ್ತೆ ನಿರ್ಮಾಣ ಮಾಡುವುದು, ಕುಡಿಯುವ ನೀರಿನ ಪೂರೈಕೆ ಮಾಡುವ ಉದ್ದೇಶಗಳಿಗೆ ಸಾಕಷ್ಟು ಅನುದಾನವನ್ನು ಈಯೋಜನೆಯಲ್ಲಿ ಬಿಡುಗಡೆ ಮಾಡಲಾಗುತ್ತಿದೆ. ಕನಿಷ್ಠ೨೫೦ ರಿಂದ ೫೦೦ ಜನರಿರುವ ಪರಿಶಿಷ್ಟ ಜಾತಿಯ ಕಾಲನಿಗಳಿಗೆ ಪ್ರತ್ಯೇಕ ಕುಡಿಯುವ ನೀರಿನ ಸೌಕರ್ಯ ಕಲ್ಪಿಸಲಾಗುತ್ತಿದೆ. ಇದರಿಂದ ತಿಳಿದು ಬರುವ ಅಂಶಗಳೇನೆಂದರೆ, ಇತರೆ ಜನರು ಪರಿಶಿಷ್ಟ ಜಾತಿಯ ಜನರ ಜೊತೆ ಕುಡಿಯುವ ನೀರು ತರಲು ಬೆರೆಯದೇ ಇರುವ ಕಾರಣಕ್ಕಾಗಿ ಪ್ರತ್ಯೇಕ ಕುಡಿಯುವ ನೀರಿನ ಸರಬರಾಜು ಯೋಜನೆಯನ್ನು ಸರ್ಕಾರ ಜಾರಿಗೆ ತಂದಿರುವುದು ಪರಿಶಿಷ್ಟ ಜಾತಿಯ ಜನರ ಆಶೋತ್ತರಗಳನ್ನು ಈಡೇರಿಸುವ ದೃಷ್ಟಿಯಿಂದ ಸೂಕ್ತವಾಗಿದೆ.

ಆದರೆ ಸದರಿ ತಾಲ್ಲೂಕಿನ ಅಂಕಿ ಅಂಶಗಳನ್ನು ಪರಿಶೀಲಿಸಿದರೆ ರಾಜಕೀಯ ವ್ಯಕಿಗಳ ಹಿತಾಸಕ್ತಿಗೆ ತಕ್ಕಂತೆ ಯೋಜನೆ ಅನುಷ್ಠಾನ ಆಗುತ್ತಿರುವುದು. ಶೇ ೪೦ ರಷ್ಟು ಪ್ರಗತಿ ಕಾಣಲಾಗಿಲ್ಲ. ಸದರಿ ತಾಲ್ಲೂಕಿನಲ್ಲಿರುವ ಪರಿಶಿಷ್ಟ ಜಾತಿಯ ಕಾಲನಿಗಳ ಪರಿಸ್ಥಿತಿಯನ್ನು ಅವಲೋಕಿಸಿದಾಗ ಆಗಿರುವ ಕೂಡು ರಸ್ತೆ, ಸಂಪರ್ಕ, ರಸ್ತೆ, ಡಾಂಬರೀಕರಣ ಕಾಮಗಾರಿಗಳನ್ನು ಕೈಗೊಳ್ಳಲಾಗಿದ್ದು ಗುಣಮಟ್ಟದ ಕೆಲಸಗಳು ಆಗಿರುವುದಿಲ್ಲ. ಈ ಯೋಜನೆಯಲ್ಲಿ ಪ್ರಗತಿಯು ಮಂದಗತಿಯಲ್ಲಿದ್ದು ಬಹಳಷ್ಟು ಯೋಜನೆಗಳು ಅರ್ಧದಲ್ಲಿಯೇ ಉಳಿದು ಮುಂದಿನ ಆರ್ಥಿಕ ವರ್ಷದ ಮುಂದುವರಿದ ಕಾಮಗಾರಿಯಾಗಿ ಪರಿವರ್ತನೆ ಮಾಡಿಕೊಂಡು ಅನಷ್ಠಾನದಲ್ಲಿ ಬಹಳಷ್ಟು ವಿಳಂಬವನ್ನು ಅನುಸರಿಸಲಾಗುತ್ತಿದೆ. ಈ ಇಲಾಖೆಯ ಪ್ರಗತಿಯ ವಿವರಗಳನ್ನು ಮುಂದಿನ ಕೋಷ್ಟಕದಲ್ಲಿ ವಿವರಿಸಲಾಗಿದೆ.

ಕೋಷ್ಟಕ ೬.೯

## ವಿಶೇಷ ಘಟಕ ಯೋಜನೆಯಡಿಯಲ್ಲಿ ಕಳೆದ 5 ವರ್ಷಗಳಲ್ಲಿ ಜಿಲ್ಲಾ ಪಂಚಾಯತ್ ಇಂಜಿನೀಯರಿಂಗ್ ವಿಭಾಗದಲ್ಲಿ ಸಾಧಿಸಿದ ಪ್ರಗತಿ ವಿವರ

| ಕ್ರ.ಸಂ. | ವರ್ಷ | ಯೋಜನೆ | ಅನುದಾನ | ಬಿಡುಗಡೆ | ಖರ್ಚಾದ ಮೊತ್ತ | ಪ್ರಗತಿ ಸಾಧನೆ |
|---|---|---|---|---|---|---|
| 01. | 1998 - 1999 | ಕುಡಿಯುವ ನೀರಿನ ಯೋಜನೆ | 7.14 | 7.11 | 7.11 | 04 |
| | | ಕೊಳವೆ ಬಾವಿ ಕೈಪಂಪು | 0.43 | 0.43 | 0.43 | 02 |
| | | ರಸ್ತೆ ಕಾಮಗಾರಿಗಳು | 4.70 | 4.72 | 4.72 | 04 |
| | | | | | | |
| 02. | 1999 - 2000 | ಕುಡಿಯುವ ನೀರಿನ ಯೋಜನೆ | 4.73 | 4.71 | 4.71 | 04 |
| | | ಕೊಳವೆ ಬಾವಿ ಕೈಪಂಪು | 0.52 | 0.52 | 0.52 | 02 |
| | | | | | | |
| 03. | 2000 - 2001 | ಕುಡಿಯುವ ನೀರಿನ ಯೋಜನೆ | 5.92 | 5.90 | 5.90 | 03 |
| | | ಕೊಳವೆ ಬಾವಿ ಕೈಪಂಪು | 0.50 | 0.91 | 0.91 | 02 |
| | | | | | | |
| 04. | 2001 - 2002 | ಕುಡಿಯುವ ನೀರಿನ ಯೋಜನೆ | 8.88 | 8.88 | 8.86 | 08 |
| | | ಕೊಳವೆ ಬಾವಿ ಕೈಪಂಪು | 0.85 | 0.84 | 0.84 | 03 |
| | | ರಸ್ತೆ ಕಾಮಗಾರಿಗಳು | 3.30 | 3.33 | 3.33 | 01 |
| | | | | | | |
| 05. | 2002 - 2003 | ಕುಡಿಯುವ ನೀರಿನ ಯೋಜನೆ | 9.96 | 9.99 | 9.99 | 08 |
| | | ಕೊಳವೆ ಬಾವಿ ಕೈಪಂಪು | 1.40 | 1.38 | 1.38 | 05 |
| | | ರಸ್ತೆ ಕಾಮಗಾರಿಗಳು | 2.05 | 2.40 | 2.40 | 02 |
| | | ಒಟ್ಟು | 48.67 | 49.1 | 49.1 | 48 |

ಕೋಷ್ಟಕವನ್ನು ಪರೀಶಿಸಲಾಗಿ ೧೯೯೮-೯೯ ರಿಂದ ೨೦೦೨-೦೩ ರ ವರೆಗೆ ಕುಡಿಯುವ ನೀರಿನ ಯೋಜನೆ ಕೊಳವೆ ಬಾವಿ ಕೈಪಂಪು, ರಸ್ತೆ ಕಾಮಗಾರಿಗಳಿಗಾಗಿ ಒಟ್ಟು ೪೮.೬೭ ಲಕ್ಷ ರೂಪಾಯಿಗಳನ್ನು ನಿಗದಿ ಪಡಿಸಲಾಗಿದ್ದು ಅದಕ್ಕೆ ಬದಲಾಗಿ ೪೯.೧ ಲಕ್ಷ ರೂಪಾಯಿಗಳು ಬಿಡುಗಡೆಯಾಗಿರುತ್ತವೆ. ಇದರಲ್ಲಿ ಭೌತಿಕವಾಗಿ ೪೮ ಕಾಮಗಾರಿಗಳನ್ನು ಹೆಸರಿಗೆ ಮಾತ್ರ







ಮೂಲಭೂತ ಸೌಕರ್ಯ ಅಭಿವೃದ್ಧಿ ಯೋಜನೆಯಡಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್
ವಿಭಾಗದಲಿ ಬಸರಕೋಡು ತಾಂಡದಲಿ ರುವ ರಸ್ತೆ ಮತ್ತು ಚರಂಡಿ

ಪೂರ್ಣಗೊಳಿಸಿರುವುದಾಗಿ ತಿಳಿಸಿದ್ದು, ಅದರಲ್ಲಿ ಶೇ೫೦ ರಷ್ಟು ಮಾತ್ರ ಪ್ರಗತಿಯಾಗಿರುವ ಅಂಶ ಕ್ಷೇತ್ರಕಾರ್ಯದಿಂದ ತಿಳಿದು ಬಂದಿರುತ್ತವೆ.

**ಪೌಷ್ಟಿಕಾಂಶಗಳ ನೀಡಿಕೆ ಯೋಜನೆ**

ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಮೂಲಕ ಅಂಗನವಾಡಿಯಲ್ಲಿ ಪ್ರವೇಶ ಪಡೆದಿರುವ ಪೂರ್ವ ಪ್ರಾಥಾಮಿಕ ಶಾಲೆಯ ಮಕ್ಕಳಿಗೆ ಹಾಗು ಬಾಣಂತಿಯರಿಗೆ ಪೌಷ್ಟಿಕಾಂಶಗಳ ನೀಡಲು ತನ್ಮೂಲಕ ಅವರ ಆರೋಗ್ಯ ಸುಧಾರಿಸಲು ವಿಶೇಷ ಘಟಕ ಯೋಜನೆಯಲ್ಲಿ ಅನುದಾನ ಒದಗಿಸಲಾಗಿರುತ್ತದೆ. ಸದರಿ ಅಂಗನವಾಡಿ ಕೇಂದ್ರಗಳಲ್ಲಿ ಮಕ್ಕಳಿಗೆ ಅಕ್ಷರಾಭ್ಯಾಸದ ಜೋತೆಗೆ ಅವರ ದೈಹಿಕ ಬೆಳವಣಿಗೆಗಾಗಿ ಬೇಕಾಗುವ ವಿಶೇಷ ಪೌಷ್ಟಿಕ ಆಹಾರವನ್ನು ನೀಡಲಾಗುತ್ತಿದೆ.

ಆದರೆ ಸದರಿ ತಾಲ್ಲೂಕಿನ ನೈಜತೆಯನ್ನು ಪರಿಶೀಲಿಸಿದಾಗ ಬಹುತೇಕ ಪರಿಶಿಷ್ಟಜಾತಿಯ ಮಕ್ಕಳು ದಾಖಲಾಗಿದ್ದರೂ ಅಂಗನವಾಡಿ ಕೇಂದ್ರಕ್ಕೆ ಹಾಜರಾಗುತ್ತಿಲ್ಲ. ಕಾರಣ ಅಲ್ಲಿ ಶಾಲಾ ಪೂರ್ವ ಚಟುವಟಿಕೆಯಲ್ಲೆ ಜಾತೀಯತೆ ಸೋಂಕು ಗ್ರಾಮೀಣ ಪ್ರದೇಶದಲ್ಲಿನ ಜನರು ಮತ್ತು ಅಲ್ಲಿನ ಕೆಲಸಗಾರರದಾಗಿರುತ್ತದೆ. ಅದರಲ್ಲೂ ಅಸ್ಪೃಶ್ಯರ ಬಗ್ಗೆ ನಿಕೃಷ್ಟ ಭಾವನೆ ಇದರಿಂದಾಗಿ ಕೆಲವು ಕಡೆ ಪರಿಶಿಷ್ಟಜಾತಿಯ ಕಾಲನಿಗಳಲ್ಲಿ ಪ್ರತ್ಯೇಕ ಅಂಗನವಾಡಿ ಕೇಂದ್ರಗಳನ್ನು ತೆರೆಯಲಾಗಿರುತ್ತದೆ. ಕೆಲವು ಕಡೆಗಳಲ್ಲಿ ಅಂಗನವಾಡಿ ಕೇಂದ್ರಗಳು ದೇವಸ್ಥಾನ ಮತ್ತು ಸಮುದಾಯ ಭವನಗಳಲ್ಲಿ ನಡೆಯುತ್ತಿದ್ದು, ಅಲ್ಲಿ ಪರಿಶಿಷ್ಟ ಜಾತಿಯ ಮಕ್ಕಳನ್ನು ಸೇರಿಸದೇ ಇರುವುದು ವಿಪರ್ಯಾಸವಾಗಿದೆ.

**ಕರ್ನಾಟಕದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮದಿಂದ ಜಾರಿಯಾಗುತ್ತಿರುವ ಕಾರ್ಯಕ್ರಮ**

ಕರ್ನಾಟಕದ ಸರ್ಕಾರ ೧೯೭೫ ರಲ್ಲಿ ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮವನ್ನು ಸ್ಥಾಪಿಸಿದೆ. ನಿಗಮದಿಂದ ಅನುಷ್ಠಾನವಾಗುತ್ತಿರುವ ಯೋಜನೆಗಳು ಕೆಳಕಂಡಂತೆ ಇವೆ.

**ಸ್ವಯಂ ಉದ್ಯೋಗ ಯೋಜನೆ**

ಈ ಯೋಜನೆಯಡಿಯಲ್ಲಿ ಸೌಲಭ್ಯ ಪಡೆಯಲು.

೧. ಅರ್ಜಿದಾರರು ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗಕ್ಕೆ ಸೇರಿದವರಾಗಿರಬೇಕು.

೨. ಕಳೆದ ೧೫ ವರ್ಷದಿಂದ ಕರ್ನಾಟಕದ ರಾಜ್ಯದ ನಿವಾಸಿಯಾಗಿರಬೇಕು.

೩. ಅರ್ಜಿದಾರರ ಕುಟುಂಬದ ಯಾವುದೇ ಸದಸ್ಯರು ಸರ್ಕಾರಿ ಅರೆ ಸರ್ಕಾರಿ ಸಂಸ್ಥೆಯಲ್ಲಿ ನೌಕರಿಯಲ್ಲಿರಬಾರದು.

೪. ಅರ್ಜಿದಾರರ ಕುಟುಂಬದ ವಾರ್ಷಿಕ ವರಮಾನ ರೂ. ೨೨೦೦೦.೦೦ ಮೀರಬಾರದು.

೫. ಅರ್ಜಿದಾರರ ಸೌಲಭ್ಯ ಅಥವಾ ಅವರ ಕುಟುಂಬದವರು ಈ ಹಿಂದೆ ನಿಗಮದಿಂದ ಯಾವುದೇ ಸೌಲಭ್ಯ ಪಡೆದಿರಬಾರದು.

೬. ಅರ್ಜಿದಾರರು ಸೌಲಭ್ಯ ಪಡೆಯಲಿಚ್ಛಿಸುವ ಉದ್ದೇಶ, ಕಸುಬುಗಳಲ್ಲಿ ಸಾಕಷ್ಟು ಜ್ಞಾನ ಮತ್ತು ಅನುಭವ ಹೊಂದಿದವರಾಗಿರಬೇಕು.

೭. ಅರ್ಜಿದಾರರು ೧೮ ವರ್ಷದಿಂದ ೬೦ ವರ್ಷದ ವಯೋಮಾನದವರಾಗಿರಬೇಕು.

## ಉದ್ಯಮಶೀಲತಾ ಅಭಿವೃದ್ಧಿ ಐ.ಎಸ್.ಬಿ. ಯೋಜನೆ

ಈ ಯೋಜನೆಯಡಿಯಲ್ಲಿ ಯಾವುದೇ ಸಣ್ಣ ಕೈಗಾರಿಕಾ, ಸರಕು ಸಾಗಾಣಿಕೆ ಪ್ರಯಾಣಿಕ ವಾಹನ, ಟ್ರಾಕ್ಟರ್ ಇತ್ಯಾದಿ ಖರೀದಿಸಲು ಪ್ರಾರಂಭಿಸಲು ಸಾಲ ಸೌಲಭ್ಯ ಪಡೆಯಬಹುದಾಗಿರುತ್ತದೆ. ಯೋಜನಾ ವೆಚ್ಚ ರೂ. ೫೦,೦೦೦ ದಿಂದ ರೂ.೧೦.೦೦ ಲಕ್ಷದವರೆಗಿದ್ದು, ಇದರಲ್ಲಿ ಶೇ. ೫ ಭಾಗವನ್ನು ಫಲಾನುಭವಿಯೂ, ಶೇ. ೨೦ ಭಾಗ ನಿಮದಿಂದ ಅಂಚಿನ ಹಣದ ಸಾಲವೆಂದೂ ಎಗರಿಷ್ಠ ರೂ. ೧.೦೦ ಲಕ್ಷವಿ ಹಾಗೂ ಉಳಿದ ಶೇ. ೭೫ ಭಾಗ ಬ್ಯಾಂಕ್ ಸಾಲವಾಗಿಯೂ ಭರಿಸಲಾಗುವುದು.

ಈ ಯೋಜನೆಯಡಿ ಸೌಲಭ್ಯ ಪಡೆಯಲು

೧. ಅರ್ಜಿದಾರರು ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗಕ್ಕೆ ಸೇರಿದವರಾಗಿರಬೇಕು.

೨. ಕಳೆದ ೧೫ ವರ್ಷದಿಂದ ಕರ್ನಾಟಕದ ರಾಜ್ಯದ ನಿವಾಸಿಯಾಗಿರಬೇಕು.

೩. ಅರ್ಜಿದಾರರ ಕುಟುಂಬದ ಯಾವುದೇ ಸದಸ್ಯರು ಅರೆ ಸರ್ಕಾರಿ ಸಂಸ್ಥೆಯಲ್ಲಿ ನೌಕರಿಯಲ್ಲಿರಬಾರದು.

೪. ಅರ್ಜಿದಾರರ ಕುಟುಂಬದ ವಾರ್ಷಿಕ ವರಮಾನ ಗ್ರಾಮೀಣ ಪ್ರದೇಶದಲ್ಲಿ ರೂ. ೩೧,೯೫೨.೦೦ ಮತ್ತು ನಗರಪ್ರದೇಶದಲ್ಲಿ ರೂ. ೪೨,೪೧೨೦.೦೦ ಮೀರಿರಬಾರದು.

೫. ಅರ್ಜಿದಾರರು ಅಥವಾ ಕುಟುಂಬದವರು ಈ ಹಿಂದೆ ನಿಗಮದಿಂದ ಯಾವುದೇ ಸೌಲಭ್ಯ ಪಡೆದಿರಬಾರದು.

೬. ಅರ್ಜಿದಾರರು ಸೌಲಭ್ಯ ಪಡೆಯಲಿಚ್ಛಿಸುವ ಉದ್ದೇಶ, ಕಸುಬುಗಳಲ್ಲಿ ಸಾಕಷ್ಟು ಜ್ಞಾನ ಮತ್ತು ಅನುಭವ ಹೊಂದಿದವರಾಗಿರಬೇಕು.

೭. ಅರ್ಜಿದಾರರು ೧೮ ವರ್ಷದಿಂದ ೬೦ ವರ್ಷದ ವಯೋಮಾದವರಾಗಿರಬೇಕು.

ಮೈಕ್ರೋ ಕ್ರೆಡಿಟ್ ಯೋಜನೆ

ಈ ಯೋಜನೆಯಡಿ ಸಾಲ ಪಡೆಯಲು ಫಲಾನುಭವಿಗಳಿಗೆ ಇರಬೇಕಾದ ಅರ್ಹತೆ ಈ ಕೆಳಕಂಡಂತಿರುತ್ತದೆ.

೧. ಅರ್ಜಿದಾರರ ವಯಸ್ಸು ೧೮ ರಿಂದ ೬೦ ವಯೋಮಿತಿಯಲ್ಲಿರಬೇಕು.

೨. ಸ್ವಸಹಾಯ ಸಂಘಗಳ ಸದಸ್ಯರಾಗಿರಬೇಕು.

೩. ಅರ್ಜಿದಾರರುಗಳು ಈಗಾಗಲೇ ನಿಗಮಗಳಿಂದಾಗಲಿ ಅಥವಾ ಸರ್ಕಾರದ ಇತರ ಯೋಜನೆಗಳಲ್ಲಿ ಸಾಲ್ಕ ಸಹಾಯ ಧನ ಪಡೆದು ಸುಸ್ತಿದಾರರಾಗಿರಬಾರದು.

೪. ಜಿಲ್ಲಾ ಪಂಚಾಯಿತಿಯವರು ಪ್ರಕಟಿಸಿರು ಬಿ.ಪಿ.ಎಲ್. ಪಟ್ಟಿಯಲ್ಲಿ ಅವರ ಹೆಸರು ನೊಂದಾಯಿತವಾಗಿರತಕ್ಕದ್ದು.

೫. ಅರ್ಜಿದಾರರರು ಸಾಲ ಪಡೆಯುವ ಉದ್ದೇಶದ ಬಗ್ಗೆ ಅನುಭವ ಹಾಗೂ ಆಸಕ್ತಿ ಹೊಂದಿರಬೇಕು.

೬. ಸ್ತ್ರೀ ಶಕ್ತಿ ಸ್ವರ್ಣ ಜಯಂತಿ ಗ್ರಾಮ ಸ್ವರಾಜ್ ಯೋಜನೆ, ನೆಹರು ರೋಜ್‌ಗಾರ್ ಯೋಜನೆ ಮತ್ತು ನಬಾರ್ಡ್ ಯೋಜನೆಯಡಿಯಲ್ಲಿ ರಚಿಸಿದ ಗುಂಪುಗಳಿಗೆ ಆಧ್ಯತೆ ಮೇರೆಗೆ ಸಾಲ ಮಂಜೂರು ಮಾಡುವುದು.

**ಫಲಾನುಭವಿಗಳ ಆಯ್ಕೆ**

ರಾಜ್ಯದಲ್ಲಿ ಒಟ್ಟು ೫೬೯೫ ಗ್ರಾಮ ಪಂಚಾಯಿತಿಗಳು ಮತ್ತು ೧೨೫ ಪಟ್ಟಣ ಪಂಚಾಯಿತಿಗಳಿದ್ದು, ಮೊದಲ ಹಂತದಲ್ಲಿ ಪ್ರತಿಗ್ರಾಮ ಮತ್ತು ಪಟ್ಟಣ ಪಂಚಾಯಿತಿಗಳಿಗೆ ೧೦ ರಂತೆ ಸ್ವಸಹಾಯ ಗುಂಪುಗಳ ಸದಸ್ಯರನ್ನು ತಾಲ್ಲೂಕು ಅಥವಾ ಜಿಲ್ಲಾ ಮಟ್ಟದ ಸಮಿತಿಯಲ್ಲಿ ಮಂಡಿಸಿ ಅನುಮೊದನೆ ಪಡೆದು ಆಯ್ಕೆ ಮಾಡತಕ್ಕದ್ದು.

**ಸಾಲದ ಮೊತ್ತ**

ಒಬ್ಬ ಫಲಾನುಭವಿಗೆ ಗರಿಷ್ಠ ರೂ. ೧೦.೦೦೦.೦೦ ಸಾಲ ಮಂಜೂರು ಮಾಡಲು ಅವಕಾಶವಿರುತ್ತದೆ.

**ಸಹಾಯಧನ**

ಸಹಾಯಧನವನ್ನು ಗ್ರಾಮೀಣ ಅಭಿವೃದ್ಧಿ ಇಲಾಖೆಯ ಸ್ವರ್ಣ ಜಯಂತಿ ಗ್ರಾಮ ಸ್ವರಾಜ್‌ಗಾರ್ ಯೋಜನೆಯಡಿಯಲ್ಲಿ ಪಡೆಯಲಾಗುವುದು. ಈ ಸಾಹಾಯಧನವು ಸಾಲ ತೀರಿಕೆ ತರುವಾಯ ಸಾಹಾಯಧನವಾಗಿರುತ್ತದೆ. ಸಹಾಯಧನ ಲಭ್ಯವಿಲ್ಲದ ಪಕ್ಷದಲ್ಲಿ ಬಿಡುಗಡೆಯಾದ ಸಂಪೂರ್ಣ ಮೊತ್ತವನ್ನು ಸಾಲವೆಂದು ಪರಿಗಣಿಸಲಾಗುವುದು.

**ಬಡ್ಡಿಯ ದರ ಮತ್ತು ಅವಧಿ**

ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮದಿಂದ ನೀಡಲಾಗುವ ಸಾಲಕ್ಕೆ ಶೇ. ೭ ರಷ್ಟು ಬಡ್ಡಿ ವಿಧಿಸಲಾಗುವುದು. ಮರುಪಾವತಿಯ ಸಾಲ ಬಿಡುಗಡೆಯಾದ ೨ ತಿಂಗಳ ನಂತರ ಪ್ರಾರಂಭವಾಗುತ್ತದೆ. ಆದರೆ ಬಡ್ಡಿ ಪಾವತಿಸಲು ಯಾವುದೇ ವಿನಾಯಿತಿ ಇರುವುದಿಲ್ಲ. ಸಾಲದ ಅವಧಿ ೩೪ ಮಾಸಿಕ ಸಮ ಕಂತುಗಳಾಗಿರುತ್ತದೆ. ಸ್ವಯಂ ಸೇವಾ ಸಂಸ್ಥೆಗಳು ಸಾಲ ಮರುಪಾತಿ ಸಂಪೂರ್ಣ ಜವಾಬ್ದಾರಿ ವಹಿಸಿಕೊಂಡಲ್ಲಿ, ಶೇ. ೨ ರಷ್ಟು ಪ್ರೋತ್ಸಹ ಧನ ನೀಡಬಹುದಾಗಿರುತ್ತದೆ.

**ನೇರಸಾಲ ಯೋಜನೆ**

ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮವು ನೇರಸಾಲ ಯೋಜನೆಯನ್ನು ೧೯೯೨-೯೩ ರಿಂದ ಅನುಷ್ಠಾನಗೊಳಿಸುತ್ತಿದೆ. ಈ ಯೋಜನೆಯಲ್ಲಿ ನಿಗದಿ ಪಡಿಸಿದ ಘಟಕದ ವೆಚ್ಚವು ರೂ. ೩೫,೦೦೦ ದಿಂದ ರೂ.೩೦.೦೦ ಲಕ್ಷಗಳವರೆಗಿದ್ದು ಅವಧಿ ಸಾಲವನ್ನು ರಾಷ್ಟ್ರೀಯ ಪರಿಶಿಷ್ಟ ಜಾತಿ ಹಾಗೂ ರಾಷ್ಟ್ರೀಯ ಪರಿಶಿಷ್ಟ ವರ್ಗಗಳ ಹಣಕಾಸು ಮತ್ತು ಅಭಿವೃದ್ಧಿ ನಿಗಮದಿಂದ (ಎ.ಎನ್.ಎಸ್.ಎಫ್.ಡಿ.ಸಿ. ) ಪಡೆದು ಸೌಲಭ್ಯ ಕಲ್ಪಿಸಲಾಗುವುದು.

ಸೌಲಭ್ಯ ಪಡೆಯಲು ಅರ್ಜಿ ಸಲ್ಲಿಸಬೇಕಾದ ವಿಧಾನ

ನಿಗದಿತ ಅರ್ಜಿ ನಮೂನೆ ಜೊತೆಗೆ ಈ ಕೆಳಕಂಡ ದಾಖಲಾತಿಗಳನ್ನು ಸಲ್ಲಿಸಬೇಕು.

೧. ಜಾತಿ ಪ್ರಮಾಣ ಪತ್ರ

೨. ಕುಟುಂಬದ ವಾರ್ಷಿಕ ಆದಾಯ ಪತ್ರ

೩. ಪಡಿತರ ಚೀಟಿ

೪. ಯೋಜನಾ ವರದಿ

೫. ವಾಹನವಾಗಿದ್ದಲ್ಲಿ, ಸಂಬಂಧಪಟ್ಟ ವಾಹನ ಚಾಲನಾ ಪರವಾನಗಿ

೬. ತರಬೇತಿ ಅಥವಾ ಅನುಭವದ ಪತ್ರ

೭. ೧೫ ವರ್ಷಗಳಿಂದ ರಾಜ್ಯದಲ್ಲಿ ವಾಸವಿರುವ ಬಗ್ಗೆ ದಾಖಲೆ ಇದು ಕೋಲಾರ, ಮೈಸೂರು, ತುಮಕೂರು, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿ ಕಡ್ಡಾಯವಾಗಿರುತ್ತದೆ.

೮. ತಾತ್ಕಾಲಿಕ ನೊಂದಣಿ ಪತ್ರ

೯. ಭಾವಚಿತ್ರ

**ಹಣಕಾಸಿನ ಮೂಲ**

ಅ. ಯೋಜನಾ ವೆಚ್ಚ ರೂ.೧.೦೦ ಲಕ್ಷವಾಗಿದ್ದಲ್ಲಿ, ಅಭ್ಯರ್ಥಿಯು ಪ್ರವರ್ತಕರ ಪಾಲನ್ನು ಸಲ್ಲಿಸಬೇಕಾಗಿಲ್ಲ. ಯೋಜನಾ ವೆಚ್ಚ ಶೇ. ೨೦ ಭಾಗ ಅಂಚಿನ ಹಣದ ಸಾಲವಾಗಿದ್ದು, ಉಳಿದ ಮೊತ್ತ ಅವಧಿ ಸಾಲವಾಗಿರುತ್ತದೆ.

ಆ. ಯೋಜನಾ ವೆಚ್ಚ ರೂ. ೧.೦೦ ಲಕ್ಷದಿಂದ ರೂ. ೨.೫೦ ಲಕ್ಷದವರೆಗಿದ್ದಲ್ಲಿ, ಶೇ.೨ ರಷ್ಟು ಮೊತ್ತವನ್ನು ನಿಗಮಕ್ಕೆ ಪಾವತಿಸತಕ್ಕದ್ದು. ಉಳಿದಂತೆ ಶೇ. ೨೦ ಭಾಗ ಅಂಚಿನ ಹಣದ ಸಾಲವಾಗಿದ್ದು ಬಾಕಿ ಶೇ. ೭೮ ಭಾಗ ಎಸ್.ಎಫ್.ಡಿ.ಸಿ. ಅವಧಿ ಸಾಲವಾಗಿರುತ್ತದೆ.

ಇ. ಯೋಜನಾ ವೆಚ್ಚ ರೂ. ೨.೫೦ ಲಕ್ಷದಿಂದ ರೂ. ೫.೦೦ ಲಕ್ಷದವರೆಗಿದ್ದಲ್ಲಿ ಶೇ. ೩ ರಷ್ಟು ಮೊತ್ತವನ್ನು ನಿಗಮಕ್ಕೆ ಪಾವತಿಸತಕ್ಕದ್ದು. ಉಳಿದಂತೆ ಶೇ. ೨೦ ಭಾಗ ಅಂಚಿನ ಹಣದ ಸಾಲ ಮತ್ತು ಶೇ. ೭೭ ಭಾಗ ಎನ್.ಎಸ್.ಎಫ್.ಡಿ.ಸಿ. ಃ ಎನ್.ಎಸ್.ಎಫ್.ಟಿ.ಡಿ.ಸಿ. ಅವಧಿ ಸಾಲವಾಗಿರುತ್ತದೆ.

ಈ ಯೋಜನಾ ವೆಚ್ಚ ರೂ. ೫.೦೦ ಲಕ್ಷ ಮೇಲ್ಪಟ್ಟಲ್ಲಿ ಶೇ. ೫ ರಷ್ಟು ಮೊತ್ತವನ್ನು ಪ್ರವರ್ತಕರ ಪಾಲೆಂದು ಪಾವತಿಸಬೇಕು. ಶೇ. ೨೦ ಭಾಗ ಎಗರಿಷ್ಠ ರೂ. ೧.೦೦ ಲಕ್ಷ ಅಂಚಿನ ಹಣದ ಸಾಲ ಉಳಿದ ಭಾಗ ಎನ್.ಎಸ್.ಎಫ್.ಡಿ.ಸಿ.ಃ ಎನ್.ಎಸ್.ಎಫ್.ಡಿ.ಸಿ ಅವಧಿ ಸಾಲವಾಗಿರುತ್ತದೆ.

**ಭೂ ಒಡೆತನ ಯೋಜನೆ**

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಭೂ ರಹಿತ ಕೃಷಿ ಕಾರ್ಮಿಕರಿಗೆ ಎರಡು ಎಕ್ಕರೆ ಖುಷ್ಕಿ ಅಥವಾ ಒಂದು ಎಕರೆ ಸರ ಜಮೀನು ಖರೀದಿಸಲು ಸಹಾಯದನ ಮತ್ತು ಸಾಲ ಸೌಲಭ್ಯ ಒದಗಿಸಲಾಗುವುದು.

**ಯೋಜನಾ ವಿವರ**

ಯೋಜನಾ ವೆಚ್ಚ ರೂ. ೬೦,೦೦೦ ನಿಗದಿಪಡಿಸಿದ್ದು ಶೇ. ಭಾಗ ಸಹಾಯಧನ ಮತ್ತು ಶೇ. ೫೦ ಭಾಗ ಅವಧಿ ಸಾಲವಾಗಿರುತ್ತದೆ. ಅವಧಿ ಸಾಲವಾಗಿರುತ್ತದೆ. ಅವಧಿ ಸಾಲಕ್ಕೆ ಶೇ. ೬ ವಾರ್ಷಿಕ ಬಡ್ಡಿ ವಿಧಿಸಲಾಗುವುದು. ಇದಕ್ಕೆ ಬರಬೇಕಾದ ಅವಧಿ ಸಾಲವನ್ನು ರಾಷ್ಟ್ರೀಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಆರ್ಥಿಕ ಹಾಗೂ ಅಭಿವೃದ್ಧಿ ನಿಗಮದಿಂದ ಪಡೆಯಲಾಗುವುದು. ಯೋಜನೆಯ ಯಶಸ್ವಿ ಅನುಷ್ಠಾನ ಮರುಪಾವತಿಯನ್ನು ಅವಲಂಬಿಸಿದೆ.

**ಅರ್ಹತೆಗಳು**

೧. ಫಲಾನುಭವಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗದ ಭೂ ರಹಿತ ಕೃಷಿ ಕಾರ್ಮಿಕ ಮಹಿಳಾ ಅಭ್ಯರ್ಥಿಯಾಗಿರಬೇಕು.

೨. ಸುಸ್ತಿದಾರರಾಗಿರಬಾರದು.

೩. ಭೂ ಮಾಲೀಕರು ಪರಿಶಿಷ್ಟ ಜಾತಿ ಅಥವಾ ವರ್ಗಕ್ಕೆ ಸೇರಿರಬಾರದು.

೪. ಜಮೀನಿನ ಮೇಲೆ ತಂಟೆ ತಕರಾರು, ಪಿ.ಟಿ.ಸಿ.ಎಲ್., ಕಾಯ್ದೆ ಉಲ್ಲಂಘನದ ಭೂ ಸುಧಾರಣೆ ಕಾಯ್ದೆ, ಲ್ಯಾಂಡ್ ಗ್ರಾಂಟ್, ಅರಣ್ಯ ಜಮೀನು, ಒತ್ತುವರಿ ಜಮೀನು ಇತ್ಯಾದಿ ಕಾಯ್ದೆಗಳ ಉಲ್ಲಂಘನೆಯಾಗಬಾರದು. ಕೃಷಿಗೆ ಯೋಗ್ಯವಾಗಿರಬೇಕು. ಮೂಲಭೂತ ದಾಖಲಾತಿಗಳಾದ ಪಹಣಿ, ಇ.ಸಿ. ಬ್ಯಾಂಕಿನಿಂದ ಎನ್.ಓ.ಸಿ. ಮ್ಯುಟೇಷನ್, ಸೇಲ್‌ಡೀಡ್ ಪಡೆದು ಫಲವತ್ತತೆ ಬಗ್ಗೆ ಪರಿಶೀಲಿಸಿ, ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆಯುವ ಈ ಸಮಿತಿಗೆ ಸಮಾಜ ಕಲ್ಯಾಣ ಅಧಿಕಾರಿ, ಪ್ರಧಾನ ಕೃಷಿ ಅಧಿಕಾರಿ, ಉಪ ವಿಭಾಗಾಧಿಕಾರಿ ಸದಸ್ಯರಿದ್ದು, ಜಿಲ್ಲಾ ವ್ಯವಸ್ಥಾಪಕರು ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ. ಜಿಲ್ಲಾ ವ್ಯವಸ್ಥಾಪಕರು ವರದಿಯೊಂದಿಗೆ ಜಿಲ್ಲಾ ಖರೀದಿ ಸಮಿತಿಗೆ ಮಂಡಿಸಬೇಕು. ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆಯುವ ಈ ಸಮಿತಿಗೆ ಸಮಾಜ ಕಲ್ಯಾಣ ಅಧಿಕಾರಿ, ಪ್ರಧಾನ ಕೃಷಿ ಅಧಿಕಾರಿ, ಉಪ ವಿಭಾಗಾಧಿಕಾರಿ ಸದಸ್ಯರಿದ್ದು, ಜಿಲ್ಲಾ ವ್ಯವಸ್ಥಾಪಕರು ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ. ಜಿಲ್ಲಾ ವ್ಯವಸ್ಥಾಪಕರು ಎಲ್ಲಾ ಜಮೀನುಗಳನ್ನು ಉಪ ವಿಭಾಗಾಧಿಕಾರಿ ತಹಸೀಲ್ದಾರರು, ಕೃಷಿ ಅಧಿಕಾರಿ, ತೋಟಗಾರಿಕಾ ಅಧಿಕಾರಿಗಳೊಂದಿಗೆ ಜಂಟಿಯಾಗಿ ಪರಿಶೀಲಿಸಬೇಕಾಗುತ್ತದೆ.

೫. ಅರ್ಜಿಗಳಲ್ಲಿ ಭೂ ಮಾಲಿಕರ ಮತ್ತು ಫಲಾನುಭವಿಗಳ ತೋರಿಸಬೇಕು. ಫಲವತ್ತತೆ ಹಾಗೂ ಅಂತರ್ಜಲದ ಲಭ್ಯತೆ, ಉಪ ನೋಂದಣಾಧಿಕಾರಿಗಳ ಮಾರುಕಟ್ಟೆ ಬೆಲೆ, ಅಕ್ಕಪಕ್ಕದ ಜಮೀನಿನ ಬೆಲೆಗಳನ್ನು ಆಧರಿಸಿ ಜಮೀನಿನ ದರವನ್ನು ಜಿಲ್ಲಾ ಸಮಿತಿ ನಿಗದಿಪಡಿಸುತ್ತದೆ.

೬. ಜಮೀನಿನ ಕ್ರಯಪತ್ರ ನೋಂದಣಿಯ ಸಮಯದಲ್ಲಿಯೇ ಅಡಮಾನ ಪತ್ರ ಸಹ

ಕಾಲಂನಲ್ಲಿ ನಿಗಮಕ್ಕೆ ಒತ್ತೆಯಾಗಿರುವ ಬಗ್ಗೆ ದಾಖಲೆ ಮಾಡಿಸಿ ಪಹಣಿ ಪಡೆದು ಫಲಾನುಭವಿ ಕಡತದಲ್ಲಿಡಬೇಕು.

೮. ಜಮೀನನ್ನು ಖರೀದಿಸಿದ ನಂತರ, ಇತರ ಇಲಾಖೆಗಳಿಂದ ಕೃಷಿ, ತೋಟಗಾರಿಕೆ, ಪಶುಸಂಗೋಪನೆ, ರೇಷ್ಮೆ ಇಲಾಖೆಗಳಿಂದ ದೊರೆಯುವ ಸೌಲಭ್ಯಗಳನ್ನು ಈ ಫಲಾನುಭವಿಗಳಿಗೆ ಹೆಚ್ಚಿನ ಉತ್ಪನ್ನ ಪಡೆಯಲು ಅನುಕೂಲ ಮಾಡಿಕೊಡಬೇಕು.

**ಗಂಗಾ ಕಲ್ಯಾಣ ಯೋಜನೆ**

ಸರ್ಕಾರ ನಿರ್ದೇಶಿಸಿರುವ ರೀತಿ ಆಯವ್ಯಯದಲ್ಲಿ ಒದಗಿಸುವ ಹಣದಲ್ಲಿ ಶೇ. ೫೦ ರಷ್ಟು ಗಂಗಾ ಕಲ್ಯಾಣ ಯೋಜನೆಯಡಿ ಕೊರೆಯಬೇಕೆಂದು ಆದೇಶಿಸಲಾಗಿದೆ. ಗಂಗಾ ಕಲ್ಯಾಣ ಯೋಜನೆಯಡಿ ಕೊರೆಯಬೇಕಾಗಿರುವ ಕೊಳವೆ ಬಾವಿಗಳ ಗುರಿಯನ್ನು ಜಿಲ್ಲಾವಾರು ನಿಗದಿಪಡಿಸಲಾಗಿದೆ.

೨೦೦೨ ೦೩ ನೇ ಸಾಲಿನಲ್ಲಿ ಕೊಳವೆ ಬಾವಿಗಳನ್ನು ಕೊರೆಯುವಾಗ ಈ ಕೆಳಗೆ ತಿಳಿಸಿದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಜನರಿಗೆ ಸೀಮಿತ ಗೊಳಿಸುವುದು.

೧. ದರ್ಖಾಸ್ತಿನಲ್ಲಿ ಸರ್ಕಾರದಿಂದ ಮಂಜೂರು ಮಾಡಿದ ಅರ್ಜಿದಾರರನ್ನು ಗುರುತಿಸಿ ಮೊದಲ ಆದ್ಯತೆಯ ಮೇಲೆ ಆಯ್ಕೆ ಸಮಿತಿಯಿಂದ ಆಯ್ಕೆ ಮಾಡುವುದು.

೨. ಪಿಟಿಸಿಎಲ್ ಕಾಯ್ದೆಯಂತೆ ವಾಪಸ್ಸು ನೀಡಿದ ಜಮೀನು ಹೊಂದಿರುವ ಅರ್ಜದಾರರನ್ನು ಎರಡನೇ ಆದ್ಯತೆ ಮೇಲೆ ಆಯ್ಕೆ ಮಾಡುವುದು.

೩. ನಿಗಮದ ಭೂ ಒಡೆತನ ಯೋಜನೆಯಡಿಯಲ್ಲಿ ಮಂಜೂರು ಮಾಡಿದ ಫಲಾನುಭವಿಗಳಿಗೆ ಮೂರನೇ ಆದ್ಯತೆ ನೀಡಿ ಅರ್ಜಿದಾರರನ್ನು ಆಯ್ಕೆ ಸಮಿತಿಯಿಂದ ಆಯ್ಕೆ ಮಾಡುವುದು.

ಆಯ್ಕೆ ಪ್ರಕ್ರಿಯೆ ಪೂರ್ಣಗೊಳಿಸಿ, ಆಯ್ಕೆ ಪಟ್ಟಿಯನ್ನು ಸಿದ್ಧಪಡಿಸಿಕೊಳ್ಳುವುದು. ಈ ಬಗ್ಗೆ ಯಾವುದೇ ರೀತಿಯ ನಿಧಾನ ಮತ್ತು ನಿರ್ಲಕ್ಷತನಕ್ಕೆ ಅವಕಾಶ ಕೊಡದಂತೆ ಜಿಲ್ಲಾ ವ್ಯವಸ್ಥಾಪಕರು ಕ್ರಮ ಕೈಗೊಳ್ಳುವುದು.

**ಮುಚ್ಚಳಿಕೆ ಕರಾರು ಪತ್ರ**

ನಿಗಮದ ಯೋಜನೆಯಡಿ ಕೊರೆಯಲಾಗಿರುವ ಕೊಳವೆ ಭಾವಿ ಜಮೀನನ್ನು ಬೇರೆಯವರಿಗೆ ಎರವಲು ಅಥವಾ ಮಾರಾಟ ಮಾಡುವುದಿಲ್ಲವೆಂಬ ಬಗ್ಗೆ ಫಲಾನುಭವಿಯ ನಿಗಮದೊಡನೆ ಕರಾರು ಪತ್ರ ಬರೆದುಕೊಡಬೇಕು. ಕೊಳವೆ ಭಾವಿ ಸಂಬಂಧಿಸಿದ ಇತರ

ಪರಿಕರಗಳನ್ನು ಜೋಪಾನವಾಗಿಟ್ಟುಕೊಳ್ಳುವುದಾಗಿ ಮತ್ತು ದೊರೆತ ನೀರನ್ನು ಎಲ್ಲರೂ ಜೋಪಾನವಾಗಿಟ್ಟುಕೊಳ್ಳುವುದಾಗಿ ಮತ್ತು ದೊರೆತ ನೀರನ್ನು ಎಲ್ಲರೂ ಸಮವಾಗಿ ಹಂಚಿಕೊಳ್ಳುವುದಾಗಿ ಒಪ್ಪಿಗೆಯನ್ನು ಪಡೆಯಬೇಕು. ನೀರಿನ ಸದುಪಯೋಗ ಆಧುನಿಕ ಬೆಳೆ ತೆಗೆಯುವ ಬಗ್ಗೆ, ಫಲಾನುಭವಿಗಳನ್ನು ಆಗಿಂದಾಗ್ಗೆ ಸಂಪರ್ಕಿಸಿ ಸಭೆ ಕರೆದು ಅಗತ್ಯ ತಿಳುವಳಿಕೆ ಮಾರ್ಗದರ್ಶನ ನೀಡುವುದು, ಸಂಬಂಧಿಸಿದ ತಾಲ್ಲೂಕು ಅಭಿವೃದ್ಧಿ ಅಧಿಕಾರಿಗಳ ಮುಖ್ಯ ಕರ್ತವ್ಯವಾಗಿರುತ್ತದೆ.

**ವೈಯಕ್ತಿಕ ನೀರಾವರಿ ಕೊಳವೆ ಬಾವಿ ಯೋಜನೆ**

ಈ ಯೋಜನೆಯಡಿ ಅನುಸರಿಸಬೇಕಾದ ನಿಯಮಾವಳಿಗಳ ಬಗ್ಗೆ, ವಿವರವಾದ ಸುತ್ತೋಲೆಯನ್ನು ಈಗಾಗಲೇ ನೀಡಲಾಗಿದೆ. ಜಿಲ್ಲಾವಾರು ಹಾಗೂ ತಾಲ್ಲೂಕುವಾರು ಗುರಿಯನ್ನು ಲಗತ್ತಿಸಿದೆ. ವೈಯಕ್ತಿಕ ಕೊಳವೆಬಾವಿ ಯೋಜನೆಯ ಅನುಷ್ಠಾನಕ್ಕೆ ಗಂಗಾ ಕಲ್ಯಾಣ ಯೋಜನೆಯಡಿ ಬಿಡುಗಡೆಯಾಗುವ ಹಣದಲ್ಲಿ ಶೇ. ೫೦ ರಷ್ಟು ವಿನಿಯೋಗಿಸಿ ಕೊಳವೆ ಬಾವಿ ಕೊರೆಯಲು ಕ್ರಮ ಕೈಗೊಂಡಿದೆ. ಹೆಚ್ಚುವರಿ ಹಣವನ್ನು ಕ್ರೋಢೀಕರಿಸಿದ ಹಣದಿಂದ ಭರಿಸಲಾಗುವುದು.

ಪ್ರತಿ ವಿಧಾನಸಭಾ ಕ್ಷೇತ್ರವಾರು ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗವಾರು ಗುರಿ ನಿಗದಿ ಪಡಿಸಿದೆ. ಅದರಂತೆ ಜಿಲ್ಲಾ ವ್ಯವಸ್ಥಾಪಕರು ಗುರಿಗೆ ತಕ್ಕಂತೆ ಯೋಜನೆಯ ಮಾರ್ಗ ಸೂಚಿಯಂತೆ ಆಯ್ಕೆ ಮಾಡಿ ಕೊಳವೆ ಬಾವಿ ಕೊರೆಯತಕ್ಕದ್ದು.

ಕೊಳವೆ ಬಾವಿ ಕೊರೆಯುವಾಗ ಈ ಕೆಳಗೆ ತಿಳಿಸಿದ ಜಮೀನುಗಳಿಗೆ ಆದ್ಯತೆಯನ್ನು ನೀಡುವುದು.

೧. ದರ್ಖಾಸ್ತಿನಲ್ಲಿ ಸರ್ಕಾರದಿಂದ ಮಂಜೂರು ಮಾಡಿದ ಅರ್ಜಿದಾರರನ್ನು ಗುರ್ತಿಸಿ ಮೊದಲ ಆದ್ಯತೆಯ ಮೇಲೆ ಆಯ್ಕೆ ಸಮಿತಿಯಿಂದ ಆಯ್ಕೆ ಮಾಡುವುದು.

೨. ಕೆ.ಪಿ.ಟಿ.ಸಿ.ಎಲ್. ಕಾಯ್ದೆಯಂತೆ ವಾಪಸ್ಸು ನೀಡಿದ ಜಮೀನು ಹೊಂದಿರುವ ಅರ್ಜಿದಾರರನ್ನು ಎರಡನೇ ಆದ್ಯತೆ ಮೇಲೆ ಆಯ್ಕೆ ಮಾಡುವುದು.

೩. ನಿಗಮದ ಭೂ ಒಡೆತನ ಯೋಜನೆಯಡಿಯಲ್ಲಿ ಮಂಜೂರು ಮಾಡಿದ ಫಲಾನುಭವಿಗಳಿಗೆ ಮೊದಲನೇ ಆದ್ಯತೆಯ ಮೇಲೆ ಅರ್ಜಿದಾರರನ್ನು ಆಯ್ಕೆ ಸಮಿತಿಯಿಂದ ಆಯ್ಕೆ ಮಾಡುವುದು.

**ಯೋಜನಾ ವೆಚ್ಚ**

ಸರ್ಕಾರಿ ಆದೇಶ ಸಂಖ್ಯೆ ಸ.ಕಾ.ಇ. ೧೭೦ ಎಸ್.ಡಿ.ಸಿ. ೦೧ ದಿನಾಂಕ ೨೨.೦೩.೨೦೦೨ ರಂತೆ ಈ ಯೋಜನೆಯಡಿ ಪ್ರತಿ ಕೊಳವೆ ಬಾವಿಗೆ ಘಟಕ ವೆಚ್ಚ ಗರಿಷ್ಠ ೭೫.೦೦೦ ನಿಗದಿ

ಪಡಿಸಲಾಗಿದ್ದು ಸಹಾಯದನ ಗರಿಷ್ಠ ಮೊತ್ತ ರೂ. ೬೫,೦೦೦ ಗಳಿರುತ್ತದೆ. ಯೋಜನಾ ವೆಚ್ಚ ಡ್ರಿಲ್ಲಿಂಗ್ ವೆಚ್ಚ ಪಂಪ್ಸೆಟ್ ವೆಚ್ಚ ಹಾಗೂ ಕೆ.ಪಿ.ಟಿ.ಸಿ.ಎಲ್. ಗೆ ಕಟ್ಟಬೇಕಾದ ಠೇವಣಿ ಮೊತ್ತ ಸೇರಿ ರೂ. ೭೫,೦೦೦ ಘಟಕ ವೆಚ್ಚ ಮೀರದಂತೆ ಎಚ್ಚರಿಕೆ ವಹಿಸಿ ಕೊಳವೆ ಬಾವಿ ನಿರ್ಮಾಣಕ್ಕೆ ತಗಲುವ ವೆಚ್ಚವನ್ನು ತಯಾರಿಸಬೇಕು. ಸಾಲದ ಹಣ ರೂ. ೧೦,೦೦೦ ಕ್ಕೆ ಜಮೀನು ಅಡಮಾನ ಮಾಡಿಕೊಳ್ಳುವುದು. ಸದರಿ ಮೊತ್ತಕ್ಕೆ ಕೊಳವೆ ಬಾವಿಗೆ ಪಂಪ್ಸೆಟ್ ಅಳವಡಿಸುವ ಮೊದಲ ನಿಗಮಕ್ಕೆ ಫಲಾನುಭವಿಯ ಜಮೀನನ್ನು ಅಡಮಾನ ಮಾಡಿಕೊಳ್ಳಲು ಮತ್ತು ಸಾಲದ ಹಣವನ್ನು ವಸೂಲಿ ಮಾಡಿಕೊಂಡು ಪ್ರಧಾನ ಕಛೇರಿಗೆ ವರದಿ ಮಾಡಲು ಅಗತ್ಯಕ್ರಮ ತೆಗೆದುಕೊಳ್ಳಬೇಕು.

**ದೇವದಾಸಿ ಪುನರ್ವಸತಿ ಯೋಜನೆ**

ಸರ್ಕಾರವು ರಾಜ್ಯದ ಎಂಟು ಜಿಲ್ಲೆಗಳಾದ ಧಾರವಾಡ, ಹಾವೇರಿ, ಗದಗ, ಬಳ್ಳಾರಿ, ದಾವಣಗೆರೆ, ರಾಯಚೂರು, ಕೊಪ್ಪಳ ಹಾಗೂ ಗುಲ್ಬರ್ಗಾ ಜಿಲ್ಲೆಗಳಲ್ಲಿನ ದೇವದಾಸಿಯರಿಗೆ ಪುನರ್ವಸತಿ ಕಲ್ಪಿಸುವ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ಗುರುತಿಸಿದ್ದು, ಇವರಿಗೆ ಸ್ವಯಂ ಉದ್ಯೋಗ ಯೋಜನೆ, ಭೂ ಒಡೆತನ ಯೋಜನೆ ಮನೆ ಮತ್ತು ಕೊಟ್ಟಿಗೆ ನಿರ್ಮಾಣ ಯೋಜನೆಗಳಡಿ ಸೌಲಭ್ಯ ಒದಗಿಸಲಾಗುತ್ತದೆ. ಈ ಮೇಲ್ಕಂಡ ಜಿಲ್ಲೆಗಳ ಜೊತೆಗೆ ಸರ್ಕಾರದ ಆದೇಶದಂತೆ ಇನ್ನು ಮೂರು ಜಿಲ್ಲೆಗಳಾದ, ಬೆಳಗಾಂ, ಬಿಜಾಪುರ, ಬಾಗಲಕೋಟೆ ಜಿಲ್ಲೆಗಳಲ್ಲಿ ಮನೆ ಕೊಟ್ಟಿಗೆ ನಿರ್ಮಾಣ ಕಾರ್ಯವನ್ನು ನಿಗಮದಿಂದಲೇ ಅನುಷ್ಠಾನಗೊಳಿಸಲಾಗಿದೆ.

**ಸಫಾಯಿ ಕರ್ಮಚಾರಿ ಪುನರ್ವಸತಿ ಯೋಜನೆ**

ಅಮಾನವೀಯ ಪದ್ಧತಿಯಾದ ತಲೆಯ ಮೇಲೆ ಮಲ ಹೊರುವ ಕೆಲಸದಲ್ಲಿ ನಿರತರಾಗಿರುವ ಸಫಾಯಿ ಕರ್ಮಚಾರಿ ಹಾಗೂ ಅವರ ಅವಲಂಬಿತರಿಗೆ ಪುನರ್ವಸತಿ ಕಲ್ಪಿಸಿ ಅವರಿಗೆ ಪರ್ಯಾಯ ಉದ್ಯೋಗ ಕೈಗೊಳ್ಳಲು ಆರ್ಥಿಕ ಸೌಲಭ್ಯ ನೀಡುವ ಈ ಯೋಜನೆಯು ರಾಷ್ಟ್ರೀಯ ಯೋಜನೆಯಾಗಿರುತ್ತದೆ.

**ಯೋಜನಾ ವಿವರ**

ಈ ಯೋಜನೆಯಡಿ ಶೇ. ೫೦ ರಷ್ಟು ಸಹಾಯಧನ ಗರಿಷ್ಠ ಮಿತಿ ರೂ. ೧೦,೦೦೦.೦೦ ಶೇ. ೧೫ ರಷ್ಟು ಅಂಚಿನ ಹಣದ ಸಾಲ. ಉಳಿದ ಭಾಗ ಬ್ಯಾಂಕ್ ಸಾಲವಾಗಿರುತ್ತದೆ.

**ಅರ್ಹತೆಗಳು**

೧. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಾಗಿದ್ದು ಸಫಾಯಿ ಕರ್ಮಚಾರಿ ದೃಢೀಕರಣ ಪತ್ರ ಪಡೆದಿರಬೇಕು.

೨. ಸುಸ್ತಿದಾರರಾಗಿರಬಾರದು



ವಿಶೇಷ ಘಟಕ ಯೋಜನೆಯಡಿಯಲ್ಲಿ ಶ್ರೀ ಹುಲುಗಪ್ಪ ಉಪನಾಯಕನ ಹಳ್ಳಿ ಇವರಿಗೆ ಬಡಗಿತನ ಸಾಮಾಗ್ರಿಗಳಿಗೆ ಸಹಾಯ ಧನ ನೀಡಲಾಗಿದೆ.



ಪ.ಜಾ. ಮತ್ತು ಪ.ಪಂ.ದ ಅಭಿವೃದ್ಧಿ ನಿಗಮದಿಂದ ಸ್ವಯಂ ಉದ್ಯೋಗ ಯೋಜನೆಯಡಿ ಶ್ರೀಮತಿ ಹಂಪಮ್ಮ ಗಂಡ ಲಕ್ಷ್ಮಣ, ಹಗರಿಬೊಮ್ಮನಹಳ್ಳಿ ಇವರಿಗೆ ನೀಡಿರುವ ಕಿರಾಣಿ ಅಂಗಡಿ



ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟಪಂಗಡದ ಅಭಿವೃದ್ಧಿ ನಿಗಮದ ಭೂಒಡೆತನ ಯೋಜನೆಯಲ್ಲಿ ನೀಡಿರುವ ಕ್ಯಾಸನಬುಂಡಿ ಗ್ರಾಮದಲ್ಲಿ ಇರುವ ಭೂಮಿ

**ಮರುಪಾವತಿ**

ಈ ಯೋಜನೆಯಲ್ಲಿ ಶೇ. ೧೫ ರಷ್ಟು ಅಂಚಿನ ಹಣದ ಸಾಲ ಹಾಗೂ ಅವಧಿ ಸಾಲ ಇರುವುದರಿಂದ ಇದನ್ನು ಪಲಾನುಭವಿಯು ಮರುಪಾವತಿ ಮಾಡಬೇಕು.

**ಸ್ಯಾನಿಟರಿ ಮಾರ್ಟ್**

ರಾಷ್ಟ್ರೀಯ ಸಫಾಯಿ ಕರ್ಮಚಾರಿಗಳ ಪುನರ್ವಸತಿ ಯೋಜೆಯಡಿ ಸ್ಯಾನಿಟರಿ ಮಾರ್ಟ್ ಒಂದು ಯೋಜನೆ. ಈ ಯೋಜನೆಯನ್ವಯ ೫ ರಿಂದ ೨೫ ರಂತೆ ಒಂದು ಗುಂಪು ರಚಿಸಿ ಆ ಗುಂಪಿನ ಮುಖಾಂತರ ಸ್ಯಾನಿಟರಿ ವಸ್ತುಗಳಾದ ಬೇಸಿನ್, ಬ್ಲೀಚಿಂಗ್ ಪೌಡರ್, ಪೊರಕೆ, ಫಿನಾಯಿಲ್ ಇತ್ಯಾದಿಗಳನ್ನು ಮಾರಾಟ ಮಾಡುವುದು. ಅಲ್ಲದೆ ಈ ಗುಪಿನ ಮುಖಾಂತರ ಕೇಂದ್ರ ಪ್ರಾರಂಭಿಸುವುದು. ಲ್ಯಾಟ್ರಿನ್ ಕಟ್ಟಿಸುವುದು. ಈ ಯೋಜನೆಯಡಿ ಪ್ರತಿ ಫಲಾನುಭವಿಗಳಿಗೆ ರಾಷ್ಟ್ರೀಯ ಸಫಾಯಿ ಕರ್ಮಚಾರಿ ಹಣಕಾಸು ಅಭಿವೃದ್ಧಿ ನಿಗಮದಿಂದ ರೂ. ೭೦,೦೦೦ ಅವಧಿ ಸಾಲ, ರೂ. ೧೦,೦೦೦.೦೦ ಸಹಾಯ ಧನ ರೂ. ೩,೦೦೦.೦೦ ಬೀಜಧನ ಬಿಡುಗಡೆ ಮಾಡಲಾಗುತ್ತದೆ.

**ಭೂಸಾರ ಮತ್ತು ಜಲಸಂರಕ್ಷಣೆ**

ವಿಶೇಷ ಘಟಕ ಯೋಜನೆಯಲ್ಲಿ ಕೃಷಿ ಇಲಾಖೆಯ ಮೂಲಕ ಪರಿಶಿಷ್ಟರ ಹೊಲಗಳಲ್ಲಿ ನೀರು ಸಂಗ್ರಹಣೆಯನ್ನು ಮಾಡಲು ಜಲ ಸಂರಕ್ಷಣಾ ಇಲಾಖೆಯೊಂದನ್ನು ಸೃಷ್ಟಿಸಿ ಭೂಸಾರ ಸಂರಕ್ಷಣೆಗೆ ತಡೆಗೋಡೆ ಬಂಡುಗಳನ್ನು ನಿರ್ಮಾಣ ಮಾಡಲಾಗುತ್ತಿದೆ. ಜಲಸಂರಕ್ಷಣೆ ಮಾಡುವ ಸಲುವಾಗಿ ಇಳಿಜಾರುಗಳಿಗೆ ಬದುಗಳು ಮತ್ತು ಚೆಕ್ ಡ್ಯಾಂಗಳನ್ನು ನಿರ್ಮಿಸಿ ವೃಥಾ ಪೋಲಾಗುವ ನೀರನ್ನು ಸಂಗ್ರಹಿಸಿ ತನ್ಮೂಲಕ ರೈತರ ಕೃಷಿ ಚಟುವಟಿಕೆಗಳಿಗೆ ನೆರವಾಗುವಂತೆ ಮಾಡಲಾಗುತ್ತದೆ. ಆದರೆ ಹಗರಿಬೊಮ್ಮನಹಳ್ಳಿ ತಾಲೂಕಿನ ಪರಿಶಿಷ್ಟ ಜಾತಿಯವರ ಕೃಷಿ ಭೂಮಿಯಲ್ಲಿ ಈ ರೀತಿಯ ಉತ್ತಮ ಕಾಮಗಾರಿಗಳಾಗಿರುವ ಉದಾಹರಣೆಗಳಿರುವುದಿಲ್ಲ.

**ಉದ್ಯೋಗ ಮತ್ತು ತರಬೇತಿ ಇಲಾಖೆ**

ಸದರಿ ಇಲಾಖೆಯ ವತಿಯಿಂದ ಪರಿಶಿಷ್ಟ ಜಾತಿಯವರಿಗೆ ಬಡಗಿತನ, ಟೈಲರಿಂಗ್ ಮೊದಲಾದ ವೃತ್ತಿಗಳಲ್ಲಿ ತರಬೇತಿ ನೀಡಲಾಗುತ್ತಿದೆ. ತರಬೇತಿಯ ಅವಧಿಯಲ್ಲಿ ಪ್ರತಿ ಅಭ್ಯರ್ಥಿಗೆ ಮಾಹೆಯಾನ ರೂ. ೫೦೦ ರಂತೆ ಒಂದು ವರ್ಷಗಳ ಕಾಲ ಶಿಷ್ಯವೇತನವನ್ನು ನೀಡುವುದರ ಜೊತೆಗೆ ರೂ. ೧೦೦ಗಳ ಪ್ರೋತ್ಸಾಹ ಧನವನ್ನು ಪ್ರತಿ ಅಭ್ಯರ್ಥಿಯ ಪೋಷಕರಿಗೆ ನೀಡಲಾಗುತ್ತಿದೆ. ಜೊತೆಗೆ ತರಬೇತಿಯನ್ನು ಯಶಸ್ವಿಯಾಗಿ ಪೂರೈಸಿದ ಅಭ್ಯರ್ಥಿಗಳಿಗೆ ಟೂಲ್‌ಕಿಟ್, ಹೊಲಿಗೆ ಯಂತ್ರ ಮತ್ತು ಕಚ್ಚಾಸಾಮಾಗ್ರಿಗಳನ್ನು ಉಚಿತವಾಗಿ ನೀಡಲಾಗುತ್ತಿದೆ.

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ**

ಪರಿಶಿಷ್ಟ ಜಾತಿಯ ಕಾಲೋನಿಗಳಿಗೆ ಈ ನಿಗಮದಿಂದ ವಿದ್ಯುದ್ದೀಕರಣ ಕೈಗೊಳ್ಳಲು ಅನುದಾನ ನೀಡಲಾಗುತ್ತಿದೆ. ಗಂಗಾಕಲ್ಯಾಣ ಮತ್ತು ಕೊಳವೆ ಬಾವಿಗಳನ್ನು ಮಾಡಿಸಿಕೊಂಡಿರುವ ಪರಿಶಿಷ್ಟ ಜಾತಿಯವರ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸವುದು ಅಂತೆಯೇ ಭಾಗ್ಯಜ್ಯೋತಿ ಮತ್ತು ಕುಟೀರ ಜ್ಯೋತಿ ಯೋಜನೆ ಮೂಲಕ ಪರಿಶಿಷ್ಟ ಜಾತಿಯವರ ಮನೆಗಳಿಗೆ ವಿದ್ಯುತ್ ಸೌಲಭ್ಯ ಒದಗಿಸಲಾಗುತ್ತಿದೆ.

**ವಸತಿ ಇಲಾಖೆ**

ವಸತಿ ಇಲಾಖೆಯು ಹಮ್ಮಿಕೊಂಡಿರುವ ಕಾರ್ಯಕ್ರಮಗಳಲ್ಲಿ ಪರಿಶಿಷ್ಟ ಜಾತಿಯವರಿಗೆ ವಸತಿ ಸೌಲಭ್ಯ ಗುರಿಯನ್ನು ನಿಗದಿಪಡಿಸಿಕೊಂಡು ಅನುಷ್ಠಾನಗೊಳಿಸುತ್ತಿದೆ. ಈ ಯೋಜನೆಯಡಿಯಲ್ಲಿ ನಗರ ಮತ್ತು ಗ್ರಾಮಾಂತರ ಪ್ರದೇಶದಲ್ಲಿರುವ ಪರಿಶಿಷ್ಟಜಾತಿಯವರಿಗೆ ಆಶ್ರಯ ವಸತಿ ಯೋಜನೆಯಡಿಯಲ್ಲಿ ಮನೆಗಳನ್ನು ವಿತರಿಸಲಾಗುವುದು. ಡಾ. ಅಂಬೇಡ್ಕರ್ ವಸತಿಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿಯವರಿಗೆ ವೆಚ್ಚ ರೂ. ೨೦,೦೦೦ ಗಳಂತೆ ಮನೆಗಳ ನಿರ್ಮಾಣ ಮಾಡಲಾಗುತ್ತಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ಆಶ್ರಯ ವಸತಿ ಯೋಜನೆಯಡಿ ನಿರ್ಮಾಣವಾಗುವ ಮನೆಗಳಿಗೆ ಸಹಾಯ ಧನ ನೀಡುವುದು. ನೆರಳಿನ ಭಾಗ್ಯ ಯೋಜನೆಯಡಿಯಲ್ಲಿ ತಲಾ ರೂ. ೫,೦೦೦ ವೆಚ್ಚದಲ್ಲಿ ಹುಲ್ಲಿನ ಛಾವಣಿಯನ್ನು ಬದಲಾಯಿಸಿ ಹಂಚಿನ ಛಾವಣಿಯನ್ನು ಒದಗಿಸಲಾಗುತ್ತಿದೆ.

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಪರಿಶಿಷ್ಟ ಜಾತಿಯವರಿಗೆ ವಿಶೇಷ ಘಟಕ ಯೋಜನೆಯಲ್ಲಿ ಈ ಕೆಳಕಂಡ ಕಾರ್ಯಕ್ರಮಗಳನ್ನು ರೂಪಿಸಲಾಗಿದೆ.

೧. ಪರಿಶಿಷ್ಟ ಜಾತಿಯವರ ಕಲೆಗಳನ್ನು ಪ್ರೋತ್ಸಾಹಿಸಲು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಲಾಗುತ್ತಿದೆ.

೨. ಪರಿಶಿಷ್ಟ ಜಾತಿಯವರ ಸಾಂಸ್ಕೃತಿಕ ಚಟುವಟಿಕೆಗಳನ್ನು ಪ್ರೋತ್ಸಾಹಿಸಲು ಸಹಾಯಧನವನ್ನು ನೀಡಲಾಗುತ್ತಿದೆ.

೩. ಸಂಗೀತ ಪರಿಕರಗಳು, ರಂಗಪರಿಕರಗಳನ್ನು ಖರೀದಿಸಲು ಸಹಾಯಧನವನ್ನು ನೀಡಲಾಗುತ್ತಿದೆ.

**ಸಾರ್ವಜನಿಕ ಶಿಕ್ಷಣ ಇಲಾಖೆ**

ಈ ಇಲಾಖೆಯ ವತಿಯಿಂದ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳ ಶೈಕ್ಷಣಿಕ ಅಭಿವೃದ್ಧಿಗಾಗಿ ಈ ಕೆಳಕಂಡ ಕಾರ್ಯಕ್ರಮಗಳನ್ನು ರೂಪಿಸಲಾಗಿದೆ.

೧. ವಿದ್ಯಾವಿಕಾಸ ಕಾರ್ಯಕ್ರಮಗಡಿ ಒಂದರಿಂದ ಏಳನೆಯ ತರಗತಿಯವರೆಗೆ ಅಭ್ಯಾಸ ಮಾಡುತ್ತಿರುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಉಚಿತ ಸಮವಸ್ತ್ರಗಳನ್ನು ಒದಗಿಸಲಾಗುತ್ತಿದೆ.

೨. ಒಂದರಿಂದ ಏಳನೆಯ ತರಗತಿಯವರೆಗೆ ಅಭ್ಯಾಸ ಮಾಡುತ್ತಿರುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಉಚಿತ ಬ್ಯಾಗ್ ಒದಗಿಸಲಾಗುತ್ತಿದೆ.

೩. ಹೆಚ್ಚುವರಿ ಶಾಲಾಕೊಠಡಿಗಳನ್ನು ನಿರ್ಮಿಸುವ ಕಾರ್ಯಕ್ರಮಗಳನ್ನು ಈ ಯೋಜನೆಯಡಿಯಲ್ಲಿ ನಿರ್ಮಾಣ ಮಾಡಲಾಗುತ್ತಿದೆ.

**ಕಾಲೇಜು ಶಿಕ್ಷಣಾ ಇಲಾಖೆ**

ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕ ಹಾಗೂ ಮತ್ತಿತರ ಸಾಮಾಗ್ರಿಗಳನ್ನು ವಿತರಿಸಲಾಗುತ್ತಿದೆ. ಮತ್ತು ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ವಿಶೇಷ ಬೋಧನಾ ತರಗತಿಗಳನ್ನು ನಡೆಸಲಾಗುತ್ತಿದೆ.

**ತಾಂತ್ರಿಕ ಶಿಕ್ಷಣ ಇಲಾಖೆ**

ತಾಂತ್ರಿಕ ಶಿಕ್ಷಣ ಇಲಾಖೆಯ ವತಿಯಿಂದ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳ ಅಭಿವೃದ್ಧಿಗೆ ಸಹಾಯವಾಗುವಂತೆ ಡ್ರಾಯಿಂಗ್ ಉಪಕರಣಗಳನ್ನು ಪ್ರತಿ ವಿದ್ಯಾರ್ಥಿಗೆ ರೂ. ೧೨,೦೦೦ ಗಳಿಗೆ ಮೀರದಂತೆ ಉಚಿತವಾಗಿ ವಿತರಿಸಲಾಗುತ್ತಿದೆ. ಬುಕ್ ಬ್ಯಾಂಕ್ ಯೋಜನೆಯಡಿಯಲ್ಲಿ ರೂ. ೫೦೦ ಗಳಿಗೆ ಮಿತಗೊಳಿಸಿ ಬೆಲೆಬಾಳುವ ಪುಸ್ತಕಗಳನ್ನು ಉಚಿತವಾಗಿ ನೀಡಲಾಗುತ್ತಿದೆ. ಮತ್ತು ಸಮವಸ್ತ್ರಗಳನ್ನು ನೀಡಲಾಗುತ್ತಿದೆ.

**ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ**

ಈ ಇಲಾಖೆಯ ಮೂಲಕ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿಯವರ ಅಭಿವೃದ್ಧಿಗಾಗಿ ಆರ್ಥಿಕ ಸಹಾಯ, ಉದ್ಯೋಗ ಮತ್ತು ಜೀವನ ಮಟ್ಟವನ್ನು ಸುಧಾರಿಸಲು ಈ ಕೆಳಕಂಡ ಕಾರ್ಯಕ್ರಮಗಳ ಅಡಿಯಲ್ಲಿ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.

೧. ಸ್ವರ್ಣಜಯಂತಿ ಶಹರಿ ರೋಜ್‌ಗಾರ್ ಯೋಜನೆ

೨. ಇಂದಿರಾ ಅವಾಜ್ ಯೋಜನೆ

೩. ಉದ್ಯೋಗ ಭರವಸೆ ಯೋಜನೆ

೪. ಗ್ರಾಮಪಂಚಾಯತಿಗಳಿಗೆ ಗ್ರ್ಯಾಂಟ್ಸ್

೫. ಅಭಿವೃದ್ಧಿ ಕಾಮಗಾರಿಗಳಿಗೆ ಗ್ರ್ಯಾಂಟ್ಸ್

೬. ಸಣ್ಣನೀರಾವರಿ

೭. ರಸ್ತೆ ಮತ್ತು ಸೇತುವೆ

೮. ಗ್ರಾಮೀಣ ನೀರು ಪೂರೈಕೆ

**ವಿಶೇಷ ಘಟಕ ಯೋಜನೆಗೆ ವಿಶೇಷ ಕೇಂದ್ರಿಯ ನೆರವು**

ವಿಶೇಷ ಘಟಕ ಯೋಜನೆಯಡಿ ರಾಜ್ಯದಲ್ಲಿ ಅನುಷ್ಠಾನವಾಗುತ್ತಿರುವ ವಿವಿಧ ಯೋಜನೆಗಳಿಗೆ ಪೂರಕವಾಗಿ ಭಾರತ ಸರ್ಕಾರದಿಂದ ವಿಶೇಷ ನೆರವನ್ನು ನೀಡಲಾಗುತ್ತಿದೆ. ಭಾರತ ಸರ್ಕಾರಕ್ಕೆ ಸಲ್ಲಿಸಿದ ಯೋಜನಾ ವರದಿಯನ್ವಯ ಪ್ರತೀ ಫಲಾನುಭವಿಗಳಿಗೆ ರೂ. ೧೦,೦೦೦.೦೦ ಸಹಾಯ ಧನಕ್ಕೆ ಮೀರದಂತೆ ಕೆಲವೊಂದು ಪ್ರಮುಖ ಯೋಜನೆಗಳಾದ ಕೃಷಿ, ಪಶು ಸಂಗೋಪನೆ, ತೋಟಗಾರಿಕೆ, ರೇಷ್ಮೆ, ಕಾರ್ಯಕ್ರಮಗಳು, ಕಂಪ್ಯೂಟರ್ ತರಬೇತಿ, ವೃತ್ತಿ ಶಿಕ್ಷಣ ತರಬೇತಿ, ಗಂಗಾ ಕಲ್ಯಾಣ, ಭೂ ಖರೀದಿ ಯೋಜನೆಗಳಿಗೆ ಸಹಾಯಧನವನ್ನು ವಿಶೇಷ ಕೇಂದ್ರೀಯ ನೆರವಿನಡಿ ಬಿಡುಗಡೆಯಾಗುವ ಹಣದಲ್ಲಿ ಭರಿಸಲಾಗುತರ್ತಿದೆ.

**೨. ವಿಶೇಷ ಘಟಕ ಯೋಜನೆಯಡಿ ವಿಶೇಷ ಕೇಂದ್ರಿಯ ನೆರವಿನ ೨೦೦೨-೦೩ ನೇ ಸಾಲಿನ ಕಾರ್ಯಕ್ರಮಗಳು**

೧. ಕೃಷಿ: ಪರಿಶಿಷ್ಟ ಜಾತಿ ರೈತರಿಗೆ ರಾಶಿಯಂತ್ರ ಪುರೈಕೆಗೆ ಸಹಾಯ ಧನ

೨. ತೋಟಗಾರಿಕೆ: ಪರಿಶಿಷ್ಟ ಜಾತಿಯವರಿಗೆ ತೆಂಗು, ಹಣ್ಣು, ಹೂಗಳು ಬೆಳೆಯಲು ಸಹಾಯ ಧನ

೩. ರೇಷ್ಮೆ: ಪರಿಶಿಷ್ಟ ಜಾತಿಯವರ ಜಮೀನಿನಲ್ಲಿ ಹಿಪ್ಪು ನೇರಳೆ, ರೆಷ್ಮೆ ಬೆಳೆಯಲು ಸಹಾಯ ಧನ

೪. ಮೀನುಗಾರಿಕೆ: ಪರಿಶಿಷ್ಟ ಜಾತಿಯ ಮೀನುಗಾರರಿಗೆ ಮೀನುಗಾರಿಕೆ ಸಹಾಯ ಧನ ಮೀನು ಮಾರಾಟಕ್ಕೆ, ಬಲೆ, ಸೈಕಲ್ ಇತ್ಯಾದಿ

೫. ಪಶುಸಂಗೋಪನೆ: ಪರಿಶಿಷ್ಟ ಜಾತಿಯವರಿಗೆ ಮಿಶ್ರತಳಿ, ಹಸು ಎಮ್ಮೆ, ಮೇಕೆಗಳು ಮತ್ತು ಕುರಿಗಳನ್ನು ನೀಡುವುದು.

೬. ಕೆ.ಎಸ್.ಎಸ್.ಐ.ಡಿ.ಸಿ.: ಪರಿಶಿಷ್ಟ ಜಾತಿಯ ಸಣ್ಣ ಕೈಗಾರಿಕೆಗಳ ಉದ್ಯಮಿಗಳ ಸಹಾಯಧನ

೭. ಖಾದಿ ಮತ್ತು ಗ್ರಾಮೋದ್ಯೋಗ: ಪರಿಶಿಷ್ಟ ಜಾತಿಯ ನೇಕಾರರಿಗೆ ಸಹಾಯಧನ ಹಾಗೂ ಸ್ವಯಂ ಉದ್ಯೋಗ ಕೈಗೊಳ್ಳಲು ತರಬೇತಿ ಮತ್ತು ಉತ್ಪಾದನೆ.

೮. ರಬ್ಬರ್ ಅಭಿವೃದ್ಧ ಮಂಡಳಿ: ಪರಿಶಿಷ್ಟ ಜಾತಿಯ ಜಮೀನಿನಲ್ಲಿ ರಬ್ಬರ್

ಪ್ಲಾಂಟೇಷನ್‌ಗೆ ಸಹಾಯ ಧನ

೯. ಸಮಾಜ ಕಲ್ಯಾಣ ಇಲಾಖೆ:

೧. ಪರಿಶಿಷ್ಟ ಜಾತಿಯ ವಿದ್ಯಾವಂತ ನಿರುದ್ಯೋಗಿಗಳಿಗೆ ಕಂಪ್ಯೂಟರ್ ತರಬೇತಿ

೨. ಸ್ವಯಂ ಉದ್ಯೋಗ ಕಾರ್ಯಕ್ರಗಳಾದ ಎತ್ತುಗಾಡಿ ಪೂರೈಕೆ, ಮೋಟಾರು ವಾಹನ ಚಾಲನೆ ತರಬೇತಿ, ವೃತ್ತಿ ಶಿಕ್ಷಣ ತರಬೇತಿ ಇತ್ಯಾದಿಗಳು

೩. ಸರ್ಕಾರಿ ಸರ್ಕಾರೇತರ ಸಂಘ ಸಂಸ್ಥೆಗಳ ಮುಖಾಂತರ ಹೊಲಿಗೆ ತರಬೇತಿ, ಬಿದಿರು ಮತ್ತು ಬೆತ್ತದ ವಸ್ತುಗಳ ತಯಾರಿಕಾ ತರಬೇಸತಿ, ಇಟ್ಟಿಗೆ ತಯಾರಿಕೆ, ಚರ್ಮದ ಪಾದರಕ್ಷೆಗಳ ಮತ್ತು ಚರ್ಮದ ಉತ್ಪಾದನೆಗಳ ತರಬೇತಿ ಸಿದ್ಧ ಉಡುಪುಗಳ ತಯಾರಿಕಾ ತರಬೇತಿಗೆ ಸಹಾಯಧನ ಇತ್ಯಾದಿ.

**ಇ. ವಿಶೇಷ ಘಟಕ ಯೋಜನೆ ಅನುಷ್ಠಾನದಲ್ಲಿ ಬ್ಯಾಂಕುಗಳ ಪಾತ್ರ**

ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಬ್ಯಾಂಕುಗಳ ಪಾತ್ರ ಬಹು ಮುಖ್ಯವಾಗಿದೆ. ಅಭಿವೃದ್ಧಿಗೆ ಬೇಕಾದ ಪತ್ತಿನ ಸೌಲಭ್ಯವನ್ನು ಒದಗಿಸಿ ಅದರ ಚಾಲನೆಗೆ ಕಾರಣವಾಗಿರುತ್ತವೆ. ಅಭಿವೃದ್ಧಿಶೀಲ ರಾಷ್ಟ್ರದಂತಹ ನಮ್ಮದೇಶದಲ್ಲಿ ಹಣಕಾಸಿನ ಸಂಪನ್ಮೂಲ ಕೊರತೆಯಲ್ಲಿದೆ ಎನ್ನುವುದು ಒಪ್ಪಿಕೊಳ್ಳುವಂತಹ ಅಂಶವಾಗಿದ್ದು, ಬ್ಯಾಂಕುಗಳು ಇದನ್ನು ಪೂರೈಸಿ ಆರ್ಥಿಕ ಪ್ರಗತಿಯನ್ನು ತ್ವರಿತಗೊಳಿಸಬೇಕಾಗುತ್ತವೆ.

ಭಾರತ ಸರ್ಕಾರವು ಯೋಜನೆಯನ್ನು ಅಳವಡಿಸಿದೆ. ಸಾಮಾಜಿಕ ನ್ಯಾಯ ಮತ್ತು ಆರ್ಥಿಕ ಸಂಪತ್ತಿನ ಸಮಾನ ಹಂಚಿಕೆಯು ಯೋಜನೆಯ ಮುಖ್ಯ ಗುರಿಗಳಾಗಿವೆ. ಕೊರತೆಯಲ್ಲಿರುವ ಸಂಪನ್ಮೂಲವನ್ನು ನ್ಯಾಯ ಬದ್ಧವಾದ ರೀತಿಯಲ್ಲಿ ಪ್ರತಿಯೊಂದು ವಲಯಗಳಿಗೆ ಹಂಚುವುದು ಸಾಧನೆಯಾದರೆ, ಸಾಮಾಜಿಕ ನ್ಯಾಯ ದೊರಕಿಸಿಕೊಡುವುದು ಗುರಿಯಾಗಿದೆ. ಆದ ಕಾರಣ ನಮ್ಮ ದೇಶದಲ್ಲಿ ಬ್ಯಾಂಕುಗಳ ತಮ್ಮ ತಮ್ಮ ವ್ಯವಹಾರಿಕ ದೃಷ್ಟಿ ಕೋನವನ್ನು ಈಗ ಬಿಟ್ಟು ಕೊಟ್ಟು ಸರ್ಕಾರ ನಿಗದಿ ಪಡಿಸಿದ ಆದ್ಯತಾವಲಯಕ್ಕೆ ಅನುಕೂಲವಾಗುವಂತೆ ಸಾಲದ ನೀತಿಯನ್ನು ರೂಪಿಸಿದೆ. ಸ್ವಾತಂತ್ರ್ಯದ ನಂತರ ಭಾರತದ ಬ್ಯಾಂಕಿಂಗ್ ಪದ್ಧತಿಯಲ್ಲಿ ಅನೇಕ ಬದಲಾವಣೆಗಳಾದವು. ಈ ಬದಲಾವಣೆ ೧೯೫೫ ರಲ್ಲಿ ಇಂಪೀರಿಯಲ್ ಬ್ಯಾಂಕ್‌ನಿಂದ ಭಾರತೀಯ ಸ್ಟೇಟ್ ಬ್ಯಾಂಕ್ ಪರಿವರ್ತನೆಯೊಂದಿಗೆ ಪ್ರಾರಂಭವಾಯಿತು. ೧೯೬೭ ರಲ್ಲಿ ವಾಣಿಜ್ಯ ಬ್ಯಾಂಕುಗಳನ್ನು ಸಾಮಾಜಿಕ ಹತೋಟಿ ವ್ಯಾಪ್ತಿಗೆ ತರಲಾಯಿತು.

೧೯೬೯ ರಲ್ಲಿ ಪ್ರಧಾನ ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಿಸಲಾಯಿತು. ೧೯೭೫

ರಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸಿ, ಸಾಲದ ಸೌಲಭ್ಯವನ್ನು ಗ್ರಾಮೀಣ ಪ್ರದೇಶಕ್ಕೆ ವಿಸ್ತರಿಸಲಾಯಿತು. ಇವೆಲ್ಲ ಬ್ಯಾಂಕಿಂಗ್ ವ್ಯವಸ್ಥೆಯ ಬದಲಾವಣೆಗೆ ಒಂದು ಮುಖ್ಯವಾದ ಉದ್ದೇಶವಿದೆ. ಅದೇನೆಂದರೆ ಗ್ರಾಮೀಣ ಭಾಗದ ದುರ್ಬಲ ವರ್ಗಕ್ಕೆ ಸೇರಿದ ಜನರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿ ರಾಷ್ಟ್ರದ ಅಭಿವೃದ್ಧಿಯನ್ನು ತ್ವರಿತಗೊಳಿಸುವ ಚಲನಾತ್ಮಕ ಪಾತ್ರವನ್ನು ಬ್ಯಾಂಕುಗಳು ನಿರ್ವಹಿಸಬಲ್ಲವೆನ್ನುವ ದೃಢ ವಿಶ್ವಾಸ ಬಹುಮುಖ್ಯವಾದದ್ದಾಗಿದೆ.

ಒಂದು ನಿರ್ಧಿಷ್ಟವಾದ ವರ್ಗದ ಬ್ಯಾಂಕಿಂಗ್ ಪದ್ಧತಿಯಿಂದ ಬಹುಜನರ ಬ್ಯಾಂಕಿಂಗ್ ಪದ್ಧತಿಗೆ ಬದಲಾಯಿಸುವ ನಿರ್ಧಾರ ತೆಗೆದುಕೊಳ್ಳಲಾಯಿತು. ಬದಲಾದ ಪದ್ಧತಿಯಿಂದ ಗ್ರಾಮೀಣ ಭಾಗದ ದುರ್ಬಲ ವರ್ಗದ ಜನರಿಗೆ ಸಾಲದ ಸೌಲಭ್ಯವನ್ನು ವಿಸ್ತರಿಸುವ ಮಹತ್ತರ ಕಾರ್ಯದಲ್ಲಿ ಬ್ಯಾಂಕುಗಳು ತೊಡಗಿದವು. ಸಾರ್ವಜನಿಕ ಬ್ಯಾಂಕುಗಳು ಲಾಭದ ಧ್ಯೇಯದಿಂದ ಪ್ರಗತಿಯೊಂದಿಗೆ 'ಲಾಭ' ಸಾಧಿಸುವ ಗುರಿಯನ್ನು ಇಟ್ಟುಕೊಂಡವು. ಭದ್ರತೆ ಆಧಾರಿತ ಸಾಲದಿಂದ ಉತ್ಪಾದನೆ ಆಧಾರಿತ ಸಾಲ ನೀಡುವ ಮನೋವೃತ್ತಿಗೆ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಬದಲಾವಣೆ ತರಲಾಯಿತು.

ಗ್ರಾಮೀಣ ಮತ್ತು ಪಟ್ಟಣ ಪ್ರದೇಶಗಳಲ್ಲಿ ತಮ್ಮ ಶಾಖೆಗಳನ್ನು ಮತ್ತು ಪತ್ತನ್ನು ಒದಗಿಸಿ ತ್ವರಿತಗತಿಯ ಆರ್ಥಿಕ ಬೆಳವಣಿಗೆ ಸಾಧಿಸುವಲ್ಲಿ ಬ್ಯಾಂಕುಗಳ ಕೊಡುಗೆ ನಮ್ಮ ದೇಶದಲ್ಲಿ ಗಣನೀಯವಾಗಿದೆ. ಬ್ಯಾಂಕುಗಳು ಸಾಲವನ್ನು ಅಭಿವೃದ್ಧಿ ಸಂಕೇತವೆಂದು ಉಪಯೋಗಿಸಿ ಹಲವಾರು ಅಭಿವೃದ್ಧಿ ಕಾರ್ಯಗಳಿಗೆ ಸ್ಪಂದಿಸುವುದೊಂದೇ ಅಲ್ಲದೆ ಪತ್ತಿನೇತರ ಅಂಶಗಳ ಹಿಂದಿನ ಮತ್ತು ಮುಂದಿನ ಕೆಲಸಗಳಿಗೆ ಜೋಡಣೆ ಹೆಣೆಯುತ್ತವೆ. ಸಾಲ ಮತ್ತು ಸಾಲೇತರ ಸೇವಾ ಸಂಸ್ಥೆಗಳು ಒಟ್ಟಾಗಿ ಮುನ್ನಡೆದು ಕೃಷಿ ಮತ್ತು ಕೃಷಿಯೇತರ ವಲಯಗಳಿಗೆ ಸಾಲ ಸೇವೆಗಳನ್ನು ವ್ಯವಸ್ಥಿತವಾಗಿ ಒದಗಿಸಿ ಅಭಿವೃದ್ಧಿ ಗುರಿಯನ್ನು ಸಾಧಿಸುತ್ತವೆ.

ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಬ್ಯಾಂಕುಗಳ ಪಾತ್ರ ಎಂದರೆ ಮುಖ್ಯವಾಗಿ ಠೇವಣಿ ಉತ್ತೇಜನ ಮತ್ತು ಠೇವಣಿಗಳ ಸಂಗ್ರಹಣೆಯಾಗಿರುತ್ತದೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಯೋಜನಾಬದ್ಧ ಹಣ ಹೂಡಿಕೆ ಮತ್ತು ನಿಜವಾದ ಉಳಿತಾಯದ ನಡುವೆ ಬಹಳ ವ್ಯತ್ಯಾಸವಿರುತ್ತದೆ. ಬ್ಯಾಂಕುಗಳು ಈ ವ್ಯತ್ಯಾಸವನ್ನು ಗ್ರಾಮೀಣ ಮತ್ತು ಪಟ್ಟಣ ಪ್ರದೇಶಗಳಲ್ಲಿ ಠೇವಣಿಗಳನ್ನು ಸಂಗ್ರಹಿಸಿ ತುಂಬಿಕೊಡುತ್ತವೆ. ಗ್ರಾಮೀಣ ಬಡತನ, ಅನಕ್ಷರತೆ ಹಸಿವು, ವಿಪತ್ತು ಮತ್ತು ಕಂದಾಚಾರ ಲಕ್ಷಣಗಳ ಜೊತೆಗೆ ಜಡತ್ವದಿಂದ ಕೂಡಿವೆ. ಇಂತಹ ಸಂದರ್ಭಗಳಲ್ಲಿ

ಠೇವಣಿ ಸಂಗ್ರಹಣೆ ಒಂದು ಮುಖ್ಯ ಸಮಸ್ಯೆಯಾಗಿದೆ. ಕೆಲವೇ ಜನರಲ್ಲಿ ನಗದು ಹಣ ವಿಫುಲವಾಗಿರುತ್ತದೆ. ಇಂತಹ ಜನರಿಗೆ ಬ್ಯಾಂಕಿನೊಂದಿಗೆ ವ್ಯವಹರಿಸುವುದು ಸುರಕ್ಷಿತ ಎಂಬುದನ್ನು ಮನವರಿಕೆ ಮಾಡಿಕೊಡಬೇಕು. ಹಣ ಬೇಕಾದಾಗ ಮರುಪಾವತಿ ಸೌಲಭ್ಯ ಇದೆ ಎನ್ನುವುದನ್ನು ಬ್ಯಾಂಕುಗಳು ಎಲ್ಲಿಯ ತನಕ ಮನವರಿಕೆ ಮಾಡಿಕೊಡುವುದಿಲ್ಲವೋ ಅಲ್ಲಿಯತನಕ ಈ ಜನರು ಸುಲಭವಾಗಿ ತಮ್ಮ ವ್ಯವಹಾರಗಳನನು ನಡೆಸಲು ಸಾಧ್ಯವಾಗುವುದಿಲ್ಲ.

ಗ್ರಾಮೀಣ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಬ್ಯಾಂಕುದಾರರು ಜನರಿಗೆ ಬ್ಯಾಂಕುಗಳ ಬಳಕೆಯ ಬಗ್ಗೆ ವ್ಯಾಪಕ ಮನವರಿಕೆ ಮಾಡಿಕೊಟ್ಟು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಹೊಸತನವನ್ನು ಮಾಡಿ ತೋರಿಸಬೇಕಾಗಿದೆ. ಗ್ರಾಮೀಣ ಭಾಗದ ದುರ್ಬಲ ವರ್ಗದ ಜನರಿಗೆ ಮೊದಲು ಉಳಿತಾಯ ಮಾಡಿ ತಮ್ಮ ಕೃಷಿ ವೃತ್ತಿ ಅಥವಾ ಅಂತಹುದೇ ಸೇವೆಗಳಲ್ಲಿ ಹಣ ತೊಡಗಿಸುವುದಾಗುವುದಿಲ್ಲ. ಬ್ಯಾಂಕುಗಳು ಮೊದಲು ಗ್ರಾಮೀಣ ಕೃಷಿ ಮತ್ತು ಕೃಷಿಯೇತರ ಸೇವೆಗಳಲ್ಲಿ ಹಣ ಹೂಡಲು ಅಗತ್ಯವಿರುವ ಸಾಲದ ಸಹಾಯ ಮಾಡಿ ಉತ್ಪಾದನೆ ಮತ್ತು ಆದಾಯ ಹೆಚ್ಚಾಗುವಂತೆ ಮಾಡಬೇಕು. ತರುವಾಯ ಬ್ಯಾಂಕುಗಳು ಹೆಚ್ಚಾದ ಆದಾಯದಿಂದ ತಮ್ಮ ಮರುಪಾವತಿಯನ್ನು ಹೆಚ್ಚಿಸಿಕೊಳ್ಳಬೇಕು. ಬ್ಯಾಂಕುಗಳು ಉತ್ಪಾದನಾ ಉದ್ದೇಶಗಳಿಗೆ ಸಾಲಕೊಡುತ್ತವೆ. ಇಂತಹ ಸಾಲದಿಂದ ಜನರ ಆದಾಯ ಜೀವನ ಮಟ್ಟ ಹೆಚ್ಚಾಗುತ್ತದೆ. ಇದು ಕುಟುಂಬದ ಉಳಿತಾಯಕ್ಕೆ ಸ್ವಲ್ಪ ಕೊಡುಗೆಯನ್ನು ನೀಡುತ್ತದೆ. ಇಂತಹ ರೀತಿಯ ಉಳಿತಾಯ ಸಂಗ್ರಹಣೆ ಉತ್ತಮ ಪರಿಣಾಮ ಬೀರಬಲ್ಲದು. ಏಕೆಂದರೆ ಇಂತಹ ರೀತಿಯ ಉಳಿತಾಯ ಬ್ಯಾಂಕುಗಳ ಠೇವಣಿಯ ಸಾಮರ್ಥ್ಯವನ್ನು ಹೆಚ್ಚಿಸುತ್ತದೆ.

ಅಭಿವೃದ್ಧಿಯು ಕೇವಲ ಬ್ಯಾಂಕುಗಳ ಮೂಲಕ ಹಣ ತೊಡಗಿಸುವುದೆಂದಲ್ಲ ಗ್ರಾಮೀಣ ಭಾಗದ ಜನರ ದಿನನಿತ್ಯದ ಜೀವನ ಮತ್ತು ಒಟ್ಟಾರೆ ಉಪಭೋಗದ ಮಟ್ಟದಲ್ಲಿ ಬದಲಾವಣೆ ತಂದು ಜನರ ಜೀವನದಲ್ಲಿ ಗುಣಾತ್ಮಕ ಸುಧಾರಣೆ ತರುವುದಾಗಿದೆ. ಪ್ರತಿಯೊಂದು ಹಳ್ಳಿಗಳು ಪ್ರಗತಿಯ ಕೇಂದ್ರವಾಗಿವೆ. ಬ್ಯಾಂಕುಗಳು ಈ ಕೇಂದ್ರದಲ್ಲಿ ಎಲ್ಲಾ ತರಹದ ಸ್ಥಳೀಯ ಸಂಪನ್ಮೂಲವನ್ನು ಉಪಯೋಗ ಮಾಡಿ ಕೊಳ್ಳಲು ಅವಶ್ಯವಿರುವ ಸೇವೆಯನ್ನು ಒದಗಿಸಿ ಹಳ್ಳಿಯ ಒಟ್ಟಾರೆ ಅಭಿವೃದ್ಧಿಯನ್ನು ಸಾಧಿಸಬೇಕು.

ಆರ್ಥಿಕ ಅಭಿವೃದ್ಧಿಯು ಪ್ರಪಂಚದ ಎಲ್ಲಾ ರಾಷ್ಟ್ರಗಳಿಗೂ ಅವಶ್ಯವಿದೆ. ಆದರೆ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಇದು ಅತಿ ಮುಖ್ಯವಾಗಿದೆ. ಪ್ರತಿಯೊಂದು ರಾಷ್ಟ್ರದ ಸಮಸ್ಯೆಗಳಿಗೆ ತನ್ನದೆ ಆದ ಉತ್ತರಗಳಿರುತ್ತವೆ. ಇತರೆ ಅಭಿವೃದ್ಧಿ ಶೀಲ ರಾಷ್ಟ್ರಗಳ ಅನುಭವವು ಈ ರಾಷ್ಟ್ರಗಳ ಒಟ್ಟಾರೆ ಅಭಿವೃದ್ಧಿಗೆ ಉಪಯುಕ್ತವಾದ ಮಾರ್ಗದರ್ಶನ ನೀಡಬಲ್ಲದು.

ಗ್ರಾಮೀಣ ಅಭಿವೃದ್ಧಿಯಲ್ಲಿ ಬ್ಯಾಂಕುಗಳ ಪಾತ್ರ ಅಭಿವೃದ್ಧಿ ಸತತವಾಗಿ ನಡೆಯುವ ಪ್ರಕ್ರಿಯೆ. ಇದರಲ್ಲಿ ಆರ್ಥಿಕ ಚಟುವಟಿಕೆಗಳು ಸಮಗ್ರ ಬದಲಾವಣೆಯಾಗುತ್ತವೆ. ಬ್ಯಾಂಕುಗಳು ಹಣಕಾಸಿನ ಸಂಸ್ಥೆಗಳಾಗಿದ್ದು ಹಣಕಾಸಿನ ಮೂಲಭೂತ ಸೌಲಭ್ಯವನ್ನು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಅತ್ಯಾವಶ್ಯಕವಾಗಿರುತ್ತವೆ. ಬ್ಯಾಂಕುಗಳು ಕೇವಲ ಹಣ ವಿತರಣಾ ಪ್ರತಿನಿಧಿಗಳಾಗಿರದೆ ಇಡೀ ಅರ್ಥ ವ್ಯವಸ್ಥೆಯಲ್ಲಿ ಸಾಕಷ್ಟು ಬದಲಾವಣೆ ತರುವ ಸಂಸ್ಥೆಗಳಾಗಿರುತ್ತವೆ. ನಿಜವಾಗಿಯೂ ಬ್ಯಾಂಕುಗಳು ಅಭಿವೃದ್ಧಿ ಪ್ರಕ್ರಿಯೆಯ ನೇತಾರರೆಂದರೆ ತಪ್ಪಾಗಲಾರದು. ಬ್ಯಾಂಕ್ ಸೇವೆಯಲ್ಲಿನ ಅಂತರಿಕ ಪ್ರಾಮುಖ್ಯತೆಯನ್ನು ಅವುಗಳ ಸೇವೆಗಳಲ್ಲಿಯೇ ಕಾಣಬಹುದಾಗಿದೆ.

ಬಹುತೇಕ ರೈತರು ಅಲ್ಪಾವಧಿ ಸಾಲವನ್ನು ತಮ್ಮ ಕೃಷಿ ಚಟುವಟಿಕೆಗಳಿಗೆ ಬೇಡುತ್ತಾರೆ. ಈ ರೀತಿ ಅಲ್ಪಾವದಿ ಸಾಲಕ್ಕೆ ಬಹಳ ಬೇಡಿಕೆಯಿರುವುದರಿಂದ ಸಾಲದ ಹಂಚಿಕೆಯು ಈ ಕಡೆ ವಕ್ರವಾಗುವುದು ಸಾಮಾನ್ಯವಾಗಿರುತ್ತದೆ. ಇಂತಹ ಸಾಲದ ಪರಿಸ್ಥಿತಿಯಿರುವುದರಿಂದ ದುರ್ಬಲವರ್ಗಕ್ಕೆ ಸೇರಿದ ಜನರಲ್ಲಿ ಭೂಮಿ ಇದ್ದವರು ಅಲ್ಪ, ಬಹುತೇಕ ಜನರು ಕೃಷಿ ಕಾರ್ಮಿಕರು, ಇವರಿಗೆ ಭೂಮಿ ಇಲ್ಲದ್ದರಿಂದ ಸಾಂಸ್ಥಿಕ ಪತ್ತನ್ನು ಪಡೆಯಲು ಅನರ್ಹರೆಂದು ಬ್ಯಾಂಕುಗಳು ನಿರ್ಧರಿಸಿರುವುದರಿಂದ ಇವರಿಗೆ ಸಾಲದ ಸೌಲಭ್ಯ ದೊರೆಯುವುದಿಲ್ಲ. ಸಾಮರ್ಥ್ಯವುಳ್ಳ ಮಾನವ ಹಾಗು ನೈಸರ್ಗಿಕ ಸಂಪತ್ತು ಈ ರಾಷ್ಟ್ರಗಳ ಗ್ರಾಮೀಣ ಪ್ರದೇಶಗಳಲ್ಲಿ ಸದುಪಯೋಗವಾಗಿರುವುದಿಲ್ಲ. ಆದ್ದರಿಂದ ಸಾಲ ಒಂದು ಮುಖ್ಯವಾದ ಸರಂಜಾಮಾಗಿದ್ದು, ದುರ್ಬಲ ವರ್ಗದ ಜನರ ಕೃಷಿ ಉತ್ಪಾದಕತೆ ಮತ್ತು ಕುಟುಂಬದ ಆದಾಯವನ್ನು ಹೆಚ್ಚಿಸುವಲ್ಲಿ ನಿರ್ಣಾಯಕ ಪಾತ್ರ ವಹಿಸುತ್ತದೆ.

ವಿಶೇಷ ಘಟಕ ಯೋಜನೆ ಫಲಪ್ರದವಾಗಬೇಕಾದರೆ ಬ್ಯಾಂಕುಗಳ ಪಾತ್ರ ಮಹತ್ತರವಾದುದು. ಏಕೆಂದರೆ ಗ್ರಾಮೀಣ ಜನರ ಅದರಲ್ಲೂ ದಲಿತ ವರ್ಗಗಳ ಸರ್ವಾಂಗೀಣ ಅಭಿವೃದ್ಧಿಗೆ ಹಣಕಾಸಿನ ಅಗತ್ಯಗಳು ಸಾಕಷ್ಟಿರುವುದು ಸರ್ವವೇದ್ಯ ಸಂಗತಿ. ದಲಿತರ ಅಭಿವೃದ್ಧಿ ಭೌತಿಕ ಮತ್ತು ಹಣಕಾಸಿನ ಸುಧಾರಣೆಗಿಂತಲೂ ಹೆಚ್ಚಿನ ಅಂಶಗಳನ್ನು ಒಳಗೊಂಡಿದೆ. ಆರ್ಥಿಕಾಭಿವೃದ್ಧಿ ಈ ದಿಸೆಯಲ್ಲಿ ಬಹುಮುಖ ಕ್ರಿಯೆಯಾಗಿದ್ದು ಅದರಲ್ಲಿ ಅನೇಕ ಕಾರ್ಯಕ್ರಮಗಳ ಪುನರ್‌ಘಟನೆ ಮತ್ತು ಪುನಶ್ಚೇತನವಾಗಿದ್ದು ಇಡೀ ಆರ್ಥಿಕ ಸಾಮಾಜಿಕ ಅಂಶಗಳನ್ನು ಅದು ಒಳಗೊಂಡಿರುತ್ತದೆ. ಅದು ಕೇವಲ ದಲಿತರ ಆದಾಯವನ್ನಷ್ಟೇ ಹೆಚ್ಚಿಸುವುದಲ್ಲದೆ ಸಾಂಸ್ಥಿಕ ಸಾಮಾಜಿಕ ಮತ್ತು ಆಡಳಿತಾತ್ಮಕ ರಚನೆಯ ತ್ವರಿತಗತಿಯ ಬದಲಾವಣೆಯನ್ನು ತರಬೇಕು. ಜೊತೆಗೆ ಜನರ ನಂಬಿಕೆ ಮತ್ತು ಸಂಪ್ರದಾಯಗಳಲ್ಲಿ ಬದಲಾವಣೆಯನ್ನು ತರಬೇಕು. ಆರ್ಥಿಕ ಅಭಿವೃದ್ಧಿಯ ಗುರಿ ಸಾಮಾನ್ಯ ಜನರ ಅವಶ್ಯಕತೆಗಳನ್ನು

ಈಡೇರಿಸುವಂತಿರಬೇಕು. ಅವರ ಜೀವನ ಮಟ್ಟವನ್ನು ಹೆಚ್ಚಿಸಬೇಕು. ಅವರು ಇನ್ನೊಬ್ಬರ ಮೇಲಿನ ಅವಲಂಬನೆಯನ್ನು ಕಡಿಮೆ ಮಾಡಬೇಕು. ಆದಕಾರಣ ಆರ್ಥಿಕ ಅಭಿವೃದ್ಧಿಯು ವಿಶಾಲ ಅರ್ಥವನ್ನು ಹೊಂದಿದ್ದು ಅದು ಸಮಾಜದ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಯನ್ನು ತರುವಲ್ಲಿ ಯಶಸ್ವಿಯಾಗಿರಬೇಕು. ಅದಕ್ಕಾಗಿಯೇ ಜಿ. ಮಿರ್ಡಾಲ್‌ರವರು ಇಡೀ ಸಾಮಾಜಿಕ ವ್ಯವಸ್ಥೆ ಮೇಲಕ್ಕೆ ಚಲಿಸಬೇಕು ಎಂದು ಹೇಳಿರುವುದರಲ್ಲಿ ಅರ್ಥವಿದೆ.

ಈ ನಿಟ್ಟಿನಲ್ಲಿ ಹಗರಿಬೊಮ್ಮನಹಳ್ಳಿ ತಾಲೂಕಿನ ಚಿತ್ರಣವನ್ನೆ ನೋಡುವುದಾದರೆ ಸೇ ೮೦ ಕ್ಕೂ ಹೆಚ್ಚಿನ ಜನರು ಕೃಷಿ ಕೂಲಿ ಕಾರ್ಮಿಕರಾಗಿದ್ದು ತಮ್ಮ ಜೀವನ ನಿರ್ವಹಣೆಗಾಗಿ ಇತರೆ ಜನರ ಕೃಷಿ ಭೂಮಿಯನ್ನೇ ಅವಲಂಭಿಸಿರುವುದು ಅಥವಾ ಕೂಲಿಯನ್ನರಸಿ ಬೇರೆ ಬೇರೆ ಭಾಗಗಳಿಗೆ ಜನ ಗುಳೆ ಹೋಗುತ್ತಿರುವುದು ಸರ್ವೆ ಸಾಮಾನ್ಯವಾಗಿದೆ.

ಅಭಿವೃದ್ಧಿ ಗ್ರಾಮೀಣವೇ ಆಗಿರಲಿ ಅಥವಾ ಪಟ್ಟಣವೇ ಅಗಿರಲಿ ಅದು ಮಾನವತಾ ಅಂಶವಾಗಿದೆ. ಅತ್ಯದಿಕ ದಲಿತರು ಕುಗ್ರಾಮಗಳಲ್ಲಿ ಮುಲಭೂತ ಸೌಕರ್ಯ ವಂಚಿತರಾಗಿ ಬದುಕು ಸವೆಸುತ್ತಿರುವುದು, ಇವರು ಹಸಿವೆ ಬಳಲಿಕೆ ಮತ್ತು ಬಡತನದ ಮಧ್ಯೆ ವಾಸಿಸುತ್ತಿದ್ದಾರೆ. ಹಾಗಾಗಿ ಸಮಾಜದ ಮುಖ್ಯವಾಹಿನೀಯಿಂದ ಇವರು ದೂರ ಉಳಿದಿರುತ್ತಾರೆ. ಇದರಿಂದಾಗಿ ಇವರನ್ನು ಮುಖ್ಯವಾಹಿನಿಗೆ ತರಲು ವಿಶೇಷ ಘಟಕ ಯೋಜನೆಯನ್ನು ತರಲಾಗಿದೆ. ಸಮುದಾಯ ಅಭಿವೃದ್ಧಿ ಕಾರ್ಯಕ್ರಮು ಒಂದು ವಿಶಾಲವಾದ ಕಾರ್ಯಕ್ರಮುವಾಗಿದ್ದು ಇದು ಗ್ರಾಮೀಣಾಭಿವೃದ್ಧಿಯ ಕ್ರಿಯೆಯನ್ನೇ ಪ್ರಾರಂಭಿಸಿತು.

ದಲಿತರ ಅಭಿವೃದ್ಧಿಗಾಗಿ ಮಾನವ ಸಂಪನ್ಮೂಲವನ್ನು ಅಧಿಕ ಪ್ರಮಾಣದಲ್ಲಿ ಬಳಸಿ ಗ್ರಾಮೀಣ ಜನರ ಜೀವನ ಪರಿಸ್ಥಿತಿಯನ್ನು ಬದಲಾವಣೆ ಮಾಡುವ ಉದ್ದೇಶ ಸರಕಾರದ್ದಾಗಿರುತ್ತದೆ. ಈ ಕಾರ್ಯಕ್ರಮದಡಿಯಲ್ಲಿ ಶಿಕ್ಷಣ ಪ್ರಸಾರ , ಉತ್ತಮ ನೀರಿನ ಪೂರೈಕೆ, ಆರೋಗ್ಯ ಸೌಲಭ್ಯಗಳ ವಿಸ್ತರಣೆ, ಗ್ರಾಮೀಣ ಪ್ರದೇಶಗಳ ಸಹಕಾರ ಸಂಸ್ಥೆಗಳ ಬೆಳವಣಿಗೆ ಇತ್ಯಾದಿಗಳಾಗಿದ್ದವು. ಇವೆಲ್ಲವುದರ ಜೊತೆಗೆ ಕೃಷಿ ಕಾರ್ಮಿಕರಿಗೆ ಭೂಮಿ ಮತ್ತಿತರ ಉತ್ಪಾದನಾ ಸಾಧಿಸಿ ಮತ್ತು ಸೇವೆಗಳನ್ನು ಒದಗಿಸಿ ಅವರ ಜೀವನ ಮಟ್ಟವನ್ನು ಹೆಚ್ಚಿಸುವ ವಿಶೇಷವಾದ ದ್ಯೇಯವನ್ನು ಇಟ್ಟುಕೊಳ್ಳಲಾಗಿತ್ತು. ಆದರೆ ಈ ಸೌಲಭ್ಯಗಳು ಕೆಳಮಟ್ಟದಲ್ಲಿ ಜೀವಿಸುವಂತಹ ಜನರಿಗೆ ಪ್ರಯೋಜನಕಾರಿಯಾಗಲಿಲ್ಲ. ಆದಕಾರಣ ಸಮುದಾಯ ಅಭಿವೃದ್ಧಿ ಕಾರ್ಯಕ್ರಮ ತನ್ನ ನಿಗದಿತ ಗುರಿ ಸಾಧಿಸುವಲ್ಲಿ ವಿಫಲವಾಯಿತು.

ಸಮುದಾಯ ಅಭಿವೃದ್ಧಿ ಕಾರ್ಯಕ್ರಮ ಯಶಸ್ವಿಯಾಗದೇ ಇದ್ದ ಪ್ರಯುಕ್ತ

ಅಭಿವೃದ್ಧಿ ತಂತ್ರವನ್ನು ಆರ್ಥಿಕ ಅಂಶಗಳಿಗೆ ಬದಲಾಯಿಸಲಾಯಿತು. ಈ ಬದಲಾದ ತಂತ್ರದಲ್ಲಿ ಕೃಷಿ ಉತ್ಪಾದನೆ ಮತ್ತು ಉತ್ಪಾದಕತೆಯನ್ನು ಹೆಚ್ಚಿಸುವಲ್ಲಿ ಕಂಡುಬರುವ ತೊಂದರೆಗಳನ್ನು ನಿವಾರಿಸಿ ಮಾರುಕಟ್ಟೆಯ ಸೇವೆಯನ್ನು ವಿಸ್ತರಿಸುವ ಉದ್ದೇಶವನ್ನಿಟ್ಟು ಕೊಳ್ಳಲಾಯಿತು. ಈ ಗುರಿ ಸಾಧನೆಗೆ ಆಧುನಿಕ ತಂತ್ರಜ್ಞಾನಗಳನ್ನು ಕೃಷಿ ಕ್ಷೇತ್ರದಲ್ಲಿ ಅಳವಡಿಸಲಾಯಿತು. ಆದರೆ ಅನೇಕ ಕಾರಣಗಳಿಂದಾಗಿ ಈ ತಾಂತ್ರಿಕ ಬೆಳವಣಿಗೆಯಿಂದ ಸಾಮಾನ್ಯ ದುರ್ಬಲ ವರ್ಗದವರಿಗೆ ಯಾವ ಪ್ರಯೋಜನವೂ ಕಂಡು ಬರಲಿಲ್ಲ.

ಅಭಿವೃದ್ಧಿ ಕ್ಷೇತ್ರದಲ್ಲಿ ಅಳವಡಿಸಿದೆ ತಂತ್ರಗಳು ಗ್ರಾಮೀಣ ಭಾಗದಲ್ಲಿ ನಿರುದ್ಯೋಗ ಮತ್ತು ಅರೆ ನಿರುದ್ಯೋಗಗಳನ್ನು ಸೃಷ್ಟಿಸಿರುವುದಲ್ಲದೆ ಶ್ರೀಮಂತ ಮತ್ತು ಬಡವರ ನಡುವಿನ ಆದಾಯ ಅಸಮತೋಲನ ಸತತವಾಗಿ ಬೆಳೆಯುತ್ತಾ ಬಂದಿದೆ. ಸಣ್ಣ ರೈತರು , ಗ್ರಾಮೀಣ, ಭೂರಹಿತ ಕಾರ್ಮಿಕರು, ಕುಶಲಕರ್ಮಿಗಳು, ಸಣ್ಣ ವ್ಯಾಪಾರಿಗಳ ಆದಾಯ ಪರಿಣಾಮಕಾರಿಯಾಗಿ ಹೆಚ್ಚಾಗಲಿಲ್ಲ. ಇದರಡಿಯಲ್ಲಿ ಕೇವಲ ಆರ್ಥಿಕ ಅಂಶಗಳ ಆಧಾರಿತ ಕಾರ್ಯಕ್ರಮಗಳ ಬದಲಿಗೆ ಸಾಮಾಜಿಕ ಅಂಶಗಳನ್ನು ಇದರಡಿಯಲ್ಲಿ ಸೇರಿಸುವ ಅಂಶ ಸರ್ಕಾರದ ಗಮನಕ್ಕೆ ಬಂದವು.

ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮವು ದಲಿತರ ಜೀವನ ಕ್ರಮವನ್ನು ಸಂಪೂರ್ಣವಾಗಿ ಬದಲಿಸುವ ಗ್ರಾಮೀಣಾಭಿವೃದ್ಧಿ ತಂತ್ರವಾಗಿತ್ತು. ಈ ಕಾರ್ಯಕ್ರಮಗಳಡಿಯಲ್ಲಿ ದಲಿತ ದುರ್ಬಲವರ್ಗಗಳ ಜನರಿಗೆ ಅಭಿವೃದ್ಧಿ ಆಸ್ತಿಗಳನ್ನೊದಗಿಸಿ ಗ್ರಾಮೀಣ ಭಾಗದ ಜನರ ಅಭಿವೃದ್ಧಿಯನ್ನು ಸಾಧಿಸುವುದಾಗಿತ್ತು. ಈ ಕಾರ್ಯಕ್ರಮದಡಿ ಬಡತನ ರೇಖೆಯಿಂದ ಕೆಳಗಿರುವ ಜನರಿಗೆ ಹಣಕಾಸಿನ ನೆರವು ಅಂದರೆ ಸಾಲ ಮತ್ತು ಸಹಾಯಧನ ಒದಗಿಸಿ ದುರ್ಬಲ ವರ್ಗದ ಜನರ ಆದಾಯ ಹೆಚ್ಚಿಸಿ ಅವರನ್ನು ಬಡತನ ರೇಖೆಯಿಂದ ಮೇಲಕ್ಕೆತ್ತುವ ಪ್ರಯತ್ನ ಮಾಡಲಾಯಿತು. ಆರ್ಥಿಕ ಏಣಿಯ ಮೇಲ್‌ಸ್ತರದಲ್ಲಿರುವಂತಹ ಶ್ರೀಮಂತರಿಗೆ ಹೋಲಿಸಿದಲ್ಲಿ ಬಡವರ್ಗದ ಜನರು ಹಿನ್ನೆಡೆದಿದ್ದರು. ಈ ಹಿನ್ನೆಲೆಯಲ್ಲಿ ಗ್ರಾಮೀಣಾಭಿವೃದ್ಧಿ ವಿಶಾಲವಾದ ಚಟುವಟಿಕೆಗಳನ್ನು ಹೊಂದಿದ ಕಾರ್ಯಕ್ರಮ ಅಗಿದ್ದರೂ, ಅವುಗಳಡಿಯಲ್ಲಿ ಕೃಷಿ ಪ್ರಗತಿ, ಆರ್ಥಿಕ, ಸಾಮಾಜಿಕ ಮೂಲ ಸೌಲಭ್ಯಗಳ ಅಭಿವೃದ್ಧಿ ಉತ್ತಮ ಕೂಲಿಯ ಜೊತೆಗೆ ವಸತಿ ರಹಿತರಿಗೆ ವಸತಿ, ಗ್ರಾಮಗಳ ಯೋಜನೆ, ಸಮುದಾಯ ಆರೋಗ್ಯ, ಶಿಕ್ಷಣ ಮತ್ತು ಸಂಪರ್ಕ ಇತ್ಯಾದಿಗಳನ್ನು ಒದಗಿಸಿ ಗ್ರಾಮೀಣ ಭಾಗದ ಆರ್ಥಿಕ ಸಾಮಾಜಿಕ ಪ್ರಗತಿ, ದಲಿತರ ಅಭಿವೃದ್ಧಿ ಸಾಧ್ಯವಾಗದೇ ಇದ್ದ ಅಂಶಗಳನ್ನು ಮನಗಂಡು ದಲಿತರ ಸರ್ವಾಂಗೀಣ ಅಭಿವೃದ್ಧಿಗೆ ವಿಶೇಷ ಘಟಕ ಯೋಜನೆ ರೂಪಿಸಲಾಯಿತು ಎಂಬದನ್ನು ಹಿಂದಿನ ಅಧ್ಯಾಯದಲ್ಲಿ

ತಿಳಿದುಕೊಳ್ಳಲಾಗಿದೆ. ಈ ದೃಷ್ಟಿಯಿಂದ ಈ ಯೋಜನೆಯು ದಲಿತರ ಸರ್ವತೋಮುಖಿ ಅಭಿವೃದ್ಧಿಯ ಒಂದು ಭಾಗವೆಂದೇ ಹೇಳಬಹುದು.

## ಈ. ವಿಶೇಷ ಘಟಕ ಯೋಜನೆಯ ಪ್ರಗತಿ ಮೌಲ್ಯಮಾಪನ

ಕರ್ನಾಟಕ ಅಭಿವೃದ್ಧಿಯ ಎಲ್ಲಾ ಪ್ರಯತ್ನಗಳಲ್ಲಿ ಪರಿಶಿಷ್ಟ ಜಾತಿಯವರ ಶೈಕ್ಷಣಿಕ ಆರ್ಥಿಕ ಮತ್ತು ಸಾಮಾಜಿಕ ಆಸಕ್ತಿಗಳಿಗೆ ವಿಶೇಷ ಗಮನವನ್ನು ನೀಡಿದೆ ಇವನ್ನು ೨೦ ಅಂಶಗಳ ಆರ್ಥಿಕ ಕಾರ್ಯಕ್ರಮ. ಉದ್ಯೋಗ ದೃಢೀಕರಣ(ಭರವಸೆ)ಯೋಜನೆ ಗ್ರಾಮೀಣ ಅಭಿವೃದ್ಧಿಯ ವಿಶೇಷ ಕಾರ್ಯಕ್ರಮಗಳು ಮತ್ತು ಸಮಾಜ ಕಲ್ಯಾಣ ಇಲಾಖೆಯ ಬೃಹತ್ ಕಾರ್ಯಕ್ರಮಗಳಲ್ಲಿ ಕಾಣಬಹುದು ಇದರೊಂದಿಗೆ ಗ್ರಾಮ ಪಂಚಾಯಿತಿಗಳು ಪುರಸಭೆಗಳು ತಾಲೂಕು ಅಭಿವೃದ್ಧಿಗೆ ಮಂಡಳಿಗಳೇ ಮೊದಲಾದವುಗಳ ಅಭಿವೃದ್ದಿಯ ಚಟುವಟಿಕೆಗಳಿಗಾಗಿ ಇರುವ ಮೊಬಲಗಿನ ಶೇ ೧೮ ರಷ್ಟನು ಪರಿಶಿಷ್ಟ ಜಾತಿ ಮತ್ತು ಪಂಗಡದವರ ಹಿತಕ್ಕಾಗಿ ತೆಗೆದಿರಿಸಲಾಗಿದೆ. ಆರನೇಯ ಯೋಜನೆಯಲ್ಲಿ ಪ್ರಾರಂಭವಾದ ಈ ವಿಶೇಷ ಘಟಕ ಯೋಜನೆ ಸುಮಾರು ಶೇ೫೦ ರಷ್ಟು ಪರಿಶಿಷ್ಟ ಜಾತಿಯ ಕುಟುಂಬಗಳು ಬಡತನದ ರೇಖೆಯನ್ನು ದಾಟಲು ಶಕ್ತರನ್ನಾಗಿ ಮಾಡಿದೆ ೧೯೭೧ ರ ಜನಗಣತಿಯನ್ನು ಆಧರಿಸಿ ೧೯೮೦ ರಲ್ಲಿ ೫೩ ಲಕ್ಷ ಪರಿಶಿಷ್ಟ ಜಾತಿಯವರ ಜನಸಂಖ್ಯೆ ಇರಬಹುದೆಂದು ಅಂದಾಜು ಮಾಡಲಾಗಿದೆ. ಇದು ರಾಜ್ಯದ ಒಟ್ಟು ಜನಸಂಖ್ಯೆಯ ಶೇ ೧೪.೬ ರಷ್ಟಾಗುತ್ತದೆ. ಪ್ರತಿ ಕುಟುಂಬಕ್ಕೆ ಸರಾಸರಿ ಐದು ವರ್ಷಗಳಲ್ಲಿ ವರ್ಷಕ್ಕೆ ೧.೦೬ಲಕ್ಷ ಕುಟುಂಬಗಳಂತೆ ದಾಟಲು ಶಕ್ತರನ್ನಾಗಿ ಮಾಡಬೇಕೆಂಬುದಾಗಿದೆ. ಈಉದ್ದೇಶವನ್ನು ಸಾಧಿಸಲು ಪರಿಶಿಷ್ಟ ಜಾತಿಯವರು ಹೆಚ್ಚಾಗಿ ಪರಿಶ್ರಮ ಹೊಂದಿರುವ ಕೃಷಿ ಮತ್ತು ಅದಕ್ಕೆ ಸಂಬಂಧ ಕ್ಷೇತಗಳಲ್ಲಿ ಅವರ ಕುಟುಂಬಕ್ಕೆ ಹಿತವಾಗುವ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳ ಬೇಕೆನ್ನುವುದು ಯೋಜನೆಯ ಉದ್ದೇಶ. ಪರಿಶಿಷ್ಟಜಾತಿಯವರ ಆರ್ಥಿಕ ಚಟುವಟಿಕೆಗಳ ವರ್ಗೀಕರಣವನ್ನು ೧೯೯೧ರ ಜನಗಣತಿಯಲ್ಲಿ ಕಂಡುಬರುವಂತೆ ಈ ಕೆಳಗೆ ಕೊಡಲಾಗಿದೆ.

**ಕೋಷ್ಟಕ ೬.೧೦**

| ಚಟುವಟಿಕೆ | ಕಾರ್ಮಿಕರು(ಲಕ್ಷಗಳಲ್ಲಿ) | ಒಟ್ಟುಕಾರ್ಮಿಕರು |
|---|---|---|
| ಬೇಸಾಯಗಾರರು | ೪.೨೭ | ೨೮ |
| ಕೃಷಿಕಾರ್ಮಿಕರು | ೭.೨೧ | ೪೭ |

| | | |
|---|---|---|
| ಪಶುಸಂಪತ್ತು ಮೀನುಗಾರಿಕೆ– –ಬೇಟೆ, ನೆಡುತೋಪು &ಸಂಬಂಧಪಟ್ಟ ಚಟುವಟಿಕೆಗಳು | ೦.೭೬ | ೦೫ |
| ಗಣಿಗಾರಿಕೆ ಮತ್ತು ಕಲ್ಲು ಕಡಿಯುವುದು ಉತ್ಪಾದನೆ. | | |
| ನೌಕರಿಗೆ ಸಂಬಂಧಿಸಿದ ಸೇವೆ ಮತ್ತು ದುರಸ್ತಿ | ೦.೧೬ | ೦೧ |
| ಗೃಹ ಕೈಗಾರಿಕೆಗಳು | ೦.೪೩ | ೦೩ |
| ಗೃಹ ಕೈಗಾರಿಗಳನ್ನು ಬಿಟ್ಟುಉಳಿದವು | ೦.೫೮ | ೦೪ |
| ಕಟ್ಟಣೆ ಕೆಲಸ | ೦.೩೯ | ೦೩ |
| ಇತರೆ | ೧.೫ | ೧೨ |
| ಒಟ್ಟು | ೧೫.೦೩ | ೧೦೦ |

**ಕ್ಷೇತ್ರ ಕಾರ್ಯ:** ದಲಿತರು ಮತ್ತು ದಲಿತರ ಸ್ಥಿತ್ಯಂತರಗಳು ಸಂಶೋಧನ ದೃಷ್ಟಿಯಿಂದ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿರುವ ದಲಿತರು ಮತ್ತು ಅವರು ವಿವಿಧ ಇಲಾಖೆಗಳಿಂದ ಪಡೆದ ಸವಲತ್ತುಗಳು ಮತ್ತು ದಲಿತರ ಸ್ಥಿತಿಗತಿಗಳ ಬಗ್ಗೆ ತಾಲ್ಲೂಕಿನ ಪ್ರತಿಹಳ್ಳಿಗೂ ಭೇಟಿಕೊಟ್ಟು ಪರಿಶೀಲಿಸಿ ಅಂಕಿ ಅಂಶಗಳ ಸಂಗ್ರಹದ ಜೊತೆಗೆ ದಲಿತರ ಸ್ಥಿತಿಗತಿಗಳನ್ನು ಅವಲೋಕಿಸಿದ್ದೇನೆ ಅವಲೋಕಿಸಿದ ಪ್ರತಿ ಹಳ್ಳಿಗಳ ಹೆಸರು ಈಕೆಳಕಂಡಂತೆ ದಾಖಲಿಸಲಾಗಿದೆ.

**ಕೋಷ್ಟಕ ೬.೧೧**

| ಕ್ರಮ ಸಂ. | ಗ್ರಾಮದ ಹೆಸರು | ಫಲಾನುಭವಿಗಳ ಸಂಖ್ಯೆ |
|---|---|---|
| ೧. | ಕೊಗಳಿ ತಾಂಡ | ೨೫ |
| ೨. | ಹ.ಬೊ.ಹಳ್ಳಿ | ೧೮ |
| ೩. | ಅಲಬೂರು | ೧೧ |
| ೪. | ಅಂಬಳಿ | ೦೧ |

| | | |
|---|---|---|
| ೫. | ಅಡವಿ ಆನಂದದೇವನಹಳ್ಳಿ | ೦೪ |
| ೬. | ವಲ್ಲಭಾಪುರ | ೦೩ |
| ೭. | ಚಿಂತ್ರಪಳ್ಳಿ | ೦೧ |
| ೮. | ಎಲುವತ್ತಿ | ೦೧ |
| ೯. | ಬನ್ನಿಕಲ್ಲು | ೦೭ |
| ೧೦. | ಗದ್ದಿಕಲ್ಲು | ೦೪ |
| ೧೧. | ಹನಸಿ | ೦೨ (೧) |
| ೧೨. | ಕಡ್ಲೆಬಾಳು | ೦೮ |
| ೧೩. | ನಾಗಲಾಪುರ ತಾಂಡ | ೦೨ |
| ೧೪. | ವ್ಯಾಸಾಪುರ ತಾಂಡ | ೧೨ |
| ೧೫. | ಬಾಚಿಗೊಂಡನ ಹಳ್ಳಿ | ೦೧ |
| ೧೬. | ಕೆಚ್ಚಿನಬಂಡಿ | ೧೩ |
| ೧೭. | ಹೊಸ್ಕೇರಿ | ೦೨ |
| ೧೮. | ಸೊನ್ನೆ | ೧೦ |
| ೧೯. | ಯಡ್ರಮ್ಮನ ಹಳ್ಳಿ | ೦೫ |
| ೨೦. | ಮಟುಗನ ಹಳ್ಳಿ | ೦೭ |
| ೨೧. | ಏಣ್ಗಿಬಸಾಪುರ | ೧೬ |
| ೨೨. | ಗಟ್ಟಿಹೊಲ ತಾಂಡ | ೧೧ |
| ೨೩. | ಉಪನಾಯಕನಹಳ್ಳಿ | ೦೬ |
| ೨೪. | ಹಂಪಾಪಟ್ಟಣ | ೦೧ |
| ೨೫. | ಶಿಬಾನಂದ ನಗರ | ೦೨ |

| | | |
|---|---|---|
| ೨೬. | ಮಗಿಮಾವಿನ ಹಳ್ಳಿ | ೦೭ |
| ೨೭. | ರಾಯರಾಳುತಾಂಡ | ೧೪ |
| ೨೮. | ತೆಲುಗೋಳಿ | ೦೨ |
| ೨೯. | ಓಬಳಾಪುರ | ೦೫ |
| ೩೦. | ಮೋರಿಗೇರಿ | ೦೬ |
| ೩೧. | ಕಲ್ಲಳ್ಳಿ | ೦೧ |
| ೩೨. | ಕಲ್ಲಳ್ಳಿ ತಾಂಡ | ೦೧ |
| ೩೩. | ಚಿಮ್ಮನಹಳ್ಳಿ | ೦೨ |
| ೩೪. | ಜಿ. ಕೋಡಿಹಳ್ಳಿ | ೦೧ |
| ೩೫. | ನಂದಿಪುರ | ೦೩ |
| ೩೬. | ಕೆಂಚಟನ ಹಳ್ಳಿ | ೦೮ |
| | | ಒಟ್ಟು ೨೧೫ |

**ವಿಶೇಷ ಘಟಕ ಯೋಜನೆಯಡಿಯಲ್ಲಿ ಆಯ್ದ ಗುಂಪು ಗ್ರಾಮಗಳ ವಿವರಗಳನ್ನು ಈ ಕೆಳಕಂಡ ನಕ್ಷೆಯಲ್ಲಿ ತೋರಿಸಲಾಗಿದೆ**



**ಕೋಷ್ಟಕ ೬.೧೨**

| ಕ್ರ.ಸಂ. ಇಲಾಖೆಗಳು | ೧೯೯೮-೧೯೯೯ | ೧೯೯೯-೨೦೦೦ | ೨೦೦೦-೨೦೦೧ | ೨೦೦೧-೨೦೦೨ | ೨೦೦೨-೨೦೦೩ |
|---|---|---|---|---|---|
| ೧. ಕೃಷಿ ಇಲಾಖೆ | ೧೬ | ೨೦ | ೧೨ | ೦೮ | ೧೧ |
| ೨. ರೇಷ್ಮೆ ಇಲಾಖೆ | ೧೧ | ೦೧ | ೦೧ | ೦೦ | ೦೦ |
| ೩. ಸಮಾಜ ಕಲ್ಯಾಣ | ೪೦ | ೧೯ | ೨೧ | ೧೯ | ೨೩ |

| | | | | | |
|---|---|---|---|---|---|
| ಇಲಾಖೆ | | | | | |
| ೪.ತೋಟಗಾರಿಕೆ ಇಲಾಖೆ | ೨೨ | ೪೬ | ೨೮ | ೨೮ | ೦೧ |
| ೫. ಪಶು ಸಂಗೋಪನಾ ಇಲಾಖೆ | ೨೦ | ೧೨ | ೦೭ | ೧೪ | ೦೧ |
| ೬. ಕೈಗಾರಿಕಾ ಇಲಾಖೆ | ೧೦ | ೫೮ | ೪೫ | ೫೬ | ೨೬ |
| ೭. ಸಹಕಾರ ಇಲಾಖೆ | ೦೦ | ೦೧ | ೦೧ | ೦೦ | ೦೧ |
| ಒಟ್ಟು | ೧೧೯ | ೧೫೭ | ೧೧೫ | ೧೨೫ | ೬೩ |

ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಅನುಷ್ಠಾನಗೊಂಡಿರುವ ವಿಶೇಷ ಘಟಕ ಯೋಜನೆಯನ್ನು ವಿಶೇಷವಾಗಿ ವಿಶ್ಲೇಷಿಸಲಾಗಿರುತ್ತದೆ. ಕ್ಷೇತ್ರಕಾರ್ಯವನ್ನು ಒಟ್ಟು ೨೧ ಗ್ರಾಮಗಳಲ್ಲಿರುವ ಪರಿಶಿಷ್ಟಜಾತಿಯ ಜನರ ವಿವರಗಳನ್ನು ನಿಗದಿತ ಸಮೀಕ್ಷಾ ನಮೂನೆಯಲ್ಲಿ ದಾಖಲು ಮಾಡಲಾಗಿರುತ್ತದೆ. ಅದರ ಕ್ರೋಢೀಕೃತ ವಿವರಗಳನ್ನು ಕೋಷ್ಟಕ ಸಂಖ್ಯೆ ೬.೧೩ರಲ್ಲಿ ತೋರಿಸಲಾಗಿದೆ. ನಿಯಮಾನುಸಾರ ಆಯ್ದ ೩೫ ಗುಂಪು ಗ್ರಾಮಗಳಲ್ಲಿ ಒಟ್ಟು ೪೬೦ ಫಲಾನುಭವಿಗಳನ್ನು ಆಯ್ಕೆ ಮಾಡಲಾಗಿರುತ್ತದೆ. ಅದರಲ್ಲಿ ಒಟ್ಟು ೨೧೫ ಫಲಾನುಭವಿಗಳನ್ನು ಖುದ್ದಾಗಿ ಭೇಟಿಯಾಗಿ ಮಾಹಿತಿ ಪಡೆದುಕೊಂಡಾಗ ಈ ಕೆಳಗಿನ ಅಂಶ ಸ್ಪಷ್ಟವಾಗುತ್ತದೆ.

ಮನೆಗಳ ಮಾದರಿಯ ವಿವರಗಳನ್ನು ಪರಿಶೀಲಿಸಲಾಗಿ ಪಕ್ಕಾ ಮನೆ ಸಂಖ್ಯೆ ೨೬೫ ಹಾಗೂ ಕಚ್ಚಾ ಮನೆಗಳ ಸಂಖ್ಯೆ ೬೪ ಇರುವುದು ಕಂಡುಬರುತ್ತದೆ.




ಅಂದರೆ ೨೧೫ ಫಲಾನುಭವಿಗಳಲ್ಲಿ ಕೆಲವರು ಅಗತ್ಯಕ್ಕಿಂತ ಹೆಚ್ಚು ಮನೆಗಳನ್ನು ವಿವಿಧ ವಸತಿಯೋಜನೆಗಳಲ್ಲಿ ಪಡೆದುಕೊಂಡಿರುವುದು ಕಾಣಬಂತು. ಕೆಲವರು ಸ್ವಂತ ಮನೆಗಳಲ್ಲಿದ್ದರೂ ಸರ್ಕಾರಿ ಮನೆ ಪಡೆದುಕೊಂಡಿರುತ್ತಾರೆ. ಕಾರಣ ರಾಜಕೀಯ ಒತ್ತಡ ಮತ್ತು ಉಳ್ಳವರೇ ಹೆಚ್ಚಿನ ಸೌಕರ್ಯ ಹೊಂದುವ ಮನೋಭಿಲಾಸೆ ಹೊಂದಿರುವುದು ಸಮೀಕ್ಷಾ ಸಮಯದಲ್ಲಿ ಕಂಡುಬರುವಂತೆ ಜಮೀನು ಹೊಂದಿರುವವರ ಸಂಖ್ಯೆ ಹಾಗೂ ವೃತ್ತಿಯನ್ನು ಪರಿಶೀಲಿಸಲಾಗಿ ಸ್ವಂತ ಜಮೀನು ಹೊಂದಿರುವವರು ೧೫೦ ಜನರು. ಸರ್ಕಾರದಿಂದ ೨೧ ಜನರು ಆಗಿದ್ದು ಸ್ವಂತ ಜಮೀನನ್ನು ಅಲ್ಪಸ್ವಲ್ಪ ಪಮಾಣದ ಅಂದರೆ ಅರ್ಧ ಅಥವಾ ಒಂದು ಎಕರೆ ಜಮೀನು ಹೊಂದಿರುವುದನ್ನು ಸ್ವಂತ ಜಮೀನೆಂದು ಪರಿಗಣಿಸಲಾಗಿದೆ. ಆದರೆ ಒಂದು ಕುಟುಂಬದಲ್ಲಿ ಸರಾಸರಿ ಐದರಿಂದ ಹತ್ತು ಜನರಿರುವ ಕುಟಂಬಕ್ಕೆ ಇಷ್ಟು ಪ್ರಮಾಣದ ಹಿಡುವಳಿ ಆರ್ಥಿಕತೆಯ

ದೃಷ್ಟಿಯಿಂದ ಹಿತಕರವಾಗಿರುವುದಿಲ್ಲ.

ಜಮೀನಿನ ವಿವರ




ಈಗಾಗಲೇ ಸಮೀಕ್ಷೆಯಲ್ಲಿ ತಿಳಿದುಬಂದಿರುವಂತೆ ಇರುವ ಜನಸಂಖ್ಯೆಯಲ್ಲಿಯೇ ೧೦೭ ಕೃಷಿ ಕೆಲಸ ಮಾಡುವವರಿದ್ದು ಕೃಷಿ ಕಾರ್ಮಿಕರ ಸಂಖ್ಯೆ ೨೪೨ ರಷ್ಟಿರುವುದು ತಿಳಿದು ಬಂದಿದೆ. ಅಂದರೆ ಈ ತಾಲೂಕಿನಲ್ಲಿ ಪರಿಶಿಷ್ಟ ಜಾತಿಂಯಲ್ಲಿ ಹೆಚ್ಚು ಜನ ಕೃಷಿಕಾರ್ಮಿಕರಿರುತ್ತಾರೆಂಬುದು ಸ್ಪಷ್ಟನಾಗುತ್ತದೆ.




ಮೇಲಿನ ನಕ್ಷೆಯಲ್ಲಿ ತಿಳಿಸಿರುವಂತೆ ಭೂಮಿಯನ್ನು ಹೊಂದಿರುವವರ ಸಂಖ್ಯೆ ೧೭೧. ಎತ್ತು ೬೨. ಎಮ್ಮೆ ೩೬. ಕುರಿ ೫೭. ಹಸು ೩೮. ಹಂದಿ ೨. ಎತ್ತಿನಗಾಡಿ ೨೮. ಸೈಕಲ್ಲು ೧೮೨. ಮೋಟಾರ್ ಸೈಕಲ್ಲು ೩೭. ಟ್ರ್ಯಾಕ್ಟರ್ ೨. ಪಂಪ್ ಸೆಟ್ ೫. ಕಿರಾಣಿ ಅಂಗಡಿ ೬. ಇತ್ಯಾದಿ ೧೧. ಸೌಲಭ್ಯಗಳನ್ನು ಕ್ರಮಸಂಖ್ಯೆ ೧ ರಿಂದ ೧೬ ರವರೆಗಿನ ಅಂಕಿಗಳಲ್ಲಿ

ನಮೂದಿಸಲಾಗಿದೆ. ಈಗಾಗಲೇ ಹೊಂದಿರುವ ಸೌಲಭ್ಯಗಳನ್ನು ಪರಿಶೀಲಸಲಾಗಿ ಹೆಚ್ಚು ಜನರು ಕೃಷಿ ಕ್ಷೇತ್ರದಲ್ಲಿ ಕೃಷಿಕರಾಗಿ ಅಥವಾ ಕೃಷಿ ಕಾರ್ಮಿಕರಾಗಿ ಕೆಲಸ ನಿರ್ವಹಿಸುತ್ತಿರುವುದು ಕಂಡುಬರುತ್ತದೆ. ಹೊಂದಿರುವ ಸೌಲಭ್ಯಗಳ ವಿವರವನ್ನು ಈ ಕೆಳಗಿನ ನಕ್ಷೆಯಲ್ಲಿ ತೋರಿಸಲಾಗಿದೆ.

ಸಮೀಕ್ಷೆಯ ಸಮಯದಲ್ಲಿ ಜನರು ಬಯಸಿದ ಪೂರಕ ಸೌಲಭ್ಯಗಳ ವಿವರವನ್ನು ಪಡೆಯಲಾಗಿ ಹೆಚ್ಚು ಜನರು ಸ್ವಯಂ ಉದ್ಯೋಗಕ್ಕಾಗಿ ಪಶುಪಾಲನಾ ಉದ್ಯೋಗಕ್ಕೆ ಮನಸು ತೋರಿರುವುದು ಕಂಡುಬರುತ್ತದೆ. ಜನರು ಬಯಸಿರುವ ಸೌಲಭ್ಯಗಳ ವಿವರವನ್ನು ಈ ಕೆಳಗಿನ ನಕ್ಷೆಯಲ್ಲಿ ತೋರಿಸಲಾಗಿದೆ.




ಮೇಲಿನ ನಕ್ಷೆಯಲ್ಲಿ ತಿಳಿದುಬರುವುದೇನೆಂದರೆ ಕೃಷಿ ಭೂಮಿಯ ಬಗ್ಗೆ ಹೆಚ್ಚಿನ ಒಲವಿರುವುದಿಲ್ಲ. ಕಾರಣ ನಮ್ಮ ದೇಶದ ಕೃಷಿಯು ಮಳೆಯಾಧರಿತವಾಗಿದ್ದು ಸದರಿ ತಾಲೂಕಿನಲ್ಲಿ ಬೀಳುವ ಮಳೆಯ ಪಮಾಣ ಅನಿಯಮಿತ ಹಾಗೂ ಅನಿಶ್ಚಿತತೆಯಿಂದ ಕೂಡಿರುವುದರಿಂದ ಲಾಭದಾಯಕವಾಗದೇ ಇರುವುದರಿಂದ ಪರಿಶಿಷ್ಟ ಜಾತಿಯ ಜನರು ಹೆಚ್ಚು ಸ್ವಯಂ ಉದ್ಯೋಗಕ್ಕೆ ಅದರಲ್ಲೂ ಹಸು, ಕುರಿ, ಮೇಕೆಗಳನ್ನು ಬಯಸಿರುವುದು ಸ್ಪಷ್ಟವಾಗುತ್ತದೆ. ಕೆಲವರು ಹೈನುಗಾರಿಕೆಯಿಂದ ಆರ್ಥಿಕ ಮಟ್ಟವನ್ನು ಹೆಚ್ಚಿಸಿಕೊಂಡರೆ ಕೆಲವರು ಯೋಜನೆಯಲ್ಲಿ ಸೌಲಭ್ಯಗಳು ಉಚಿತವಾಗಿ ಬರುತ್ತವೆಂದು ಸಾಲದ ಪಮೇಯವಿಲ್ಲ, ಸರ್ಕಾರದಿಂದ ಬರುವುದನ್ನು ಏಕೆ ಬಿಡಬೇಕು ಎಂಬ ಮನಸ್ಸಿನಿಂದ ಸೌಲಭ್ಯ ಹೊಂದುತ್ತಾರೆ.




೧. ೬೯% ಉಪಯೋಗ
೨. ೩೧% ದುರುಪಯೋಗ

ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ೧೯೯೮ ೯೯ರಿಂದ ೨೦೦೩ ೦೪ ನೇ ಸಾಲಿನವರೆಗೆ

೫ ವರ್ಷಗಳಲ್ಲಿ ವಿವಿಧ ಅಭಿವೃದ್ಧಿ ಇಲಾಖೆಗಳು ಸಾಧಿಸಿರುವ ಪ್ರಗತಿಯನ್ನು ಪರಿಶೀಲಿಸಲಾಗಿ ಒಟ್ಟಾರೆ ಶೇಕಡಾ ೬೯ ರಷ್ಟು ನೀಡಿರುವ ಸೌಲಭ್ಯಗಳು ಸದುಪಯೋಗವಾಗಿರುವುದು ಕಂಡುಬರುತ್ತದೆ. ಇರುವ ಫಲಾನುಭವಿಗಳಲ್ಲಿ ಹೆಚ್ಚಿನವರು ಹೆಚ್ಚು ಆಸಕ್ತಿ ಹಾಗೂ ಶ್ರಮದಿಂದ ಸರ್ಕಾರದ ಸೌಲಭ್ಯಗಳನ್ನು ಪಡೆದುಕೊಂಡು ತಮ್ಮ ಜೀವನಮಟ್ಟವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನ ಮಾಡುತ್ತಿರುವುದು ತಿಳಿದು ಬರುತ್ತದೆ. ದುರಾದೃಷ್ಟವಶಾತ್ ಕೆಲವರನ್ನು ಹೊರತು ಪಡಿಸಿದರೆ ಉಳಿದವರು ಸೌಲಭ್ಯ ಹೊಂದಿದ ಕೆಲವೇ ತಿಂಗಳು ಅಥವಾ ವರ್ಷದಲ್ಲಿ ಸ್ವತ್ತುಗಳನ್ನು ಮಾರಿಕೊಳ್ಳುತ್ತಾರೆ. ಅಂದರೆ ಫಲಾನುಭವಿಗಳ ಆರ್ಥಿಕ ಹಿನ್ನೆಲೆಯನ್ನು ಪರಿಶೀಲಿಸಲಾಗಿ ಅವರಿಗಿರುವ ನಾನಾ ಆರ್ಥಿಕ, ಆರೋಗ್ಯ, ಶಿಕ್ಷಣ, ಧಾರ್ಮಿಕ ಕಾರಣಗಳಿಗಾಗಿ ಸ್ವತ್ತುಗಳನ್ನು ಮಾರಿಕೊಂಡಿರುವುದು ತಿಳಿದು ಬರುತ್ತದೆ. ಅಂದರೆ ೧. ಮಕ್ಕಳ ವಿದ್ಯಾಭ್ಯಾಸಕ್ಕಾಗಿ ೨. ಆಗಾಗ್ಗೆ ಬರುವ ಹಬ್ಬಹರಿದಿನ, ಅಂಧಾನುಕರಣೆ, ವ್ರತಾಚರಣೆಗಾಗಿ ಬಳಸಿಕೊಳ್ಳುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದು ಬಂದಿರುತ್ತದೆ.

ಸಂಶೋಧನಾ ಸಮಯದಲ್ಲಿ ತಿಳಿದುಬರುವಂತೆ, ವಿವರವಾಗಿ ಸಮೀಕ್ಷೆ ನಡೆಸಿರುವ ಹಲವಾರು ಇಲಾಖೆಗಳಲ್ಲಿ ಸಮಾಜಕಲ್ಯಾಣ ಇಲಾಖೆ, ಪಶುಸಂಗೋಪನಾ ಇಲಾಖೆಗಳಿಂದ ನೀಡಿರುವ ಸೌಲಭ್ಯಗಳು ಪರಿಶಿಷ್ಟಜಾತಿಯ ಜನರಿಗೆ ಉಪಯುಕ್ತವಾಗಿದ್ದು, ಅದರಿಂದ ಅವರಿಗೆ ನಿರಂತರ ಆದಾಯ ಬರುವಲ್ಲಿ ಮತ್ತು ಅವರು ಬಡತನ ರೇಖೆಗಿಂತ ಮೇಲೆ ಬರುವಲ್ಲಿ ಸಹಕಾರಿಯಾಗುವ ಅಂಶ ಬೆಳಕಿಗೆ ಬಂದಿದೆ. ವಿಶೇಷ ಘಟಕ ಯೋಜನೆಯನ್ನು ಅನುಷ್ಠಾನಗೊಳಿಸಿರುವ ಕೃಷಿ, ಕೈಗಾರಿಕೆ, ತೋಟಗಾರಿಕೆ, ಸಹಕಾರ, ರೇಷ್ಮೆ ಇಲಾಖೆಗಳಲ್ಲಿ ಹೆಚ್ಚು ಸೌಲಭ್ಯಗಳು ದುರುಪಯೋಗವಾಗಿರುವುದು ಕಂಡುಬರುತ್ತದೆ. ಅಂದರೆ ಜನರು ಕಡುಬಡತನದಿಂದ ತಮ್ಮ ದಿನನಿತ್ಯದ ಬದುಕಿನ ಬವಣೆಯನ್ನು ನೀಗಿಕೊಳ್ಳಲು ತಮ್ಮಲ್ಲಿರುವ ಅಥವಾ ಸರ್ಕಾರದಿಂದ ನೀಡಿರುವ ಸೌಲಭ್ಯಗಳನ್ನೇ ಈ ಕೆಳಗಿನ ಹಲವಾರು ಕಾರಣಗಳಿಂದ ದುರುಪಯೋಗವಾಗಿರುವುದು ಗಮನಾರ್ಹವಾಗಿದೆ. ಅವುಗಳೆಂದರೆ,

೧. ಅವರು ತಮ್ಮ ದಿನ ನಿತ್ಯದ ಬದುಕಿನ ಅವಶ್ಯಕತೆಗಾಗಿ ಈ ಹಿಂದೆ ಮಾಡಿರುವ ಸಾಲ ಅದನ್ನು ತೀರಿಸಲು ಲಭ್ಯವಿರುವ ಸ್ವತ್ತನ್ನು ಮಾರಿಕೊಳ್ಳುವುದು.

೨. ಆರೋಗ್ಯ ನಿರ್ವಹಣೆಗಾಗಿ

೩. ಮಕ್ಕಳ ವಿದ್ಯಾಭ್ಯಾಸಕ್ಕಾಗಿ

೪. ಮಕ್ಕಳ ಮದುವೆಗಾಗಿ

೫. ಆಗಾಗ ಬರುವ ಹಬ್ಬಹರಿದಿನಗಳು ಅಂಧಾನುಕರಣೆಗಳ ಆಚರಣೆಗಾಗಿ ಮಾಡಿರುವ ಸಾಲವನ್ನು ತೀರಿಸಲು

೬. ಅವರಿಗಿರುವ ಕೆಲವು ದುರಭ್ಯಾಸಕ್ಕಾಗಿ ಮಾಡಿರುವ ಸಾಲವನ್ನು ತೀರಿಸಲು

೭. ಕೆಲವು ರಾಜಕೀಯ ಪುಡಾರಿಗಳು ಹಾಗೂ ಮಧ್ಯಸ್ಥಗಾರರ ಪ್ರಭಾವಕ್ಕೆ ಮರುಳಾಗಿ ಇವೇ ಮೊದಲಾದ ಕಾರಣಗಳಿಂದ ಸ್ವತ್ತುಗಳು ದುರುಪಯೋಗವಾಗಿರುತ್ತವೆ. ಈ ಬಗ್ಗೆ ಜನರಲ್ಲಿ ಸರಿಯಾದ ಜಾಗೃತಿ ಮೂಡಿಸುವ ಅವರಿಗೆ ನಿರ್ದಿಷ್ಟವಾದ ಸೌಲಭ್ಯಗಳನ್ನು ನೀಡಿ, ಅವುಗಳನ್ನು ಸದುಪಯೋಗ ಪಡಿಸಿಕೊಳ್ಳಲು ಅವರಿಗೆ ಸೂಕ್ತ ತರಬೇತಿ ಮತ್ತು ಮಾರ್ಗದರ್ಶನಗಳನ್ನು ನೀಡುವ ಅಗತ್ಯವಿದೆ. ಅಂತೆಯೇ ಅವರ ಸಾಮಾಜಿಕ, ಆರ್ಥಿಕ ಪರಿಸ್ಥಿತಿಯ ಹಿನ್ನೆಲೆಯನ್ನು ಅಭ್ಯಸಿಸಬೇಕು. ಅವರಿಗಿರುವ ಕನಿಷ್ಠಾವಶ್ಯಕತೆಗಳನ್ನು ಅರಿತು ಅವರ ಸರ್ವೋತೋಮುಖ ಅಭಿವೃದ್ಧಿಗಾಗಿ ಪ್ರತ್ಯೇಕ ಕಾರ್ಯಕ್ರಮ ರೂಪಿಸುವ ಅನಿವಾರ್ಯತೆಯನ್ನು ಸರ್ಕಾರ ಮನಗಾಣಬೇಕಾಗಿದೆ.

ಮೇಲಿನ ಎಲ್ಲಾ ಅಂಶಗಳನ್ನು ವಿವರವಾಗಿ ತುಲನಾತ್ಮಕವಾಗಿ ನೋಡಿದಾಗ ಕೆಲವು ಇಲಾಖೆಗಳು ಅತ್ಯಂತ ನಿಷ್ಠೆ ಕಾಳಜಿ ಹಾಗೂ ಶ್ರದ್ಧೆಯಿಂದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಿರುವುದು ತಿಳಿದಿದೆ. ಅಂತೆಯೇ ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಆದಿಕರ್ನಾಟಕ, ಆದಿದ್ರಾವಿಡ, ಲಂಬಾಣಿ, ಸುಡುಗಾಡುಸಿದ್ಧರು, ಕೊರವ, ಹಂದಿಜೋಗಿ, ಕಿಳ್ಳೇಕ್ಯಾತ, ಬೋವಿ, ಚನ್ನದಾಸರು ಇವೇ ಮೊದಲಾದ ಪರಿಶಿಷ್ಟಜಾತಿಯ ಪಟ್ಟಿಯಲ್ಲಿರುವ ಜನರಲ್ಲಿ ಹೆಚ್ಚಿನ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿರುವವರೆಂದರೆ, ಲಂಬಾಣಿ, ಆದಿಕರ್ನಾಟಕ, ಆದಿದ್ರಾವಿಡ, ಸುಡುಗಾಡುಸಿದ್ಧರು ಹಾಗೂ ಬೋವಿ ವರ್ಗದವರಾಗಿರುತ್ತಾರೆ. ಇವರಲ್ಲಿ ಅತಿ ಹೆಚ್ಚು ಪರಿಶ್ರಮದಿಂದ ಸ್ವತ್ತುಗಳನ್ನು ಉಳಿಸಿಕೊಂಡು ಆದಾಯಮಟ್ಟ ಹೆಚ್ಚಿಸಿಕೊಂಡಿರುವವರೆಂದರೆ ಲಂಬಾಣಿಗಳೇ ಆಗಿದ್ದಾರೆ. ಉಳಿದ ಜಾತಿಗಳ ಹೆಚ್ಚಿನ ಜನರು ನಾನಾ ಕಾರಣಗಳಿಂದ ದುರುಪಯೋಗ ಪಡಿಸಿಕೊಂಡಿರುವುದು ಸಮೀಕ್ಷೆಯಿಂದ ತಿಳಿದುಬಂದಿರುತ್ತದೆ.

ಅಷ್ಟಿದ್ದರೂ ಸ್ವತ್ತು ಪರೀಕ್ಷೆ ಮೌಲ್ಯಮಾಪನದಿಂದ ದೊರೆತ ಮಾಹಿತಿ, ಫಲಾನುಭವಿಗಳ ಜೀವನ ಮಟ್ಟ ಇವೆಲ್ಲವುಗಳನ್ನು ಗಮನಿಸಿದಾಗ ವಿಶೇಷ ಘಟಕ ಯೋಜನೆ ನಿಜವಾಗಿಯೂ ದಲಿತರಿಗೆ ನಿರಂತರ ಆದಾಯ ತರುವುದಕ್ಕೆ ಅನುವುಮಾಡಿಕೊಟ್ಟಿದೆ. ಇದಲ್ಲದೆ ಬಡತನ ರೇಖೆಯಿಂದ ಬರಲು ಮೇಲೆ ಬರಲು ಸಾಧ್ಯವಾಗಿದೆ ಎಂಬ ವಿಷಯ ಅನುಬಂಧದಲ್ಲಿ ನೀಡಿರುವ ಅಂಕಿ ಅಂಶಗಳಿಂದ ವೇದ್ಯವಾಗುತ್ತದೆ.

**ಸಮೀಕ್ಷೆಯ ಸಂಕ್ಷಿಪ್ತ ವಿವರಗಳನ್ನು ಮುಂದಿನ ಕೋಷ್ಟಕದಲ್ಲಿ ನೀಡಲಾಗಿದೆ.**

ಕೋಷ್ಟಕ ೬.೧೩

## ವಿಶೇಷ ಘಟಕ ಯೋಜನೆಯಡಿಯಲ್ಲಿ ದಲಿತರ ಸ್ಥಿತ್ಯಂತರಗಳು

( ಹಗರಿಬೊಮ್ಮನಹಳ್ಳಿ ತಾಲೂಕನ್ನು ಅನುಲಕ್ಷಿಸಿ )

| | ಗ್ರಾಮಗಳು | ಕುಟುಂಬದ ಜನಸಂಖ್ಯೆ | | | ಮನೆಗಳ ಮಾದರಿಗಳು | | | | | ಕೌಟುಂಬಿಕ ಕಸುಬುಗಳು | | | | |
|---|---|---|---|---|---|---|---|---|---|---|---|---|---|---|
| ಕ್ರ.ಸಂ. | | ಗಂಡು | ಹೆಣ್ಣು | ಒಟ್ಟು | ಪಕ್ಕಾ | ಕಚ್ಚಾ | ಯೋಜನೆ ಅಡಿ | ಒಟ್ಟು | ವಿದ್ಯುತ್ ಸಂಪರ್ಕ | ಜಮೀನು | ಸ್ವಂತ | ಸರಕಾರ | ಕೃಷಿ | ಕೃಷಿ ಕಾರ್ಮಿಕರು |
| 1 | ಉಪನಾಯಕನಹಳ್ಳಿ | 33 | 40 | 73 | 10 | 1 | 0 | 11 | 11 | 12 | 7 | 2 | 1 | 11 |
| 2 | ಏಣಗಿ ಬಸಾಪುರ | 30 | 23 | 53 | 11 | 1 | 0 | 12 | 7 | 18 | 4 | 0 | 2 | 9 |
| 3 | ಹೆಚ್. ಓಬಳಾಪುರ | 55 | 48 | 103 | 15 | 3 | 0 | 18 | 8 | 19.5 | 14 | 0 | 18 | 13 |
| 4 | ಕಡಲಬಾಳು | 40 | 33 | 73 | 9 | 7 | 0 | 16 | 11 | 19.5 | 8 | 1 | 7 | 12 |
| 5 | ಕಟ್ಟೆ ಹೊಲತಾಂಡ | 20 | 21 | 41 | 4 | 2 | 0 | 6 | 5 | 6 | 4 | 0 | 4 | 6 |
| 6 | ಕಲ್ಲಹಳ್ಳಿ | 69 | 59 | 128 | 25 | 4 | 0 | 29 | 22 | 32 | 13 | 0 | 13 | 29 |
| 7 | ಕೆ.ಕೆ.ತಾಂಡ | 38 | 34 | 72 | 12 | 3 | 0 | 15 | 7 | 26 | 9 | 0 | 9 | 9 |
| 8 | ಗುಳೇದಾಳ್ | 12 | 14 | 26 | 3 | 1 | 0 | 4 | 2 | 3 | 1 | 0 | 1 | 3 |
| 9 | ಚಿಮ್ಮನಹಳ್ಳಿ | 20 | 27 | 47 | 6 | 6 | 0 | 12 | 4 | 11.5 | 5 | 0 | 2 | 8 |
| 10 | ತೆಲುಗೋಳಿ | 59 | 53 | 112 | 14 | 8 | 0 | 22 | 6 | 12.3 | 5 | 0 | 3 | 20 |

| ಗ್ರಾಮಗಳು | | ಸ್ವಂತ ವೃತ್ತಿಗಳು ಕುಟುಂಬಗಳಲ್ಲಿ | | | ವಿಶೇಷ ಘಟಕ ಯೋಜನೆ ಅಡಿಯಲ್ಲಿ ಪಡೆದಿರುವ ಸೌಲಭ್ಯಗಳು | | | | | |
|---|---|---|---|---|---|---|---|---|---|---|
| | ಕ್ರ.ಸಂ. | ಸ್ವಂತ ಉದ್ಯೋಗ | ಇತರೆ | ಒಟ್ಟು ಆದಾಯ ರೂ/- | ಯೋಜನೆಯಡಿಯಲ್ಲಿ | ಯೋಜನೆ | ಸಹಾಯ ಧನ | ಉಪಯೋಗ | ದುರುಪಯೋಗ | ಇತ್ಯಾದಿ |
| 1 | ಉಪನಾಯಕನಹಳ್ಳಿ | 5 | 1 | 79,000 | 10 | 0 | 1,00,000 | 10 | 0 | 0 |
| 2 | ಏಣಗಿ ಬಸಾಪುರ | 4 | 0 | 75,000 | 8 | 0 | 1,15,000 | 6 | 1 | 0 |
| 3 | ಹೆಚ್. ಓಬಳಾಪುರ | 3 | 2 | 1,28,000 | 10 | 0 | 1,87,000 | 10 | 0 | 0 |
| 4 | ಕಡಲಬಾಳು | 5 | 2 | 95,000 | 13 | 0 | 1,09,000 | 13 | 0 | 0 |
| 5 | ಕಟ್ಟೆ ಹೊಲತಾಂಡ | 3 | 1 | 43,000 | 5 | 0 | 83,000 | 5 | 0 | 0 |
| 6 | ಕಲ್ಲಹಳ್ಳಿ | 14 | 0 | 1,67,000 | 25 | 0 | 2,53,300 | 25 | 0 | 0 |
| 7 | ಕೆ.ಕೆ.ತಾಂಡ | 2 | 3 | 90,000 | 8 | 0 | 1,06,300 | 5 | 3 | 0 |
| 8 | ಗುಳೇದಾಳ್ | 0 | 2 | 25,000 | 2 | 0 | 50,000 | 2 | 0 | 0 |
| 9 | ಚಿಮ್ಮನಹಳ್ಳಿ | 1 | 2 | 64,000 | 6 | 0 | 75,000 | 6 | 0 | 0 |
| 10 | ತೆಲುಗೋಳಿ | 2 | 5 | 1,30,000 | 18 | 0 | 1,85,151 | 18 | 0 | 1 |

| ಗ್ರಾಮಗಳು | | ಚರಾಸ್ತಿಗಳ ವಿವರ | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|
| ಕ್ರ.ಸಂ. | | ಭೂಮಿ | ಎತ್ತು | ಎಮ್ಮೆ | ಕುರಿ | ಹಸು | ಹಂದಿ | ಎತ್ತಿನಗಾಡಿ | ಸೈಕಲ್ | ಕಾರು | ಟ್ರಾಕ್ಟರ್ | ಪಂಪ್‌ಸೆಟ್ | ಲಾರಿ | ವಾಹನ | ಕಿರಾಣಿಅಂಗಡಿ | ಹೋಟೆಲ್ | ಇತ್ಯಾದಿ |
| 1 | [illegible] | 7 | 2 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 |
| 2 | ವಿಠಗಿ ಬಸಾಪುರ | 5 | 4 | 1 | 1 | 0 | 0 | 0 | 6 | 1 | 0 | 0 | 0 | 0 | 0 | 0 | 0 |
| 3 | ಜೆಜ್. ಓಬಳಾಪುರ | 14 | 0 | 1 | 11 | 5 | 0 | 1 | 13 | 0 | 0 | 0 | 0 | 0 | 0 | 0 | 0 |
| 4 | [illegible] | 9 | 2 | 0 | 10 | 3 | 0 | 0 | 11 | 10 | 0 | 0 | 0 | 0 | 0 | 0 | 0 |
| 5 | ಕಟ್ಟೆ ಹೊಲತಾಂಡ | 4 | 0 | 2 | 0 | 1 | 0 | 0 | 2 | 0 | 0 | 0 | 0 | 0 | 0 | 0 | 0 |
| 6 | ಕಲ್ಲಹಳ್ಳಿ | 15 | 2 | 7 | 6 | 6 | 0 | 1 | 11 | 0 | 0 | 0 | 0 | 0 | 0 | 0 | 0 |
| 7 | ಕೆ.ಕೆ.ತಾಂಡ | 9 | 4 | 1 | 1 | 5 | 0 | 0 | 7 | 0 | 0 | 0 | 0 | 0 | 0 | 0 | 0 |
| 8 | ಗುಳೇದಾಳ್ | 1 | 1 | 2 | 0 | 0 | 0 | 0 | 11 | 0 | 0 | 0 | 0 | 0 | 0 | 0 | 0 |
| 9 | ಚಿಮ್ಮನಹಳ್ಳಿ | 5 | 3 | 0 | 0 | 0 | 0 | 0 | 9 | 0 | 0 | 0 | 0 | 0 | 0 | 0 | 0 |
| 10 | ತೆಲಗೋಡ | 7 | 4 | 1 | 1 | 1 | 0 | 0 | 19 | 0 | 0 | 0 | 0 | 0 | 0 | 0 | 1 |

| ಗ್ರಾಮಗಳು | | ವಿಶೇಷ ಘಟಕ ಯೋಜನೆಯಡಿಯಲ್ಲಿ ಫಲಾನುಭವಿಗಳು ಬಯಸಿದ ಪೂರಕ ಸೌಲಭ್ಯಗಳು | | | | | | | | | | | | | |
|---|---|---|---|---|---|---|---|---|---|---|---|---|---|---|---|
| ಕ್ರ.ಸಂ. | ಮನೆ | ಭೂಮಿ | ನೀರಾವರಿ | ಸೌಲಭ್ಯ | ಎತ್ತು | ಎತ್ತಿನಗಾಡಿ | ಹಸುಗಳು | ಕುರಿ/ಮೇಕೆ | ಕೋಳಿ | ಟ್ರಾಕ್ಟರ್ | ಟಿಲ್ಲರ್ | ಬಾರಿವಾಹನ | ತರಬೇತಿ | ವ್ಯಾಪಾರ | ಇತ್ಯಾದಿ |
| 1 | [illegible]ಯಕನಹಳ್ಳಿ | 1 | 0 | 1 | 0 | 4 | 2 | 5 | 0 | 0 | 0 | 0 | 0 | 0 | 1 |
| 2 | ವಿಠಲಿ ಬಸಾಪುರ | 0 | 1 | 1 | 0 | 1 | 3 | 5 | 0 | 0 | 0 | 0 | 0 | 1 | 0 |
| 3 | ಹೆಚ್. ಓಬಳಾಪುರ | 0 | 0 | 0 | 2 | 5 | 2 | 5 | 0 | 0 | 0 | 0 | 1 | 3 | 0 |
| 4 | ಕದಲಬಾಳು | 0 | 0 | 1 | 1 | 1 | 1 | 6 | 0 | 0 | 0 | 0 | 0 | 5 | 0 |
| 5 | ಕಟ್ಟೆ ಹೊಲತಾಂಡ | 0 | 0 | 1 | 0 | 1 | 1 | 2 | 0 | 0 | 0 | 0 | 0 | 1 | 0 |
| 6 | ಕಲ್ಲಹಳ್ಳಿ | 0 | 1 | 4 | 3 | 4 | 4 | 8 | 0 | 0 | 0 | 0 | 3 | 4 | 0 |
| 7 | ಕೆ.ಕೆ.ತಾಂಡ | 0 | 2 | 1 | 0 | 2 | 1 | 1 | 0 | 1 | 0 | 0 | 0 | 7 | 0 |
| 8 | ಗುಳೇದಾಳ್ | 0 | 0 | 1 | 0 | 1 | 1 | 1 | 0 | 0 | 0 | 0 | 0 | 0 | 0 |
| 9 | ಚಿಮ್ಮನಹಳ್ಳಿ | 0 | 0 | 3 | 0 | 0 | 0 | 4 | 0 | 0 | 0 | 0 | 0 | 1 | 0 |
| 10 | ತೆಲುಗೋಳಿ | 0 | 0 | 1 | 0 | 4 | 7 | 10 | 0 | 0 | 0 | 0 | 0 | 0 | 0 |

| | | | | | | | | | | | | | | |
|---|---|---|---|---|---|---|---|---|---|---|---|---|---|---|
| 11 | ನಂದಿಪುರ | 19 | 18 | 37 | 7 | 3 | 0 | 10 | 3 | 3 | 1 | 1 | 0 | 8 |
| 12 | ಬನ್ನಿ ಕಲ್ಲು | 57 | 73 | 130 | 23 | 5 | 0 | 28 | 20 | 32.22 | 7 | 8 | 8 | 21 |
| 13 | ಚಿಲುಗೋಡು | 45 | 44 | 89 | 21 | 1 | 0 | 22 | 13 | 38.5 | 9 | 2 | 8 | 13 |
| 14 | ಮೋರಗೇರಿ | 53 | 52 | 105 | 14 | 9 | 0 | 23 | 11 | 11.5 | 8 | 0 | 3 | 18 |
| 15 | ಮಗಿಮಾವಿನಹಳ್ಳಿ | 35 | 32 | 67 | 15 | 1 | 0 | 16 | 12 | 12 | 5 | 0 | 2 | 13 |
| 16 | ಯಡ್ರಮ್ಮನಹಳ್ಳಿ | 46 | 67 | 113 | 26 | 2 | 0 | 28 | 19 | 43.4 | 20 | 2 | 10 | 13 |
| 17 | ರಾರಾಳು ತಾಂಡ | 52 | 53 | 105 | 19 | 2 | 0 | 21 | 17 | 40.6 | 14 | 0 | 4 | 15 |
| 18 | ಶಿವಾನಂದ ನಗರ | 30 | 25 | 55 | 10 | 0 | 0 | 10 | 10 | 11.4 | 4 | 1 | 6 | 4 |
| 19 | ಹನಸಿ | 18 | 23 | 61 | 8 | 0 | 0 | 8 | 8 | 19.2 | 6 | 0 | 3 | 5 |
| 20 | ಹಗರಿಬೊಮ್ಮನಹಳ್ಳಿ | 22 | 27 | 49 | 9 | 3 | 0 | 12 | 9 | 5 | 3 | 3 | 1 | 9 |
| 21 | ಹಗರಿ ಕ್ಯಾದಗಿ ಹಳ್ಳಿ | 14 | 10 | 24 | 4 | 2 | 0 | 6 | 4 | 6 | 3 | 1 | 2 | 3 |
| | | 767 | 776 | 1563 | 265 | 64 | 0 | 329 | 209 | 382.6 | 150 | 21 | 107 | 242 |

| | | | | | | | | | | |
|---|---|---|---|---|---|---|---|---|---|---|
| 11 | [illegible] | 2 | 1 | 56,000 | 7 | 0 | 1,45,000 | 7 | 0 | 0 |
| 12 | [illegible] | 2 | 5 | 1,68,000 | 20 | 0 | 1,30,000 | 20 | 0 | 0 |
| 13 | [illegible] | 2 | 9 | 1,28,000 | 14 | 0 | 1,42,500 | 14 | 0 | 0 |
| 14 | [illegible] | 7 | 9 | 1,43,000 | 17 | 0 | 2,60,000 | 17 | 0 | 0 |
| 15 | ಮರಿಯಮ್ಮನಹಳ್ಳಿ | 3 | 5 | 74,000 | 7 | 0 | 76,500 | 7 | 0 | 1 |
| 16 | ಯಡ್ರಮ್ಮನಹಳ್ಳಿ | 4 | 14 | 1,58,000 | 25 | 0 | 2,30,000 | 24 | 0 | 0 |
| 17 | [illegible] | 2 | 9 | 1,23,000 | 6 | 0 | 75,000 | 6 | 0 | 0 |
| 18 | ಶಿವಾನಂದ ನಗರ | 2 | 3 | 62,000 | 9 | 0 | 1,23,000 | 9 | 0 | 0 |
| 19 | ಹಡಗಲಿ | 1 | 2 | 47,000 | 3 | 0 | 16,600 | 3 | 0 | 0 |
| 20 | ಹಗರಿಬೊಮ್ಮನಹಳ್ಳಿ | 3 | 0 | 64,000 | 5 | 0 | 72,000 | 5 | 0 | 0 |
| 21 | ಹಗರಿ ಕ್ಯಾದಿಗಿ ಹಳ್ಳಿ | 0 | 2 | 32,000 | 0 | 0 | 0 | 0 | 0 | 0 |
| | | 67 | 77 | 806,000 | 218 | 0 | 448100 | 212 | 4 | 2 |

| | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|
| 11 | ನಂದಿಪುರ | 2 | 3 | 2 | 1 | 0 | 0 | 2 | 8 | 0 | 0 | 0 | 0 | 0 | 1 | 0 | 0 |
| 12 | ಬನ್ನಿ ಕಲ್ಲು | 14 | 1 | 2 | 1 | 1 | 0 | 1 | 10 | 1 | 0 | 0 | 0 | 0 | 0 | 0 | 0 |
| 13 | ಬೆಲುಗೂರು | 10 | 9 | 2 | 5 | 1 | 1 | 3 | 10 | 3 | 0 | 0 | 0 | 0 | 1 | 0 | 0 |
| 14 | ಮೋರಗೇರಿ | 9 | 3 | 1 | 9 | 1 | 1 | 2 | 14 | 8 | 0 | 0 | 1 | 0 | 3 | 0 | 6 |
| 15 | ಮಾಗಿಮಾವಿನಹಳ್ಳಿ | 4 | 5 | 3 | 2 | 3 | 0 | 5 | 11 | 2 | 0 | 1 | 2 | 0 | 0 | 0 | 0 |
| 16 | ಯಡ್ರಮ್ಮನಹಳ್ಳಿ | 24 | 7 | 6 | 3 | 5 | 0 | 10 | 16 | 6 | 0 | 1 | 2 | 0 | 0 | 0 | 3 |
| 17 | ರಾರಾವಿ ತಾಂಡ | 14 | 4 | 2 | 0 | 4 | 0 | 2 | 10 | 1 | 0 | 0 | 0 | 0 | 0 | 0 | 1 |
| 18 | ಶಿವಾನಂದ ನಗರ | 5 | 4 | 2 | 1 | 0 | 0 | 0 | 4 | 0 | 0 | 0 | 0 | 0 | 1 | 0 | 0 |
| 19 | ಹನಸಿ | 6 | 4 | 0 | 1 | 1 | 0 | 1 | 5 | 3 | 0 | 0 | 0 | 0 | 0 | 0 | 0 |
| 20 | ಹಗರಿಬೊಮ್ಮನಹಳ್ಳಿ | 3 | 0 | 1 | 3 | 0 | 0 | 0 | 2 | 2 | 0 | 0 | 0 | 0 | 0 | 0 | 0 |
| 21 | ಹಗರಿ ಕ್ಯಾದಗಿ ಹಳ್ಳಿ | 4 | 0 | 0 | 1 | 1 | 0 | 0 | 3 | 0 | 0 | 0 | 0 | 0 | 0 | 0 | 0 |
| | | 171 | 62 | 36 | 57 | 38 | 2 | 28 | 182 | 37 | 0 | 2 | 5 | 0 | 6 | 0 | 11 |

| | | | | | | | | | | | | | | | |
|---|---|---|---|---|---|---|---|---|---|---|---|---|---|---|---|
| 11 | ವಂದಿಮುದ | 0 | 0 | 0 | 0 | 1 | 1 | 4 | 0 | 0 | 0 | 0 | 0 | 4 | 0 |
| 12 | ಬನ್ನಿ ಕಲ್ಲು | 0 | 1 | 2 | 0 | 1 | 10 | 10 | 0 | 0 | 0 | 0 | 2 | 4 | 0 |
| 13 | ಚಿಲುಗೋಡು | 0 | 0 | 6 | 0 | 0 | 8 | 6 | 1 | 2 | 1 | 0 | 1 | 5 | 0 |
| 14 | ಮೋರಗೇರಿ | 0 | 0 | 2 | 1 | 4 | 7 | 9 | 4 | 0 | 0 | 0 | 3 | 5 | 1 |
| 15 | ಮಗಿಮಾವಿನಹಳ್ಳಿ | 10 | 0 | 0 | 2 | 0 | 1 | 7 | 15 | 4 | 1 | 1 | 1 | 3 | 11 |
| 16 | ಯಡ್ರಮ್ಮನಹಳ್ಳಿ | 1 | 0 | 6 | 0 | 1 | 8 | 11 | 3 | 5 | 1 | 2 | 8 | 17 | 3 |
| 17 | ರಾರಾವಿ ತಾಂಡ | 0 | 0 | 4 | 0 | 0 | 6 | 7 | 0 | 2 | 1 | 0 | 0 | 3 | 1 |
| 18 | ಶಿವಾನಂದ ನಗರ | 0 | 0 | 3 | 0 | 0 | 4 | 0 | 0 | 0 | 0 | 0 | 0 | 4 | 0 |
| 19 | ಹನಸಿ | 0 | 0 | 1 | 0 | 0 | 7 | 0 | 0 | 0 | 0 | 0 | 0 | 0 | 0 |
| 20 | ಹಗರಿಬೊಮ್ಮನಹಳ್ಳಿ | 0 | 0 | 0 | 0 | 0 | 3 | 2 | 0 | 0 | 0 | 0 | 2 | 5 | 0 |
| 21 | ಹಗರಿ ಕ್ಯಾದಗಿ ಹಳ್ಳಿ | 0 | 0 | 0 | 0 | 0 | 2 | 2 | 0 | 0 | 0 | 0 | 0 | 2 | 0 |
| | | 12 | 5 | 38 | 9 | 30 | 79 | 105 | 23 | 14 | 4 | 3 | 21 | 74 | 17 |

## ಉ. ವಿಶೇಷ ಘಟಕ ಯೋಜನೆಯನ್ನು ಅನುಷ್ಠಾನಗೊಳಿಸಲು ಇರುವಬಾಧಕಗಳು ಹಾಗೂ ಪರಿಹಾರೋಪಾಯಗಳು

ಪ್ರಸ್ತುತ ಅಧ್ಯಯನವನ್ನು ನಡೆಸಿದಾಗ ದಲಿತರ ಸಾಮಾಜಿಕ ಸ್ಥಿತಿಗತಿಗಳು, ಆರ್ಥಿಕ ಸಂಕಷ್ಟಗಳು, ಶಿಕ್ಷಣ, ಆರೋಗ್ಯ, ನೈರ್ಮಲ್ಯ, ರಕ್ಷಣೆ ಮತ್ತು ರಾಜಕೀಯ ಸ್ಥಿತಿಗತಿಗಳು ಇವೇ ಮೊದಲಾದ ವಿಷಯಗಳ ಬಗ್ಗೆ ಚರ್ಚಿಸಿ ಅನೇಕ ಸಮಸ್ಯೆಗಳಿಗೆ ಸೂಕ್ತ ಪರಿಹಾರ, ಸಲಹೆಗಳನ್ನು ಸೂಚಿಸಲಾಗಿದೆ. ದಲಿತರ ಅಭಿವೃದ್ಧಿಗಾಗಿಯೇ ಇರುವ ವಿಶೇಷ ಘಟಕ ಯೋಜನೆಯ ಕಾರ್ಯಕ್ರಮಗಳ ತೌಲನಿಕ ಅಧ್ಯಯನದಿಂದ ಕೆಲವೊಂದು ಮಹತ್ವದ ಅಂಶಗಳನ್ನು ಕಂಡುಕೊಳ್ಳಲಾಗಿದೆ.ಯೋಜನೆಯನ್ನು ಅನುಷ್ಠಾನಗೊಳಿಸುವಾಗ ಇರುವ ಸಾಧಕ ಬಾಧಕಗಳನ್ನು ಈ ಮುಂದಿನಂತೆ ಚರ್ಚಿಸಲಾಗಿದೆ.

೧. ಸರ್ಕಾರ ತನ್ನ ಯೋಜನೆಗಳನ್ನು ಪರಿಶಿಷ್ಟಜಾತಿಯ ಜನರ ಮನೆಯ ಬಾಗಿಲಿಗೆ ಸರಳವಾಗಿ, ಸುಲುಭವಾಗಿಯೂ ನಿಗದಿತ ಸಮಯದಲ್ಲಿ ತಲುಪಿಸುವ ಉದ್ದೇಶದಿಂದ ಹಿಂದೆ ಆಗುತ್ತಿದ್ದ ಅನವಶ್ಯಕ ವಿಳಂಬವನ್ನು ತಪ್ಪಿಸಿ ಪಾರದರ್ಶಕತೆಯನ್ನು ಪ್ರದರ್ಶಿಸಿ ಅರ್ಹ ಪರಿಶಿಷ್ಟಜಾತಿಯ ಫಲಾನುಭವಿಗಳನ್ನು ಗುರುತಿಸಿ ಆಯ್ಕೆ ಮಾಡಿ ಯೋಜನೆಯ ಪ್ರಯೋಜನವನ್ನು ಒದಗಿಸಲು ಅಧಿಕಾರ ಕೇಂದ್ರೀಕೃತ ವ್ಯವಸ್ಥೆಯಿಂದ ಅಧಿಕಾರ ವಿಕೇಂದ್ರಿಕರಣಕ್ಕೆ ಹೆಚ್ಚಿನ ಒತ್ತು ಕೊಟ್ಟು ಆಡಳಿತಾಂಗವನ್ನು ೧. ಗ್ರಾಮಪಂಚಾಯತಿ ೨. ತಾಲೂಕು ಪಂಚಾಯತಿ ೩. ಜಿಲ್ಲಾಪಂಚಾಯತಿಗಳೆಂದು ವಿಭಜಿಸಿ ಆಡಳಿತ ವ್ಯವಸ್ಥೆಯ ವಿಕೇಂದ್ರೀಕರಣವನ್ನು ಜಾರಿಗೆ ತಂದಿದೆ.

ಇಂತಹ ವ್ಯವಸ್ಥೆಯಲ್ಲಿ ಈ ಯೋಜನೆಯಡಿಯಲ್ಲಿ ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಆಡಳಿತಾಂಗದ ಪ್ರಾರಂಭದ ಹಂತವಾದ ಗ್ರಾಮಪಂಚಾಯತಿ ವ್ಯವಸ್ಥೆಯಲ್ಲಿ ಪರಿಶಿಷ್ಟ ಜಾತಿಯ ಸಮುದಾಯಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಹಾಗೂ ಈ ಜಾತಿಯ ಬಗ್ಗೆ ಸರಿಯಾದ ಮಾಹಿತಿ ಇಲ್ಲದೆ ಕೇವಲ ಬಲಿಷ್ಠವಾದ ಅಥವಾ ಹೆಚ್ಚಿನ ಜನಸಂಖ್ಯೆಯನ್ನು ಹೊಂದಿರುವ ಒಂದು ಅಥವಾ ಎರಡು ಫಲಾನುಭವಿಗಳನ್ನು ಆಯ್ಕೆಮಾಡಿ ಇತರರನ್ನು ಕಡೆಗಣಿಸಿ ಪರಿಶಿಷ್ಟಜಾತಿಯ ಜನರ ನಿರ್ಲಕ್ಷ್ಯತೆಗೆ ಕಾರಣವಾಗಿವೆ.

**ಸಲಹೆಗಳು**

ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಗ್ರಾಮಮಟ್ಟದಲ್ಲಿರುವ ಆಯ್ಕೆ ಸಮತಿಯ ಸದಸ್ಯರುಗಳು ಆ ಗ್ರಾಮದ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಪರಿಶಿಷ್ಟ ಜಾತಿಯವರ ಮಾಹಿತಿಯನ್ನು ಪಡೆದುಕೊಂಡು ಜನಸಂಖ್ಯೆಗೆ ಅನುಗುಣವಾಗಿ ನಿಗದಿಪಡಿಸಿರುವ ಗುರಿಯನ್ನು ಹಂಚಿ ಅರ್ಹ ಫಲಾನುಭವಿಗಳನ್ನು ಆಯ್ಕೆಮಾಡಿದಾಗ ಮಾತ್ರ ಅಭಿವೃದ್ಧಿಯನ್ನು ಸಾಧಿಸಿ ಸಮತೋಲನವನ್ನು ಕಾಪಾಡಲು ಸಾಧ್ಯವಾಗುತ್ತದೆ.

೨. ಈ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿರುವ ಸರ್ಕಾರಿ ಅಭಿವೃದ್ಧಿ ಇಲಾಖೆಗಳು ಸಹ ಕೇವಲ ಸರ್ಕಾರ ನೀಡಿರುವ ಗುರಿಯನ್ನು ಸಾಧಿಸುವ ಮನೋಭಾವವನ್ನು ಹೊಂದಿರುವುದು ಈ ದೃಷ್ಟಿಯಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡದೆ ಒತ್ತಡಕ್ಕೆ ಮಣಿದು ಫಲಾನುಭವಿಗಳನ್ನು ಆಯ್ಕಮಾಡಿ ನೀಡುವ ಸ್ವತ್ತುಗಳನ್ನು

ಬಳಸುವ ಜ್ಞಾನ ಅಥವಾ ತರಬೇತಿಯನ್ನು ಹೊಂದಿದ್ದಾನೆಯೇ ಹಾಗೂ ಇದರಿಂದ ಫಲಾನುಭವಿಗೆ ನಿರಂತರ ಆದಾಯ ಬರುವಂತಹ ಸಾಧ್ಯತೆಗಳಿವೆಯೇ ನೀಡುವಂತಹ ಸ್ವತ್ತು ಪ್ರಯೋಜನವಾಗುವುದೇ ಎಂಬುದನ್ನು ಪರಿಶೀಲಿಸದೆ ಈ ಯೋಜನೆಯನ್ನು ಕಾಟಾಚಾರಕ್ಕೆ ಅನುಷ್ಠಾನಗೊಳಿಸುತ್ತಿರುವುದರಿಂದ ಪೂರ್ಣಪ್ರಮಾಣದ ಫಲಕಾರಿಯಾಗಿರುವುದಿಲ್ಲ.

**ಸಲಹೆ**

ಈ ಯೋಜನೆಯಡಿಯಲ್ಲಿ ಫಲಾನುಭವಿಗಳನ್ನು ಆಯ್ಕೆಮಾಡುವಾಗ ಕೈಗೊಳ್ಳುವ ಘಟಕದ ಬಗ್ಗೆ ಅಥವಾ ಕಾರ್ಯಕ್ಷೇತ್ರದ ಬಗ್ಗೆ ಹೊಂದಿರುವ ಜ್ಞಾನದಮಟ್ಟು ನೀಡಿರುವ ಯೋಜನೆಯನ್ನು ಸದುಪಯೋಗ ಪಡಿಸಿಕೊಳ್ಳಲು ಆತನಲ್ಲಿರುವ ಉತ್ಸಾಹ ಹಾಗೂ ಯೋಜನಗಳಿಗೆ ಸ್ಥಳೀಯವಾಗಿ ದೊರಕುವ ಬೇಡಿಕೆ ಆ ಬೇಡಿಕೆಗೆ ಸ್ಪಂದಿಸಿದಾಗ ಆತನಿಗೆ ದೊರೆಯುವ ನಿರಂತರ ಆದಾಯ ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಅರ್ಹ ಫಲಾನುಭವಿಗಳನ್ನು ಆಯ್ಕೆಮಾಡಿದಾಗ ಮಾತ್ರ ಈ ಯೋಜನೆಯಲ್ಲಿ ನಿರೀಕ್ಷಿಸಿದ ಮಟ್ಟಕ್ಕೆ ಪಗತಿಯನ್ನು ಸಾಧಿಸಲು ಸಾಧ್ಯ.

೩. ಈ ಯೋಜನೆಯಡಿಯಲ್ಲಿ ನೀಡಿದ ಸ್ವತ್ತುಗಳನ್ನು ಪರಿಶಿಷ್ಟಜಾತಿಯ ಜನರು ತಮ್ಮ ಒಂದಲ್ಲ ಒಂದು ಜೀವನೋಪಾಯಕ್ಕಾಗಿ ಅಥವಾ ಸಮಸ್ಯೆಗಳ ಪರಿಹಾರಕ್ಕಾಗಿ ದುರುಪಯೋಗ ಪಡಿಸಿಕೊಂಡಿರುವುದರಿಂದ ಈ ಯೋಜನೆಯ ಗುರಿ ಮತ್ತು ಉದ್ದೇಶ ವಿಫಲವಾಗಿದೆ.

**ಸಲಹೆ**

ಈ ಯೋಜನೆಯಡಿಯಲ್ಲಿ ಸ್ವತ್ತುಗಳನ್ನು ಮಾರುವುದಾಗಲೀ ಅಥವಾ ಕೊಳ್ಳುವುದಾಗಲೀ ನಿಷೇಧವಾಗುವವರೆವಿಗೂ ಈ ಸ್ವತ್ತುಗಳ ದುರುಪಯೋಗವನ್ನು ತಪ್ಪಿಸುವುದಕ್ಕಾಗುವುದಿಲ್ಲ. ಸರ್ಕಾರ ಅದಕ್ಕಾಗಿ ಕಟ್ಟು ನಿಟ್ಟಾದ ಕಾಯ್ದೆ ಮತ್ತು ಕಾನೂನುಗಳನ್ನು ಜಾರಿಗೆ ತಂದು ಮಾರುವುದು ಮತ್ತು ಕೊಳ್ಳುವುದು ಅಪರಾಧವೆಂದು ಘೋಷಿಸಿದಾಗ ಈ ಯೋಜನೆಯು ಸಫಲವಾಗಲು ಸಾಧ್ಯ.

೪. ಈ ಯೋಜನೆಯಲ್ಲಿ ಫಲಾನುಭವಿಗಳಿಗೆ ನೀಡುವ ಸ್ವತ್ತುಗಳನ್ನು ಸಹಾಯಧನ ಮತ್ತು ಸಾಲದ ಸಂಮ್ಮಿಶ್ರದಿಂದ ನೀಡಲಾಗುತ್ತಿದೆ. ಇದರಲ್ಲಿ ಫಲಾನುಭವಿಯು ತನಗೆ ಬರುವ ನಿರಂತರ ಆದಾಯದಲ್ಲಿ ಸಾಲದ ಪ್ರಮಾಣವನ್ನು ತೀರಿಸಬೇಕಾಗಿದೆ. ಆದರೆ ಫಲಾನುಭವಿಗಳು ಯಾರೂ ಬ್ಯಾಂಕ್ ಅಥವಾ ಹಣಕಾಸು ಸಂಸ್ಥೆಗಳು ನೀಡಿರುವ ಸಾಲವನ್ನು ತೀರಿಸಲು ಮುಂದೆ ಬರುತ್ತಿಲ್ಲ. ಸರ್ಕಾರ ಸಾಲ ವಸೂಲಾತಿಯಲ್ಲಿ ಹಿಂದೆ ಬಿದ್ದಿದ್ದು ಪಗತಿ ಅತೃಪ್ತಿಕರವಾಗಿದೆ. ಇದರಿಂದ ಇತರ ಫಲಾನುಭವಿಗಳಿಗೆ ಪೂರಕ ಸೌಲಭ್ಯಗಳನ್ನು ನೀಡಲು ಸಾಧ್ಯವಾಗುತ್ತಿಲ್ಲ.

**ಸಲಹೆ**

ಫಲಾನುಭವಿಗಳಿಗೆ ಸ್ವತ್ತುಗಳನ್ನು ನೀಡಿದ ತಕ್ಷಣ ಅವರ ಮೇಲೆ ನಿಗಾ ಇಟ್ಟು ಕಾಲಕಾಲಕ್ಕೆ ಬರುವ ಆದಾಯದಲ್ಲಿ ಸಾಲದ ಕಂತನ್ನು ವಸೂಲಿ ಮಾಡಲು ಸಿಬ್ಬಂದಿಯವರನ್ನು ನೇಮಿಸಿ ಅದಕ್ಕೆ ಬೇಕಾದ ಮೂಲಭೂತ ಸೌಕರ್ಯಗಳಾದ ಕಛೇರಿ ವಾಹನ ಇತ್ಯಾದಿ ಸೌಲಭ್ಯಗಳನ್ನು ಒದಗಿಸಿದಾಗ ನಿರೀಕ್ಷಿಸಿದ ಪಮಾಣದಲ್ಲಿ ಸಾಲವನ್ನು ವಸೂಲಿ ಮಾಡಿ ಇತರ ಸೌಕರ್ಯಗಳನ್ನು ಒದಗಿಸುವುದರ ಜೊತೆಗೆ ದುರುಪಯೋಗವನ್ನು ತಡೆಗಟ್ಟಿದಂತಾಗುತ್ತದೆ.

೫. ಈ ಯೋಜನೆಯಲ್ಲಿ ಆಯ್ಕೆಯಾಗುವ ಬಹುಪಾಲು ಫಲಾನುಭವಿಗಳೆಲ್ಲರೂ ಬಡತನ ರೇಖೆಯ ಕೆಳಗೆ ಜೀವನ ಸಾಗಿಸುತ್ತಿರುತ್ತಾರೆ. ಸ್ವತ್ತುಗಳನ್ನು ನಿರ್ವಹಿಸಲು ಇರುವ ಸಾಮರ್ಥ್ಯ ಹಾಗೂ ಅನುಕೂಲಗಳ ಬಗ್ಗೆ ಪರೀಕ್ಷಿಸದೆ ಸ್ವತ್ತುಗಳನ್ನು ನೀಡಿ ದುರುಪಯೋಗಕ್ಕೆ ದಾರಿಮಾಡಿಕೊಡುವುದಲ್ಲದೆ ಹಣದ ನಷ್ಟಕ್ಕೆ ಕಾರಣರಾಗುತ್ತಾರೆ. ಉದಾಹರಣೆಗೆ ೨೦ ೩೦ ಜನತಾ ಮನೆಗಳಲ್ಲಿ ವಾಸವಾಗಿರುವ ಫಲಾನುಭವಿಗಳಿಗೆ ಕುರಿ, ಎಮ್ಮೆ, ಹಸುಗಳನ್ನು ನೀಡುವುದು

ಈ ಪರಿಸ್ಥಿತಿಯಲ್ಲಿ ಅವುಗಳ ಪಾಲನೆಗೆ ಸ್ಥಳಾವಕಾಶವಿಲ್ಲದೆ ಅವುಗಳನ್ನು ಮಾರಿ ಸ್ವತ್ತುಗಳ ದುರುಪಯೋಗಕ್ಕೆ ಕಾರಣರಾಗುತ್ತಾರೆ.

**ಸಲಹೆ**

ಈ ಕಾರಣದಿಂದ ಸ್ವತ್ತುಗಳನ್ನು ನೀಡುವಾಗ ಸ್ವತ್ತುಗಳ ನಿರ್ವಹಣೆಗೆ ಸರಿಯಾದ ಸ್ಥಳಾವಕಾಶ ಇದೆಯೇ ಹಾಗೂ ಅದರಿಂದ ಅವರ ಜೀವನೋಪಾಯಕ್ಕೆ ನಿರಂತರ ಆದಾಯ ಬರುವ ಸಾಧ್ಯತೆಯಿದೆಯೇ ಎಂಬ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸ್ವತ್ತುಗಳನ್ನು ನೀಡಿದಾಗ ಮಾತ್ರ ಸಮಗ್ರ ಅಭಿವೃದ್ಧಿ ಸಾಧ್ಯವಾಗುತ್ತದೆ.

೬. ಈ ಯೋಜನೆಯಡಿಯಲ್ಲಿ ಸ್ವತ್ತುಗಳನ್ನು ನೀಡುವಾಗ ಒಂದೇ ಗ್ರಾಮದ ಎಲ್ಲಾ ಫಲಾನುಭವಿಗಳಿಗೆ ಒಂದೇ ರೀತಿಯ ತರಬೇತಿಯನ್ನು ನೀಡಿ ತರಬೇತಿಯ ಸಹಾಯದಿಂದ ನಿರಂತರ ಆದಾಯ ಪಡೆಯಲು ಸಾಧನ ಸಲಕರಣೆಗಳನ್ನು ನೀಡುವುದು ಮತ್ತೊಂದು ವಿಪರ್ಯಾಸ. ಒಂದು ಗ್ರಾಮದಲ್ಲಿ ಆಯ್ಕೆಯಾಗುವ ಎಲ್ಲಾ ಫಲಾನುಭವಿಗಳಿಗೆ ಹೊಲಿಗೆ, ಬಡಗಿತನ, ಕಮ್ಮಾರಿಕೆ ಇತ್ಯಾದಿಗಳ ತರಬೇತಿ ನೀಡಿ ಅವರು ಸ್ವಯಂ ಉದ್ಯೋಗವನ್ನು ನಡೆಸಲು ತರಬೇತಿಗೆ ಸಂಬಂಧಪಟ್ಟಂತೆ ಸಾಧನ ಸಲಕರಣೆಗಳನ್ನು ನೀಡಿದ್ದು ಇದರಿಂದ ಸಹಜವಾಗಿ ಬೇಡಿಕೆಗಿಂತ ಹೆಚ್ಚು ಕುಶಲ ಕರ್ಮಿಗಳಿದ್ದಾಗ ಇದ್ದಂತಹ ಒಬ್ಬ ಇಬ್ಬರಿಗೆ ಸಿಗುತ್ತಿದ್ದ ಬೇಡಿಕೆಯೂ ಸಿಗದೆ ಎಲ್ಲಾ ತರಬೇತಿದಾರರು ತಮ್ಮ ತರಬೇತಿಯನ್ನು ಮರೆತು ನೀಡಿದ ಸಾಧನ ಸಲಕರಣೆಗಳನ್ನು ಮೂಲೆಗೆ ಎಸೆದು ಅಥವಾ ಮಾರಿ ಯಥಾಸ್ಥಿತಿಯಲ್ಲಿ ಕೃಷಿಕೂಲಿಗಾರರಾಗಿ ಜೀವನ ನಡೆಸುತ್ತಿದ್ದಾರೆ. ಇದರಿಂದ ಈ ಯೋಜನೆ ಕೇವಲ ಗುರಿಯನ್ನು ಸಾಧಿಸಲು ಇರುವ ಯೋಜನೆಯಾಗಿದೆಯೇ ಹೊರತು ಮೂಲತಃ ದಲಿತರ ಅಭಿವೃದ್ಧಿಯಾಗಿರುವುದಿಲ್ಲ.

ಸಲಹೆ

ಅನುಷ್ಠಾನಾಧಿಕಾರಿಗಳು ಇಂತಹ ಸನ್ನಿವೇಶದಲ್ಲಿ ಸ್ವಲ್ಪ ವೈಜ್ಞಾನಿಕವಾಗಿ ಚಿಂತನೆ ನಡೆಸಿ ಯಾವುದೇ ಸ್ವತ್ತು ಅಥವಾ ತರಬೇತಿಯನ್ನು ನೀಡುವಾಗ ಫಲಾನುಭವಿ ವಾಸಿಸುತ್ತಿರುವ ಸುತ್ತಮುತ್ತಲಿನ ಪ್ರದೇಶದಲ್ಲಿ ಆ ವೃತ್ತಿಗೆ ಎಷ್ಟರ ಮಟ್ಟಿಗೆ ಬೇಡಿಕೆಯಿದೆ, ಈಗಾಗಲೇ ಈ ರೀತಿಯ ತರಬೇತಿಯನ್ನು ಎಷ್ಟು ಜನರಿಗೆ ನೀಡಿದೆ ಎಂಬುದರ ಬಗ್ಗೆ ಮೌಲ್ಯಮಾಪನ ಮಾಡಿ ಮನವರಿಕೆಯಾದ ನಂತರ ಸ್ವತ್ತುಗಳನ್ನು ವಿತರಿಸಲು ಪ್ರಾರಂಭಿಸಿದರೆ ಇದರಿಂದ ಫಲಾನುಭವಿಗೆ ನಿರಂತರ ಆದಾಯ ಬರುವ ಸಾಧ್ಯತೆಯ ಜೊತೆಗೆ ಬಡತನ ರೇಖೆಯಿಂದ ಮೇಲೆ ಬರಲು ಸಾಧ್ಯವಾಗುತ್ತದೆ.

ಈ ಯೋಜನೆಯಡಿಯಲ್ಲಿ ಫಲಾನುಭವಿಗಳಿಗೆ ಸ್ವತ್ತುಗಳನ್ನು ನೀಡಿದ್ದು, ಅವುಗಳ ಪೂರಕ ಸೌಲಭ್ಯ ನೀಡದೆ ನೀಡಿರುವ ಸ್ವತ್ತುಗಳು ಸಹ ಪ್ರಯೋಜನಕ್ಕೆ ಬಾರದೆ ನಿಷ್ಪ್ರಯೋಜಕವಾಗಿವೆ. ಉದಾಹರಣೆಗೆ ಭೂ ಒಡೆತನ ಯೋಜನೆಯಡಿಯಲ್ಲಿ ಫಲಾನುಭವಿಗಳಿಗೆ ಭೂಮಿ ನೀಡಿರುವುದು ಸರಿಯಷ್ಟೆ. ಆದರೆ ಅದರ ಅಭಿವೃದ್ಧಿಗೆ ಬೇಕಾಗಿರುವ ನೀರಾವರಿ ವ್ಯವಸ್ಥೆ, ಬೀಜ, ಗೊಬ್ಬರ ಇತ್ಯಾದಿಗಳನ್ನು ನೀಡದೆ ಕೇವಲ ಯೋಜನೆಯನ್ನು ಅನುಷ್ಠಾನಗೊಳಿಸಬೇಕೆಂಬ ಒಂದೇ ಕಾರಣದಿಂದ ಭೂಮಿ ಹಂಚಿರುತ್ತಾರೆ. ಈ ರೀತಿ ಹಂಚಿರುವ ಭೂಮಿಯನ್ನು ಫಲಾನುಭವಿಗಳು

ಬೇಸಾಯ ಮಾಡದೆ ಹಾಗೆಯೇ ಬಿಟ್ಟು ನಗರೀಕರಣ ಪ್ರಭಾವಕ್ಕೊಳಗಾಗಿ ಈ ನಾಡಿನ ಯುವಶಕ್ತಿ ಪೋಲಾಗುತ್ತಿರುವುದು ಎಲ್ಲರಿಗೂ ತಿಳಿದ ವಿಚಾರವಾಗಿದೆ.

**ಸಲಹೆ**

ಇಂತಹ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಾಗ ಇತರೆ ಯೋಜನೆಗಳನ್ನು ಸಹ ರೂಪಿಸಿ ತಕ್ಷಣ ಅನುಷ್ಠಾನ ಗೊಳಿಸಲು ಸಾಧ್ಯವಾಗದಿದ್ದಲ್ಲಿ ಮುಂದುವರೆದ ಕಾರ್ಯಕ್ರಮವನ್ನಾಗಿ ಅನುಷ್ಠಾನಗೊಳಿಸಲು ಪ್ರಾರಂಭದಲ್ಲಿಯೇ ಕ್ರಿಯಾ ಯೋಜನೆಯನ್ನು ತಯಾರಿಸಿದರೆ ಅದು ಯಾವುದೇ ಕಾರಣಕ್ಕೂ ಬದಲಾವಣೆಯಾಗಲು ಸಾಧ್ಯವಿಲ್ಲದೆ ಪ್ರಗತಿಯನ್ನು ಸಾಧಿಸಲು ಸಾಧ್ಯವಾಗುತ್ತದೆ.

೮. ಈ ಯೋಜನೆಯಡಿಯಲ್ಲಿ ಫಲಾನುಭವಿಗಳಿಗೆ ನೀಡುವ ಸಹಾಯಧನವನ್ನು ಬ್ಯಾಂಕುಗಳಲ್ಲಿ ಸಾಲ ಪಡೆಯಲು ಜಮಾಮಾಡಿದಾಗ ಬ್ಯಾಂಕ್ ಅಧಿಕಾರಿಗಳು ಸಹ ಈ ಫಲಾನುಭವಿಗಳ ಹಿಂದಿನ ಬಾಕಿ ಸಾಲವನ್ನು ತೀರಿಸಲು ಸಹಾಯಧನವನ್ನು ಹಳೆಯ ಸಾಲಗಳಿಗೆ ಪರಿವರ್ತಿಸಿಕೊಂಡು ಕಾಗದ ಪತ್ರಗಳಲ್ಲಿ ಯೋಜನೆಗಳನ್ನು ಅನುಷ್ಠಾನಗೊಳಿಸಿದಂತೆ ತೋರಿಸಿಕೊಳ್ಳುತ್ತವೆ. ಇದರಿಂದ ಸಹಜವಾಗಿ ಪರಿಶಿಷ್ಟಜಾತಿಯ ಫಲಾನುಭವಿಗಳಿಗೆ ಇಂತಹ ಎಷ್ಟೇ ಯೋಜನೆಗಳನ್ನು ನೀಡಿದರೂ ಬಡತನ ರೇಖೆಗಿಂತ ಮೇಲಕ್ಕೆ ಬರಲು ಸಾಧ್ಯವಿಲ್ಲ.

**ಸಲಹೆ**

ಈ ವಿಷಯದಲ್ಲಿ ಅನುಷ್ಠಾನಾಧಿಕಾರಿಗಳು ಬಹಳ ಎಚ್ಚರಿಕೆಯಿಂದ ಫಲಾನುಭವಿಗಳನ್ನು ಆಯ್ಕೆ ಮಾಡಿ ಸ್ವತ್ತುಗಳು ಆತನ ಕೈಸೇರಿ ನಿರಂತರ ಆದಾಯ ಬರುವವರೆಗೂ ಎಚ್ಚರಿಕೆಯಿಂದ ನಿಗಾ ಇಟ್ಟಿರಬೇಕು.

೯. ಈ ಯೋಜನೆಯಡಿಯಲ್ಲಿ ಫಲಾನುಭವಿಗಳನ್ನು ಆಯ್ಕೆಮಾಡುವಾಗ ಕೇವಲ ಒಂದೇ ಸಮುದಾಯದ ಜನರನ್ನು ಆಯ್ಕೆಮಾಡಿರುವುದು ಆಶ್ಚರ್ಯಕರ ಹಾಗೂ ದುರಾದೃಷ್ಟಕರ. ಇದರಿಂದ ಇತರೆ ಸಮುದಾಯಗಳು ನಿರ್ಲಕ್ಷಿತರಾಗಿ ಅಭಿವೃದ್ಧಿಹೊಂದಲು ಸಾಧ್ಯವಾಗಿರುವುದಿಲ್ಲ.

**ಸಲಹೆ**

ಅನುಷ್ಠಾನಾಧಿಕಾರಿಗಳು ಫಲಾನುಭವಿಗಳ ಆಯ್ಕೆ ಸಂದರ್ಭ ಬಂದಾಗ ಕ್ಷೇತ್ರದಲ್ಲಿ ಲಭ್ಯವಿರುವ ಎಲ್ಲಾ ಸಮುದಾಯಗಳ ಮಾಹಿತಿಯನ್ನು ಪಡೆದುಕೊಂಡು ಜನಸಂಖ್ಯೆಗೆ ಅನುಗುಣವಾಗಿ ಗುರಿಗಳನ್ನು ನಿಗದಿಪಡಿಸಿ ಆಯ್ಕೆ ಮಾಡಿದ್ದಲ್ಲಿ ಎಲ್ಲರೂ ಅಭಿವೃದ್ಧಿ ಹೊಂದಲು ಸಾಧ್ಯ.

೧೦. ಈ ಯೋಜನೆ ಸಾಕಷ್ಟು ಪ್ರಗತಿಯನ್ನು ಸಾಧಿಸದೇ ಇರುವುದಕ್ಕೆ ಅನುಷ್ಠಾನಗೊಳಿಸುವ ಅಧಿಕಾರಿಗಳಲ್ಲಿರುವ ನೈಪುಣ್ಯತೆಯ ಕೊರತೆ. ಹೇಗೆ ಮಾಡಬೇಕು ಎಂಬುದರ ಬಗ್ಗೆ ಹೊಂದಿರುವ ಜ್ಞಾನ. ಹೇಗೆ ಬಳಸಿಕೊಳ್ಳಬೇಕು. ಹೇಗೆ ಗುರಿಯನ್ನು ಸಾಧಿಸಬೇಕು ಎಂಬುದರ ಬಗೆಗಿನ ಪರಿಣಿತಿ. ನೈಪುಣ್ಯಗಳಲ್ಲಿ ಮೂರು ವಿಧಾನಗಳಿವೆ.

೧. ತಾಂತ್ರಿಕ ನೈಪುಣ್ಯತೆ

೨. ವ್ಯಕ್ತಿ ನೈಪುಣ್ಯತೆ

೩. ಸ್ಪಂದನಾ ಶೀಲ ನೈಪುಣ್ಯತೆ

ಸಲಹೆ

ಅಧಿಕಾರಿಗಳು ತಮ್ಮ ಕೆಲಸ ಕಾರ್ಯಗಳ ಸಂದರ್ಭ ಸನ್ನಿವೇಶಗಳಿಗೆ ತಕ್ಕಂತೆ ಸ್ಪಂದಿಸುವ ಗುಣವನ್ನು ಬಳಿಸಿಕೊಳ್ಳುವುದರತ್ತ ಹೆಚ್ಚಿನ ಗಮನ ನೀಡಿ ತಮ್ಮ ನೈಪುಣ್ಯತೆಗಳನ್ನು ಹೆಚ್ಚಿಸಿಕೊಳ್ಳುವುದು ಅಗತ್ಯ ಸಮಸ್ಯೆಗಳನ್ನು ವಿಷಯಗಳನ್ನು ಉದಾರದೃಷ್ಟಿಯಿಂದ ನೋಡುವುದು ಜನರಲ್ಲಿ ಬೆರೆತು ಕೆಲಸ ಮಾಡುವುದು ಜೊತೆಗೂಡಿ ಕೆಲಸಮಾಡುವಂತೆ ಪ್ರೇರೇಪಣೆ ನೀಡುವುದು.

೧೨. ಈ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಅಧಿಕಾರಿಗಳಲ್ಲಿರುವ ಮನೋಭಾವ ಒಂದು ಬಾಧಕವಾಗಿದೆ. ಈ ಕೆಲಸವನ್ನು ಏಕೆ ಮಾಡಬೇಕು ಎಂಬ ಮನೋಭಾವ ಅವರಲ್ಲಿ ತಾಂಡವವಾಡುತ್ತಿರುವುದರಿಂದ ಈ ಯೋಜನೆಯು ಸಮರ್ಪಕವಾಗಿ ಅನುಷ್ಠಾನಗೊಳಿಸಲಾಗುತ್ತಿಲ್ಲ.

ಸಲಹೆ

ಅಧಿಕಾರಿಗಳು ಸರ್ಕಾರ ನಮಗೆ ಸಂಬಳ ಕೊಡುತ್ತಿದೆ. ಅದಕ್ಕೋಸ್ಕರ ಕೆಲಸಮಾಡಬೇಕಾಗಿದೆ. ನಾನು ಯಾರಿಗೋಸ್ಕರ ಕೆಲಸಮಾಡುತ್ತಿದ್ದೇನೆಯೋ ಅವರ ಜೀವನದಲ್ಲಿ ಸುಧಾರಣೆಯಾಗುತ್ತಿದೆ ಎಂದು ಅಧಿಕಾರಿ ಭಾವಿಸುವುದೇ ಮನೋಭಾವ. ಉತ್ತಮ ಮನೋಭಾವವು ಈ ಕೆಳಕಂಡ ಲಕ್ಷಣವನ್ನು ಹೊಂದಿರಬೇಕು.

೧. ಸೃಜನಶೀಲತೆ ೨. ಒಳ್ಳೆಯದನ್ನೇ ಮಾಡುವುದಕ್ಕೆ ಶ್ರಮಿಸುವುದು. ೩. ವಿಶೇಷವಾದುದ್ದನ್ನು ಸಾಧಿಸುವುದು ೪. ಪಂಚಸೂತ್ರ ಅ. ಶಿಸ್ತು, ಆ. ಶ್ರದ್ಧೆ ಇ. ಸಂಕಲ್ಪ ಈ. ಅರ್ಪಣಾಮನೋಭಾವ್ದ ಉ. ಮಾರ್ಗದರ್ಶನದ ಅರಿವು.

೫. ಸರ್ಕಾರ ನೀಡಿರುವ ಕೆಲಸವನ್ನು ಇಷ್ಟ ಪಟ್ಟುಮಾಡುವುದು ೬. ಬದ್ಧರಾಗಿರುವುದು ಈ ಎಲ್ಲಾ ಗುಣ ವಿಶೇಷಗಳು ಮಹತ್ವವಾದರೂ ಒಬ್ಬ ವ್ಯಕ್ತಿಯನ್ನು ಬಹಳ ಸಮರ್ಥನಾಗಿ ಮತ್ತು ಇತರರಿಗೆ ಹಾಗೂ ಸಂಸ್ಥೆಗೆ ಉಪಯುಕ್ತನನ್ನಾಗಿ ರೂಪಿಸುವಲ್ಲಿ ಮನೋಭಾವದ ಪಾತ್ರ ಬಹಳ ಮಹತ್ವಪೂರ್ಣವಾದದ್ದು.

೧೩. ದಿನವೆಲ್ಲಾ ವಾರವೆಲ್ಲಾ ತಿಂಗಳೆಲ್ಲಾವರ್ಷವೆಲ್ಲಾ ಮಾಡಿದ್ದನ್ನೇ ಮಾಡಿದ ರೀತಿಯಲ್ಲಿ ಮಾಡಿ ಬೇರೆ ಬೇರೆ ಫಲದ ನಿರೀಕ್ಷೆಯಲ್ಲಿರುವುದು ಅವಿವೇಕತನ. ಈ ವಾಕ್ಯಗಳು ಅನುಷ್ಠಾನಾಧಿಕಾರಿಗಳ ಕಾರ್ಯವೈಖರಿಗೆ ತಕ್ಕದ್ದಾಗಿದೆ. ಈ ಯೋಜನೆಗಳನ್ನು ಅನುಷ್ಠಾನಗೊಳಿಸಿದ ರೀತಿಯಲ್ಲಿ ಅನುಷ್ಠಾನಗೊಳಿಸಿ ಬೇರೆ ಬೇರೆ ಫಲಗಳನ್ನು ಪಡೆಯಲು ಸಾಧ್ಯವಿಲ್ಲ.

ಸಲಹೆ

ಅಧಿಕಾರಿಗಳು ಬೇರೆ ಬೇರೆ ಫಲಿತಾಂಶಗಳನ್ನು ನಿರೀಕ್ಷಿಸಬೇಕಾದರೆ ಅವರ ಕಿಯೆಯೂ ಸಹ ಬೇರೆ ಬೇರೆ ರೀತಿಯಲ್ಲಿರಬೇಕು. ಬೇರೆ ಬೇರೆ ಪ್ರಯತ್ನಗಳನ್ನು ಮಾಡಬೇಕು. ಅಂದರೆ ಅವರ ಅರಿವು ಮತ್ತು ಗ್ರಹಿಕೆಗಳು ವಿಧಿವತ್ತಾಗಿರಬೇಕು.

೧೪. ಈ ಯೋಜನೆಯಡಿಯಲ್ಲಿ ನೀಡಿರುವ ಸ್ವತ್ತುಗಳ ಮೇಲಿನ ಸಾಲದ ವಸೂಲಾತಿ ತುಂಬಾ ಕಡಿಮೆ ಪ್ರಮಾಣದಲ್ಲಿ ಆಗುತ್ತಿರುವುದು ಒಂದು ಬಾಧಕವಾಗಿದೆ. ಇದರಿಂದ ಬೇರೆ ಯೋಜನೆಗಳನ್ನು ರೂಪಿಸಲು ಸಾಧ್ಯನಾಗುತ್ತಿಲ್ಲ.

ಸಲಹೆ

ಸಾಲವಸೂಲಾತಿಗಾಗಿ ಯೋಜಿತ, ವ್ಯವಸ್ಥಿತ ಮತ್ತು ಪ್ರಾಮಾಣಿಕ ಪ್ರಯತ್ನಗಳನ್ನು ಕೈಗೊಳ್ಳಬೇಕಾಗಿದೆ. ಈ ರೀತಿಯ ವಸೂಲಾತಿ ಇತರೆ ಯೋಜನೆಯ ಜೀವಾಳವಾಗಿದೆ.

ವಸೂಲಾತಿ ಉತ್ತಮವಾದರೆ ಈ ಯೋಜನೆಯಡಿಯಲ್ಲಿ ಸರ್ಕಾರವು ಇನ್ನೂ ಹೆಚ್ಚು ಹೆಚ್ಚು ಫಲಾನುಭವಿಗಳಿಗೆ ಆರ್ಥಿಕ ನೆರವನ್ನು ನೀಡಲು ಉತ್ತಮ ಹೊಸ ಯೋಜನೆಗಳನ್ನು ಅನುಷ್ಠಾನಗೊಳಿಸಲು ಸಾಧ್ಯವಾಗುತ್ತದೆ.

ಈ ಯೋಜನೆಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಸಾಧ್ಯವಾಗದೇ ಇರುವುದಕ್ಕೆ ಇರುವ ಇತರೆ ಅಡೆತಡೆಗಳು ಮತ್ತು ಸಮಸ್ಯೆಗಳನ್ನು ಸಂಕ್ಷಿಪ್ತವಾಗಿ ಪಟ್ಟಿರೂಪದಲ್ಲಿ ವಿವರಿಸಲಾಗಿದೆ.

೧. ಫಲಾನುಭವಿಗಳ ಆಯ್ಕೆಯ ವಿಧಾನ
೨. ಗುರಿನಿಗದಿಯಿಲ್ಲದ ಯೋಜನೆಗಳು
೩. ಮಧ್ಯವರ್ತಿಗಳ ಹಾವಳಿ
೪. ಸಮಾಜ ಕಾರ್ಯಕರ್ತರ ಹಸ್ತಕ್ಷೇಪ
೫. ಅಸಮರ್ಥ ಯೋಜನೆಗಳಿಗೆ ಹಣಕಾಸಿನ ನೆರವು
೬. ರಾಜಕೀಯ ಪ್ರಭಾವ
೭. ಸುಸ್ತಿದಾರರ ಮೇಲೆ ಸೂಕ್ತ ಕ್ರಮ ಕೈಗೊಳ್ಳದೇ ಇರುವುದು
೮. ಫಲಾನುಭವಿಗಳಿಂದ ಆಸ್ತಿಪಾಸ್ತಿಗಳ ದುರುಪಯೋಗ
೯. ಯೋಜನೆಗೆ ತಕ್ಕಂತೆ ಅನುದಾನದ ಕೊರತೆ
೧೦. ಫಲಾನುಭವಿಗಳಲ್ಲಿ ಪ್ರೇರಣೆಯ ಕೊರತೆ
೧೧. ಯೋಜನೆಗಳ ಬಗ್ಗೆ ತಿಳುವಳಿಕೆಯಿಲ್ಲದೇ ಇರುವುದು.
೧೨. ಫಲಾನುಭವಿಗಳಲ್ಲಿ ಪ್ರಾಮಾಣೀಕತೆ ಇಲ್ಲದೆ ಇರುವುದು
೧೩. ಉದ್ದೇಶಪೂರ್ವಕವಾಗಿ ಸಾಲತೀರಿಸದೇ ಇರುವುದು
೧೪. ಈ ಯೋಜನೆಯಲ್ಲಿ ಹಳೆಯ ಕಾರ್ಯಕ್ರಮಗಳನ್ನು ಮುಂದುವರೆಸುವುದು
೧೫. ಬರ ಪರಿಸ್ಥಿತಿಗಳು
೧೬. ಮಾರುಕಟ್ಟೆಗಳ ಸಮಸ್ಯೆ
೧೭. ಭ್ರಷ್ಟಾಚಾರ
೧೮. ಯೋಜನೆಯ ಘಟಕದ ವೆಚ್ಚವನ್ನು ಸರಿಯಾಗಿ ನಿಗದಿ ಮಾಡದೇ ಇರುವುದು
೧೯. ಸಕಾಲದಲ್ಲಿ ಅನುದಾನವನ್ನು ಬಿಡುಗಡೆ ಮಾಡದೇ ಇರುವುದು.
೨೦. ಇತರೇ ಇಲಾಖೆಗಳೊಂದಿಗೆ ಸಮನ್ವಯವಿಲ್ಲದಿರುವುದು
೨೧. ಸುಳ್ಳು ಜಾತಿಪ್ರಮಾಣಪತ್ರ
೨೨. ವಸೂಲಿ ಅಧಿಕಾರ ಕೊಡುವ ಕಾಯ್ದೆ ಇಲ್ಲದಿರುವುದು
೨೩. ವಿಶ್ವಬ್ಯಾಂಕ್ ನೆರವನ್ನು ಉಪಯೋಗಿಸಿಕೊಳ್ಳದೇ ಇರುವುದು
೨೪. ಅದೇ ಫಲಾನುಭವಿಗೆ ಅಥವಾ ಅದೇ ಕುಟುಂಬಕ್ಕೆ ಒಂದಕ್ಕಿಂತ ಹೆಚ್ಚು ಸೌಲತ್ತುಗಳನ್ನು ನೀಡುವುದು
೨೫. ಘಟಕದ ವೆಚ್ಚಗಳನ್ನು ಪರಿಷ್ಕರಿಸದೇ ಇರುವುದು
೨೬. ನೀಡಿರುವ ಸ್ವತ್ತುಗಳನ್ನು ಕಾಲಕಾಲಕ್ಕೆ ಮೌಲ್ಯಮಾಪನ ಮಾಡದೇ ಇರುವುದು

ಈ ಮೇಲೆ ತಿಳಿಸಿರುವ ಅಂಶಗಳು ಸಮಸ್ಯೆಗಳೆಂದು ಮತ್ತು ಅಡಚಣೆಗಳೆಂದು ಗುರುತಿಸಿದ್ದು, ಅವುಗಳಲ್ಲಿ ಕೆಲವನ್ನು ತಾಲೂಕು ಮಟ್ಟದಲ್ಲಿ, ಜಿಲ್ಲಾಮಟ್ಟದಲ್ಲಿ, ರಾಜ್ಯಮಟ್ಟದಲ್ಲಿ ಬಗೆಹರಿಸಿಕೊಳ್ಳಬಹುದಾಗಿದೆ. ಮತ್ತೆ ಕೆಲವು ಸಮಸ್ಯೆಗಳಿಗೆ ಯಾವುದೇ ಪರಿಹಾರವಿಲ್ಲದೆ ಅವುಗಳನ್ನು ಅನಿವಾರ್ಯವಾಗಿ ಸಹಿಸಿಕೊಳ್ಳಬೇಕಾಗಿದೆ.

೧೬. ಯೋಜನೆಯಡಿಯಲ್ಲಿ ನೀಡಿದ ಸ್ವತ್ತುಗಳ ಮೇಲೆ ನೀಡಿರುವ ಸಾಲವನ್ನು

ವಸೂಲಿಗಾಗಿ ಈ ಸಲಹೆಗಳನ್ನು ಸೂಚಿಸಲಾಗಿದೆ.

೧. ನಿಜವಾದ ಫಲಾನುಭವಿಗಳಿಗೆ ಸಾಲಮಂಜೂರು ಮಾಡುವುದು.

೨. ಫಲಾನುಭವಿಗಳಿಗೆ ತಿಳುವಳಿಕೆ ನೀಡುವುದು

೩. ಫಲಾನುಭವಿಗಳನ್ನು ನಿಯತವಾಗಿ ಸಂಪರ್ಕಿಸುವುದು

೪. ಫಲಾನುಭವಿಗಳಿಗೆ ಸಾಲದ ನಿಗದಿಪಟ್ಟಿಯನ್ನು ನೀಡುವುದು

೫. ಕಾನೂನಿನ ಪರಿಣಾಮಗಳ ಬಗ್ಗೆ ತಿಳುವಳಿಕೆ ನೀಡುವುದು

೬. ಉದ್ದೇಶ ಪೂರ್ವಕ ಸುಸ್ತಿದಾರರನ್ನು ಕಪ್ಪುಪಟ್ಟಿಲ್ಲಿ ಸೇರಿಸುವುದು

೭. ಸುಸ್ತಿದಾರರ ಹೆಸರುಗಳನ್ನು ಸ್ಥಳೀಯ ಸುದ್ದಿಪತಿಕೆಯಲ್ಲಿ ಪಕಟಗೊಳಿಸುವುದು

೮. ಆರ್ಥಿಕ ವರ್ಷದ ಮೊದಲನೆಯ ತಿಂಗಳಿನಿಂದಲೇ ವಸೂಲಿ ಪ್ರಕ್ರಿಯೆಯನ್ನು ಪಾರಂಭಿಸುವುದು.

೯. ಸ್ವತ್ತುಗಳನ್ನು ಸರಿಯಾಗಿ ಉಪಯೋಗಿಸಿಕೊಂಡಿರುವ ಬಗ್ಗೆ ಖಾತರಿ ಪಡಿಸಿಕೊಳ್ಳುವುದು.

೧೦. ಸುಸ್ತಿದಾರರ ಮೇಲೆ ಕಠಿಣ ಕಮ ಕೈಗೊಂಡರೆ ಬೇರೆಯವರಿಗೆ ಸಕಾಲಿಕ ಸಾಲ ಮರುಪಾವತಿಯ ಬಗ್ಗೆ ತಿಳುವಳಿಕೆ ಉಂಟಾಗುತ್ತದೆ.

೧೭. ಈ ಯೋಜನೆಯು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಅಧಿಕಾರಿ ಮತ್ತು ಸಿಬ್ಬಂದಿಗಳಲ್ಲಿ ಸಹ ಕೆಲವು  ಕರ್ತವ್ಯಗಳು ಮತ್ತು ಜವಾಬ್ದಾರಿ ಇರಬೇಕಾಗಿರುತ್ತದೆ.

೧. ಫಲಾನುಭವಿಗಳ ಮತ್ತು ಹಣಕಾಸು ಸಂಸ್ಥೆಗಳ ನಡುವೆ ಅಧಿಕಾರಿಯು ಒಬ್ಬ ಸಂಪರ್ಕಾಧಿಕಾರಿಯಂತೆ ಕಾರ್ಯ ನಿರ್ವಹಿಸಬೇಕಾಗಿದೆ.

೨. ರೂಪಿಸಿರುವ ಕಾರ್ಯವಿಧಾನಗಳನ್ನು ಸರಿಯಾಗಿ ಪಾಲಿಸಬೇಕಾಗಿದೆ.

೩. ತುಳಿತಕ್ಕೆ ಒಳಗಾಗಿರುವ ಜನರ ಆರ್ಥಿಕ ಏಳಿಗೆಯನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕಾಗಿದೆ.

೪. ಅಧಿಕಾರಿಗಳು ಫಲಾನುಭವಿಗಳಿಗೆ ಗೆಳೆಯರಾಗಿ, ನೀತಿ ಬೋಧಕರಾಗಿ ಮಾರ್ಗದರ್ಶಕರಾಗಿರಬೇಕಾಗಿದೆ.

೫. ಸರ್ಕಾರಕ್ಕೆ ಹೊಣೆಗಾರರಾಗಿರಬೇಕಾಗಿದೆ.

೬. ನಿರ್ಗತಿಕ ಫಲಾನುಭವಿಗಳನ್ನು ಗುರುತಿಸಬೇಕಾಗಿದೆ.

೭. ಮಧ್ಯವರ್ತಿಗಳ ಕಾಟವನ್ನು ತಪ್ಪಿಸಬೇಕಾಗಿದೆ.

೮. ಸರ್ಕಾರ ನೀಡಿರುವ ಗುರಿಗಳನ್ನು ಸಾಧಿಸಬೇಕಾಗಿದೆ.

೯. ಕಾರ್ಯಕಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬೇಕಾಗಿದೆ.

೧೦. ಫಲಾನುಭವಿಗಳಿಗೆ ಬಡತನದ ರೇಖೆಯನ್ನು ದಾಟಲು ನೆರವು ನೀಡಬೇಕಾಗಿದೆ.

೧೧. ಸ್ವತ್ತುಗಳ ದುರುಪಯೋಗವನ್ನು ತಡೆಗಟ್ಟಬೇಕಾಗಿದೆ.

೧೨. ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಡಬೇಕಾಗಿದೆ.

೧೩. ಫಲಾನುಭವಿಗಳಲ್ಲಿ ನೈತಿಕ ಸ್ಥೈರ್ಯವನ್ನುಂಟುಮಾಡಬೇಕಾಗಿದೆ.

೧೪. ಅಸ್ಪೃಶ್ಯತೆ ಮತ್ತು ದೌರ್ಜನ್ಯ ಹೋಗಲಾಡಿಸುವುದು

೧೫. ನಿರುದ್ಯೋಗ ಸಮಸ್ಯೆಯನ್ನು ಹೋಗಲಾಡಿಸಬೇಕಾಗಿದೆ.

೧೬. ಮುಂದಿನ ಪೀಳಿಗೆಗೂ ಅನುಕೂಲವಾಗುವಂತಹ ಸಹಾಯವನ್ನು ಜನರಿಗೆ ಮಾಡಬೇಕು.

**ಪರಿಹಾರೋಪಾಯಗಳು**

೧. ಪರಿಶಿಷ್ಟಜಾತಿ ಜನರ ಸರ್ವತೋಮುಖ ಬೆಳವಣಿಗೆಯ ದೃಷ್ಟಿಯಿಂದ ಇರುವ ವ್ಯವಸ್ಥೆ ಹಾಗೂ ಕಾರ್ಯಕ್ರಮಗಳ ಬಗ್ಗೆ ಅವರ ಜೀವನ ಮಟ್ಟ ಸುಧಾರಿಸಿಕೊಳ್ಳುವ ವಿಚಾರವಾಗಿ

ಶೈಕ್ಷಣಿಕ ಗುಣಮಟ್ಟವನ್ನು ಹೆಚ್ಚಿಸಬೇಕಾಗಿದೆ. ಆದರೆ ಪರಿಶಿಷ್ಟ ಜಾತಿಯವರು ಕಡ್ಡಾಯವಾಗಿ ಶಾಲೆಗೆ ಹೋಗುವಂತೆ ಅವರ ಮನವೊಲಿಸುವಂತಹ ಕಾರ್ಯಕ್ರಮಗಳನ್ನು ರೂಪಿಸಬೇಕು.

೨. ಶೈಕ್ಷಣಿಕ ಬೆಳವಣಿಗೆಗೆ ಅನುಕೂಲವಾಗುವಂತೆ ಅವರ ಜನಸಂಖ್ಯಾ ಏರಿಕೆಗೆ ಅನುಗುಣವಾಗಿ ವಿದ್ಯಾರ್ಥಿನಿಲಯ, ವಸತಿಶಾಲೆಗಳನ್ನು ಹೆಚ್ಚಾಗಿ ಪ್ರಾರಂಭಿಸಬೇಕು.

೩. ಕೆಲವು ಪರಿಶಿಷ್ಟಜಾತಿಯ ಜನರು ತಮ್ಮ ಜೀವನೋಪಾಯಕ್ಕಾಗಿ ಬೇರೆ ಬೇರೆ ಸ್ಥಳಕ್ಕೆ ಗುಳೆ ಹೋಗುವುದನ್ನು ತಡೆಗಟ್ಟಬೇಕು. ಅದಕ್ಕಾಗಿ ಸ್ಥಳೀಯ ಉದ್ಯೋಗಾವಕಾಶಗಳನ್ನು ಸೃಷ್ಟಿಸಬೇಕು.

೪. ಪರಿಶಿಷ್ಟಜಾತಿಯ ಜನಸಂಖ್ಯೆಯ ಏರಿಕೆಗೆ ಅನುಗುಣವಾಗಿ ವಸತಿ ಸೌಕರ್ಯಗಳನ್ನು ಒದಗಿಸಬೇಕು.

೫. ಪರಿಶಿಷ್ಟಜಾತಿಯ ಜನರು ವಾಸಿಸುವ ಕಾಲೊನಿಗಳಿಗೆ ಹೆಚ್ಚಿನ ಪ್ರಮಾಣದ ಮೂಲಭೂತ ಸೌಕರ್ಯಗಳನ್ನು ಹೆಚ್ಚಿಸುವತ್ತ ಜಿಲ್ಲಾಪಂಚಾಯತ್ ಇಂಜನಿಯರಿಂಗ್ ವಿಭಾಗವನ್ನು ಸದೃಢಗೊಳಿಸಬೇಕು.

೬. ಯೋಜನೆಗಳ ಸದುಪಯೋಗ ಪಡಿಸಕೊಳ್ಳಲು ಆ ಜನರಿಗೆ ಯೋಜನೆಗಳ ಅರಿವು ಮೂಡಿಸಬೇಕು.

೭. ಶಿಕ್ಷಣ ಸಂಸ್ಥೆಗಳಲ್ಲಿ ಹಾಗೂ ನೇಮಕಾತಿಗಳಲ್ಲಿ ಹೆಚ್ಚಿನದಾಗಿ ಮೀಸಲಾತಿ ಸೌಕರ್ಯಗಳನ್ನು ಅವರ ಜನಸಂಖ್ಯೆಯ ಏರಿಕೆಯ ಪ್ರಮಾಣಕ್ಕನುಗುಣವಾಗಿ ಹೆಚ್ಚಿಸಬೇಕು.

೮. ಅಂಧಾನುಕರಣೆಗಳಿಂದ ತಮ್ಮ ಆದಾಯವನ್ನೆಲ್ಲ ಈ ಜನರು ವೃಥಾ ಪೋಲು ಮಾಡುವುದರಿಂದ ಸ್ವತ್ತುಗಳು ದುರುಪಯೋಗವಾಗುತ್ತಿದ್ದು ಈ ಬಗ್ಗೆ ಶಾಸನ ರೂಪಿಸಿ ನಿರ್ಬಂಧಿಸಬೇಕು.

೯. ಅಸ್ಪೃಶ್ಯತೆಯ ಆಚರಣೆಯಿಂದಾಗಿ ದೌರ್ಜನ್ಯ ಪ್ರಕರಣಗಳು ಹೆಚ್ಚಾಗಿರುತ್ತವೆ. ಇವು ಸಮಾಜದ ಬೆಳವಣಿಗೆಗೆ ಅಡ್ಡಿಯಾಗಿರುವುದರಿಂದ ಈ ಬಗ್ಗೆ ಹೆಚ್ಚಿನ ಅರಿವು ಮೂಡಿಸುವ ಕಾರ್ಯಕ್ರಮಗಳು ವ್ಯಾಪಕವಾಗಿ ನಡೆಯಬೇಕು.

೧೦. ಪರಿಶಿಷ್ಟಜಾತಿಯವರ ಉಪಜಾತಿಗಳಲ್ಲೇ ಪರಸ್ಪರ ಹೊಂದಾಣಿಕೆಯಿರುವುದಿಲ್ಲ. ಈ ಬಗ್ಗೆ ಅವರಲ್ಲಿ ಸಾಮಾರಸ್ಯ ಮೂಡಿಸುವುದರತ್ತ ಗಮನಹರಿಸಬೇಕು.

೧೧. ಮಧ್ಯಸ್ಥಗಾರರ ಪ್ರವೇಶವಾಗದಂತೆ ಜಾಗೃತಿವಹಿಸಿದಲ್ಲಿ ಸ್ವತ್ತುಗಳು ದುರುಪಯೋಗವಾಗದಂತೆ ತಡೆಯಬಹುದಾಗಿದೆ.

ಹೀಗೆ ವಿಶೇಷ ಘಟಕ ಯೋಜನೆಯನ್ನು ಅನುಷ್ಠಾನಗೊಳಿಸಲು ಇರುವ ಸಾಧಕ ಬಾಧಕಗಳು ಹಾಗೂ ಪರಿಹಾರೋಪಾಯಗಳನ್ನು ಈ ಅಧ್ಯಯನದಲ್ಲಿ ವಿವರಿಸಲಾಗಿರುತ್ತದೆ.

## ಅಧ್ಯಾಯ ಏಳು

## ಆಧುನಿಕತೆ ಮತ್ತು ದಲಿತರ ಸ್ಥಿತ್ಯಂತರಗಳು

ಅ) ಸ್ವಾತಂತ್ರ ಪೂರ್ವದಲ್ಲಿ ದಲಿತರ ಸ್ಥಿತಿಗತಿಗಳು.

ಆ) ಸ್ವಾತಂತ್ರ ನಂತರದಲ್ಲಿ ದಲಿತರ ಸ್ಥಿತಿಗತಿಗಳು.

ಇ) ಧರ್ಮ, ಮತಾಂತರ ಮತ್ತು ದಲಿತರ ಸ್ಥಿತ್ಯಂತರಗಳು.

ಈ) ಮೀಸಲಾತಿ ಮತ್ತು ಸ್ಥಿತ್ಯಂತರ.

ಉ) ಜಾಗತೀಕರಣ ಮತ್ತು ಸ್ಥಿತ್ಯಂತರ.

# ಅಧ್ಯಾಯ ಏಳು

# ಆಧುನಿಕತೆ ಮತ್ತು ದಲಿತರ ಸ್ಥಿತ್ಯಂತರಗಳು

## ಅ. ಸ್ವಾತಂತ್ರ್ಯ ಪೂರ್ವದಲ್ಲಿ ದಲಿತರ ಸ್ಥಿತಿ ಗತಿಗಳು

ಶತಮಾನಗಳಿಂದ ಶೋಷಿಸಲ್ಪಟ್ಟು ಸಮಾಜದಲ್ಲಿ ಅತಿ ನಿಕೃಷ್ಟ ಬದುಕು ಸಾಗಿಸುತ್ತಿರುವ ದಲಿತರ ಸ್ಥಿತಿಗತಿಗಳು ಸ್ವಾತಂತ್ರ್ಯ ಪೂರ್ವವದಲ್ಲಿ ಹಾಗೂ ಸ್ವಾತಂತ್ರ್ಯ ನಂತರ ಹೇಗೆ ಏರು ಪೇರು, ಏಳು ಬೀಳುಗಳನ್ನು ಕಂಡಿವೆ ಎಂಬುದನ್ನು ವಿವರವಾಗಿ ವಿಶ್ಲೇಷಿಸುವ ಅಗತ್ಯವಿದೆ. ಬ್ರಿಟೀಷರ ಆಳ್ವಿಕೆ ಅಂತೆಯೇ ಅಂದಿನ ರಾಜರುಗಳ ಆಳ್ವಿಕೆ ನಂತರ ಬಂದ ಸರ್ಕಾರಗಳು ದಲಿತರ ಸ್ಥಿತಿಗಳ ಸುಧಾರಣೆಗೆ ಕ್ರಮ ಕೈಗೊಂಡ ವಿವರಗಳನ್ನು ಮುಂದಿನಂತೆ ವಿವೇಚಿಸಲಾಗಿದೆ.

### ೧. ಬ್ರಿಟೀಷರು ಮತ್ತು ಸಾಮಾಜಿಕ ನ್ಯಾಯ

೧೭೫೭-೧೮೫೮ ರ ಅವಧಿಯಲ್ಲಿ ಬ್ರಿಟೀಷರ ಪ್ರಭಾವದಿಂದ ನಮ್ಮ ದೇಶದ ಸಾಮಾಜಿಕ ಆರ್ಥಿಕ, ಧಾರ್ಮಿಕ ಹಾಗೂ ಶೈಕ್ಷಣಿಕ ರಂಗದಲ್ಲಿ ಉಲ್ಲೇಖನಾರ್ಹ ಸುಧಾರಣೆಗಳಾಗಿವೆ.

ನಮ್ಮ ದೇಶಕ್ಕೆ ಆಗಮಿಸಿದ ಪ್ರಪ್ರಥಮ ಬ್ರಿಟೀಷ್ ರಾಯಭಾರಿ ವಾರೆನ್ ಹೇಸ್ಟಿಂಗ್ಸ್ ೧೭೭೩ ರಲ್ಲಿ ಸ್ಥಳೀಯರಿಗೆ ಸೈನಿಕ ಹುದ್ದೆಯಲ್ಲಿ ಭರ್ತಿಯಾಗುವ ಅವಕಾಶ ಕಲ್ಪಿಸಿದನು. ಇದರಿಂದ ತಲಾತಲಾಂತರದಿಂದ ಸಾಮಾಜಿಕ ಆರ್ಥಿಕ ದೌರ್ಜನ್ಯಕ್ಕೆ ಒಳಪಟ್ಟ ದಲಿತರಿಗೆ ಸುಧಾರಿತ ಹುದ್ದೆಗಳು ದೊರೆತವು. ಅವರಿಗೆ ದೇಶ ಸಂರಕ್ಷಣೆಯ ಅವಕಾಶ ಒದಗಿ ತಮ್ಮ ಶಕ್ತಿ ಸಾಮರ್ಥ್ಯ ಪ್ರದರ್ಶಿಸಲು ಮತ್ತು ಕನಿಷ್ಠ ಸ್ಥಾನಮಾನ ಗಳಿಸಲು ಅನುಕೂಲವಾಯಿತು. ಅದುವರೆವಿಗೂ ಅವರಿಗಾಗಿ ತುಚ್ಛ ಕಾಯಕಗಳಾದ ಮಲ ಹೊರುವ, ಪಾದರಕ್ಷೆ ತಯಾರಿಸುವ ಇತ್ಯಾದಿ ಕನಿಷ್ಠತಮ ಕಾಯಕಗಳೇ ನಿರ್ಧರಿತವಾಗಿದ್ದವು. ಅವರು ಮೇಲೇಳಲು ಈ ಸಂಸ್ಕೃತಿ ಸಾವಿರಾರು ವರ್ಷಗಳಾದರೂ ಅವಕಾಶ ನೀಡಿರಲಿಲ್ಲ.

ಲಾರ್ಡ್‌ವೆಲ್ಲೆಸ್ಲಿ ಕಾಲದಲ್ಲಿಯೂ ಇಂತಹ ಅವಕಾಶಗಳು ಶೋಷಿತ ವರ್ಗಕ್ಕೆ ದೊರೆತವು. ೧೭೭೫ ರ ಸುಮಾರಿನಲ್ಲಿ ಲಾರ್ಡ್‌ಕಾರ್ನ್‌ವಾಲೀಸ್ ಬ್ರಿಟೀಷ್ ಮಾದರಿಯ ಪೋಲಿಸು ಇಲಾಖೆ ಪ್ರಾರಂಭಿಸಿದ ನಂತರ, ಅದರಲ್ಲಿಯೂ ದಲಿತರಿಗೆ ಉದ್ಯೋಗಾವಕಾಶಗಳು ಹೆಚ್ಚು ದೊರೆತವು. ಅಶಕ್ತರು ಮತ್ತು ಅಲ್ಪ ಸಂಖ್ಯಾತರು ನಿರಂಕುಶ ಪ್ರಭುತ್ವದಲ್ಲಿ ಊಳಿಗಮಾನ್ಯ ಪದ್ಧತಿಯಲ್ಲಿ ಮತ್ತು ಯಜಮಾನ ಸಂಸ್ಕೃತಿಯಲ್ಲಿ ಅನ್ಯಾಯಕ್ಕೆ ಒಳಗಾಗಿದ್ದರು. ಇದಕ್ಕೆ ಯಾವುದೇ ಪರಿಹಾರ ಸೂತ್ರ ನಮ್ಮ ವ್ಯವಸ್ಥೆಯಲ್ಲಿರಲಿಲ್ಲ. ಕಾನೂನು ಕಟ್ಟಳೆಗಳಿರಲಿಲ್ಲ. ಬ್ರಿಟೀಷರು ೧೮೩೩ ರಲ್ಲಿ ನಮ್ಮ ದೇಶದಲ್ಲಿ ಜಾರಿಗೊಳಿಸಿದ ರೂಲ್ ಆಫ್ ಲಾ ದಿಂದ ಜನಸಮೂಹಕ್ಕೆ ನ್ಯಾಯ ದೊರೆಯುವಂತಾಯಿತು. ಅನ್ಯಾಯಕ್ಕೊಳಗಾದ ಅಮಾಯಕರಿಗೆ ನ್ಯಾಯ ರಕ್ಷಣೆ, ಆರೋಪಿಗಳಿಗೆ ಶಿಕ್ಷೆ ವಿಧಿಸುವ ನ್ಯಾಯಾಲಯಗಳ ಸ್ಥಾಪನೆಯಾಯಿತು. ಇದರಿಂದ ನಮ್ಮ ಸಂಸ್ಕೃತಿ ಧರ್ಮಗಳಿಗೆ ಸಂಸ್ಕಾರವಾಯಿತು.

ಜೊತೆಗೆ, ಜಮೀನ್ದಾರಿ ಪದ್ಧತಿಯನ್ನು ರದ್ದುಗೊಳಿಸಿ ರೈತವಾರಿ ಪದ್ಧತಿ ಜಾರಿಗೊಳಿಸಿ ಮುಗ್ಧ ರೈತಾಪಿ ವರ್ಗದವರನ್ನು ಅನಿರ್ಬಂಧಿತ ಕಂದಾಯ ವಸೂಲಿಯ ಕಪಿಮುಷ್ಠಿಯಿಂದ ಪಾರು ಮಾಡಿದರು ವ್ಯಾಪಾರಕ್ಕಾಗಿ ಬಂದ ಬ್ರಿಟೀಷರು.

ಸಾಕಷ್ಟು ಕೈಗಾರಿಕೆ ಘಟಕಗಳನ್ನು ದೇಶಾದ್ಯಂತ ಸ್ಥಾಪಿಸಿ, ಧಾರ್ಮಿಕ ವರ್ಗದ ಹಾಗೂ ಸಾಮಾಜಿಕ ಬಹಿಷ್ಕೃತಕ್ಕೊಳಗಾಗಿದ್ದ ದಲಿತ ಸಮುದಾಯದ ಆರ್ಥಿಕ ನ್ಯಾಯ ನೀಡುವ ನಿಟ್ಟಿನಲ್ಲಿ ಬಿಟೀಷರು ಒಂದು ಹೆಜ್ಜೆ ಮುಂದಾಗಿಯೇ ಇದ್ದರು. ದಲಿತ ಮಕ್ಕಳಿಗೆ ಶಿಕ್ಷಣ ನೀಡುವಲ್ಲಿ ಹಾಗೂ ಅವರಿಗೆ ಅಗತ್ಯವಾಗಿಬೇಕಾಗಿದ್ದ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿ ವಿದ್ಯಾರ್ಥಿ ವೇತನವನ್ನು ಜಾರಿಗೆ ತಂದರು. ೧೯೩೫ ರ ಶಾಸಕಾಂಗ ಕಾಯಿದೆಯನ್ನು ಅಂಬೇಡ್ಕರ್ ಹೋರಾಟದ ಫಲಶುತಿಯಾಗಿ ಜಾರಿಗೆ ತರಲಾಯಿತು. ಈ ಶಾಸನದ ಅನ್ವಯ ಕೇಂದ್ರ ಹಾಗೂ ಪ್ರಾಂತೀಯ ಶಾಸನ ಸಭೆಗಳಲ್ಲಿ ದಲಿತರಿಗೆ ಪ್ರಜಾ ಪ್ರತಿನಿಧಿ ಸಭಾ ಸದಸ್ಯರಾಗಲು ಅನುವು ಮಾಡಿಕೊಡಲಾಯಿತು. ಈ ನಿಟ್ಟಿನಲ್ಲಿ ಇದೊಂದು ಕ್ರಾಂತಿಕಾರಿ ಹೆಜ್ಜೆಯಾಯಿತು. ಹಾಗಾಗಿ ಬ್ರಿಟೀಷರು ಆದಿಕರ್ನಾಟಕ ಜನವರ್ಗಕ್ಕೆ ಉದ್ಯೋಗ ಕ್ಷೇತ್ರದಲ್ಲಿ ಸುಧಾರಣಾ ಕ್ರಮಗಳನ್ನು ಕೈಗೊಂಡಿದ್ದರು.

### ೨. ರಾಜ ಸಂಸ್ಥಾನಗಳು ಮತ್ತು ದಲಿತರು

ಬ್ರಿಟೀಷ್ ವಸಾಹತುಶಾಹಿ ಸಾಮ್ರಾಜ್ಯದ ಕಾಲದಲ್ಲಿಯೇ ಮಾದರಿ ಸಂಸ್ಥಾನವೆಂಬ ಹೆಗ್ಗಳಿಕೆಗೆ ಪಾತ್ರವಾಗಿದ್ದ ಮೈಸೂರು ಸಂಸ್ಥಾನವನ್ನು ವಿವಿಧ ಒಡೆಯರು ಆಳಿರುವುದು ಚರಿತೆಯಲ್ಲಿ ದಾಖಲಾಗಿದೆ. ಅಂತಹ ವಿವಿಧ ಒಡೆಯರಲ್ಲಿ ಸುಪ್ರಸಿದ್ಧರಾದ ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ಅವಧಿಯು ಒಂದು ನಿರಂತರ ಸಾಮಾಜಿಕ ಪರಿವರ್ತನೆಯ ಕಾಲ ಮತ್ತು ನಿರ್ಣಾಯಕ ಘಟ್ಟ. ಈ ಕಾಲದಲ್ಲಿ ಸಮಾಜದ ಎಲ್ಲಾ ಕ್ಷೇತಗಳಲ್ಲಿಯೂ ಸಾಧಿಸಲಾಗಿದ್ದ ಸರ್ವಾಂಗೀಣ ಪ್ರಗತಿಯನ್ನು ವಸ್ತುನಿಷ್ಠ ದೃಷ್ಟಿಯಿಂದ ಅವಲೋಕಿಸಿ ನೋಡಿದಾಗ ಮೇಲ್ಕಂಡ ಹೇಳಿಕೆಯು ಹೆಚ್ಚು ಅರ್ಥಗರ್ಭಿತವಾಗಿ ಕಂಡುಬರುತ್ತದೆ. ರಾಜಕೀಯವಾಗಿ, ಆಡಳಿತಾತ್ಮಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಾಗೂ ಸಾಮಾಜಿಕವಾಗಿ ನಾಲ್ವಡಿಯವರ ಕಾಲ ಅತ್ಯಂತ ಪ್ರಮುಖ ಕಾಲವೆಂದು ಹೇಳಬಹುದು. ಏಕೆಂದರೆ ೧೯೦೨ ರಿಂದ ೧೯೪೦ ರವರೆಗೆ ನಾಲ್ಕು ದಶಕಗಳ ಕಾಲ ಆಳ್ವಿಕೆ ನಡೆಸಿದ ನಾಲ್ವಡಿಯವರ ಅಧಿಕಾರಾವಧಿಯಲ್ಲಿ ಸಾಮಾಜಿಕ ಶೋಷಿತ ಹಾಗೂ ದಲಿತ ವರ್ಗದವರ ಅಂಧಕಾರದ ಬದುಕಿಗೆ ಆಶಾಕಿರಣವಾಗಿ ಗೋಚರಿಸಲ್ಪಟ್ಟರು. ಶ್ರೀ ನಾಲ್ವಡಿಯವರು. ವಿವಿಧ ಕಾರಣಗಳಿಂದಾಗಿ ಊಳಿಗಮಾನ್ಯ ಮತ್ತು ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಕಾಣಸಿಕೊಂಡಿದ್ದ ಜಾತೀಯತೆ, ಅಸ್ಪೃಶ್ಯತೆ, ವರ್ಣಬೇಧ ಮೊದಲಾದ ಅನಿಷ್ಟ ಪಿಡುಗುಗಳು ಭಾರತೀಯ ಸಾಂಸ್ಕೃತಿಕ ಪರಂಪರೆಗೆ ದೋಷಯುಕ್ತ ಅಂಶಗಳಾಗಿ ಮಾತ್ರವಲ್ಲದೆ ಪ್ರಮುಖ ಸವಾಲಾಗಿ ಪರಿಣಮಿಸಿದ್ದವು. ಇದರಿಂದ ಹಿಂದುಳಿದವರ ಮತ್ತು ದಲಿತ ವರ್ಗದವರ ಬದುಕು ಅಸಹನೀಯವಾಗಿತ್ತು. ಸಾಮಾಜಿಕ ಅಸಮಾನತೆ ಎಲ್ಲಾ ಕ್ಷೇತ್ರಗಳಲ್ಲಿಯೂ ಕಾಣಿಸಿಕೊಂಡಿತ್ತು. ಸವರ್ಣೀಯರ ದಬ್ಬಾಳಿಕೆ ದೌರ್ಜನ್ಯಗಳು ಮೇರೆ ಮೀರಿತ್ತು. ಇಂತಹ ಸಂದರ್ಭಗಳಲ್ಲಿ ಭಾರತದಾದ್ಯಂತ, ವಿಶೇಷವಾಗಿ ದಕ್ಷಿಣ ಭಾರತದಲ್ಲಿ ಸಾಮಾಜಿಕ ಸುಧಾರಣಾ ಚಳುವಳಿಗಳ ನಾಯಕತ್ವವನ್ನು ಮಹಾತ್ಮ ಜ್ಯೋತಿಭಾಫುಲೆ, ಶಾಹು ಮಹಾರಾಜ್, ಡಾ. ಟಿ.ಎಂ. ನಾಯರ್, ಪಿ.ಟಿ.ಚೆಟ್ಟಿಯಾರ್, ರಾಮಸ್ವಾಮಿ ಮೊದಲಿಯಾರ್, ಪೆರಿಯಾರ್, ರಾಮಸ್ವಾಮಿ ನಾಯ್ಕರ್, ನಾರಾಯಣ ಗುರು, ನಾಲ್ವಡಿ ಕೃಷ್ಣರಾಜ ಒಡೆಯರ್ ಮೊದಲಾದವರು ವಹಿಸಿದ್ದರು. ಇವರಲ್ಲಿ ರಾಜಮಹಾರಾಜರಾಗಿದ್ದ ಕೋಲ್ಹಾಪುರದ ಛತ್ರಪತಿ ಶಾಹುಮಹಾರಾಜ್ ಮತ್ತು ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರವರು ವಹಿಸಿದ ಪಾತ್ರ ಅವಿಸ್ಮರಣೀಯವಾದುದು.

ನೀಡಿದ ಮಾರ್ಗದರ್ಶನ ಅದ್ಭುತವಾದುದು. ಅನುಷ್ಠಾನಗೊಳಿಸಿದ ನಿರ್ಧಾರಗಳು ಕ್ರಾಂತಿಕಾರಕವಾಗಿದ್ದವು. ಆದುದರಿಂದಲೇ ಇವರಿಬ್ಬರೂ ಹಿಂದುಳಿದ ಮತ್ತು ದಲಿತ ವರ್ಗದವರ ಕತ್ತಲ ಬದುಕಿನಲ್ಲ ಸೂರ್ಯ ಚಂದರಂತೆ ಇಂದಿಗೂ ಶೋಭಾಯಮಾನವಾಗಿ ಬೆಳಗುತ್ತಿದ್ದಾರೆ. ಆ ಎಲ್ಲಾ ಚಾರಿತ್ರಿಕ ಹಿನ್ನೆಲೆಯಲ್ಲಿ ಮೈಸೂರು ರಾಜಮನೆತನದ ೨೪ ನೇ ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರು ಮೈಸೂರು ಸಂಸ್ಥಾನದಲ್ಲಿ ಸಾಮಾಜಿಕ ಪರಿವರ್ತನಾ ಚಳುವಳಿಗೆ ಹೇಗೆ ನಾಂದಿ ಹಾಡಿದರು ಮತ್ತು ಅದಕ್ಕಾಗಿ ಅವರು ರಚಿಸಿದ ಮಿಲ್ಲರ್ ಆಯೋಗದ ಸ್ವರೂಪ, ಪ್ರಾಮುಖ್ಯತೆ, ಅನುಕೂಲತೆಗಳೇನು. ಇವೇ ಮೊದಲಾದವುಗಳನ್ನು ಕುರಿತು ಮುಂದೆ ಕೂಲಂಕುಷವಾಗಿ ಚರ್ಚಿಸಲಾಗಿದೆ.

ಬ್ರಾಹ್ಮಣೇತರ ಹಾಗೂ ಹಿಂದುಳಿದ ವರ್ಗಗಳಿಗೆ ಕಾನೂನುಬದ್ಧವಾಗಿ ಸರ್ಕಾರಿ ಸೇವೆಯಲ್ಲಿ ಮೀಸಲಾತಿ ಒದಗಿಸುವುದು ಸೂಕ್ತ ಎಂಬ ಅಂತಿಮ ತೀರ್ಮಾನಕ್ಕೆ ಬಂದ ನಾಲ್ವಡಿ ಕೃಷ್ಣರಾಜ ಒಡೆಯರು ಅಂದಿನ ಮೈಸೂರು ಸಂಸ್ಥಾನದ ಉಚ್ಛ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿದ್ದ ಸರ್ ಲೆಸ್ಲಿ ಮಿಲ್ಲರ್ ರವರ ಅಧ್ಯಕ್ಷತೆಯಲ್ಲಿ ದಿನಾಂಕ ೨೩.೦೮.೧೯೧೮ ರಲ್ಲಿ ಏಳು ಜನರ ಒಂದು ಆಯೋಗವನ್ನು ರಚನೆ ಮಾಡಿ ಆದೇಶ ಹೊರಡಿಸಿದರು. ಈ ಆಯೋಗದಲ್ಲಿ ಇತರೆ ಸದಸ್ಯರುಗಳೆಂದರೆ ಶ್ರೀ ಸಿ. ಶ್ರೀಕಂಠೇಶ್ವರ ಅಯ್ಯರ್, ಶ್ರೀ ಎಂ. ಮುತ್ತಣ್ಣ, ಶ್ರೀ ಎಂ.ಸಿ. ರಂಗ ಅಯ್ಯಂಗಾರ್, ಶ್ರೀ ಹೆಚ್. ಚೆನ್ನಯ್ಯ, ಶ್ರೀ ನವಾಬ್ ಗುಲಾಮ್ ಅಹಮ್ಮದ್ ಕಲಾಮಿ ಮತ್ತು ಶ್ರೀ ಎಂ. ಬಸವಯ್ಯ ಮಿಲ್ಲರ್ ಆಯೋಗ ರಚನೆಯ ಕುರಿತಂತೆ ಸರ್ಕಾರವು ಪ್ರಸ್ತುತ ಮೈಸೂರು ಪ್ರಾಂತ್ಯದ ಸಾರ್ವಜನಿಕ ಸೇವೆಯಲ್ಲಿ ಬ್ರಾಹ್ಮಣ ಸಮುದಾಯದ ಪ್ರಾತಿನಿಧ್ಯ ಯಥೇಚ್ಛವಾಗಿದೆ. ಆದುದರಿಂದ ಸಂಸ್ಥಾನದ ಇತರೆ ಹಿಂದುಳಿದ ಸಮುದಾಯಗಳಿಗೆ ಸಾಕಷ್ಟು ಪ್ರಾತಿನಿಧ್ಯ ಕಲ್ಪಿಸಿಕೊಡಬೇಕೆಂದು ಸರ್ಕಾರದ ಉದ್ದೇಶವಾಗಿದೆ. ಬ್ರಾಹ್ಮಣ ಸಮುದಾಯದ ಹೊರತಾಗಿ ಇತರೆ ಹಿಂದುಳಿದ ಸಮುದಾಯಗಳು ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರಿ ಉದ್ಯೋಗವನ್ನು ಪಡೆದುಕೊಳ್ಳುವ ನಿಟ್ಟಿನಲ್ಲಿ ಪ್ರೋತ್ಸಾಹಿಸಲು ಸರ್ಕಾರ ಏನು ಕಾರ್ಯಕ್ರಮ ಕೈಗೊಳ್ಳಬೇಕು ಎಂಬ ಬಗ್ಗೆ ಪರಿಶೀಲಿಸಿ ತನ್ನ ವರದಿ ನೀಡುವಂತೆ ಸೂಚಿಸಿ ಆದೇಶ ನೀಡಿತು.

ಇದರಿಂದ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರು ವಿದ್ಯೆ ಮತ್ತು ಅಧಿಕಾರದಿಂದ ವಂಚಿತರಾಗಿದ್ದ ಶೂದ್ರ ಮತ್ತು ಅತಿ ಶೂದ್ರ ಜನಾಂಗಗಳ ಸಾಮಾಜಿಕ ಸಮಾನತೆ ಮತ್ತು ಸ್ವಾತಂತ್ರ್ಯಗಳ ಹೋರಾಟಕ್ಕೆ ಬೆಂಬಲವಾಗಿ ನಿಂತಿದ್ದರೆಂಬುದು ವ್ಯಕ್ತವಾಗುತ್ತದೆ. ಹಿಂದುಳಿದ ಜಾತಿ ಜನಾಂಗಗಳಿಗೆ ಸರಕಾರ ವಿಶೇಷ ಸವಲತ್ತು ಸೌಕರ್ಯಗಳನ್ನು ನೀಡದಿದ್ದರೆ, ಅವರು ಮೇಲ್ಜಾತಿಗಳೊಡನೆ ಸ್ಪರ್ಧಿಸಲು ಸಾಧ್ಯವಿಲ್ಲ ಎಂಬ ಸಾಮಾಜಿಕ ನ್ಯಾಯದ ಸಿದ್ಧಾಂತಕ್ಕೆ ನಲ್ವಡಿಯವರು ಬದ್ಧರಾಗಿದ್ದರು. ಆದರೆ ಸಾಮಾಜಿಕ ನ್ಯಾಯಾಲಯದ ವಿಚಾರದಲ್ಲಿ ದಿವಾನರಾಗಿದ್ದ ವಿಶ್ವೇಶ್ವರಯ್ಯನವರು ನಾಲ್ವಡಿಯವರ ತತ್ತ್ವಗಳಿಗೆ ತದ್ವಿರುದ್ಧವಾಗಿ ಪ್ರಗತಿಪರ ದೃಷ್ಟಿಕೋನ ಮತ್ತು ಉದಾರಭಾವನೆಗಳನ್ನು ಹೊಂದಿರಲಿಲ್ಲ. ಇದಕ್ಕೆ ನಿದರ್ಶನವಾಗಿ ನಾಲ್ವಡಿಯವರು ಮಿಲ್ಲರ್ ಆಯೋಗ ರಚನೆ ಮಾಡಿದಾಗ ವಿಶ್ವೇಶ್ವರಯ್ಯನವರು ಜಾತಿ ಆಧಾರಿತ ಮೀಸಲಾತಿ ನೀಡುವುದರಿಂದ ಪ್ರತಿಭೆಗೆ ಧಕ್ಕೆಯುಂಟಾಗುತ್ತದ್ದೆ ಆಡಳಿತದಲ್ಲಿ ದಕ್ಷತೆ ಹಾಳಾಗುತ್ತದ್ದೆ ಆದುದರಿಂದ ಅದಕ್ಕೆ ಅವಕಾಶ ನೀಡಬಾರದು ಎಂದು ವಾದ ಮಾಡಿದುದ್ದನ್ನು ಮತ್ತು ಇದಾವುದಕ್ಕೂ ಕಿವಿಗೊಡದೆ ಮಹಾರಾಜರು ನಿಮ್ಮವಾದ ಸರಿಯಲ್ಲ, ಹಿಂದುಳಿದವರ ಅಭಿವೃದ್ಧಿಗೆ ನೀವು ಅಡ್ಡಿಯಾಗಬಾರದು ಎಂದು ಹಿತವಚನ ಹೇಳಿದುದ್ದನ್ನೂ, ಅಂತಿಮವಾಗಿ ವಿಶ್ವೇಶ್ವರಯ್ಯನವರು ತಮ್ಮ ದಿವಾನಗಿರಿ ಪದವಿಗೆ ಡಿಸೆಂಬರ್ ೯. ೧೯೧೮ ರಲ್ಲಿ ರಾಜೀನಾಮೆ ನೀಡಿದ್ದನ್ನು ಉಲ್ಲೇಖಿಸಬಹುದಾಗಿದೆ.

ಸಾಮಾಜಿಕ ಪರಿವರ್ತನೆಯ ವಿಚಾರದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಎಂತಹ ಅಚಲ ನಿಲುವು ತಾಳಿದ್ದರು ಎಂಬುದಕ್ಕೆ ಈ ಘಟನೆ ಸಾಕ್ಷಿಯಾಗಿದೆ. ಅನಂತರ ವಿಶ್ವೇಶ್ವರಯ್ಯನವರ ರಾಜೀನಾಮೆಯಿಂದ ತೆರವಾದ ದಿವಾನ್ ಹುದ್ದೆಗೆ ೧೯೧೯ ರಲ್ಲಿ ಮೊಟ್ಟ ಮೊದಲ ಬಾರಿಗೆ ಹಿಂದುಳಿದ ವರ್ಗಕ್ಕೆ ಸೇರಿದ ಸರದಾರ್ ಶ್ರೀ ಎಂ. ಕಾಂತರಾಜ ಅರಸುರವರನ್ನು ನೇಮಕ ಮಾಡಲಾಯಿತು. ಅಂತಿಮವಾಗಿ ಮಿಲ್ಲರ್ ಸಮಿತಿಯು ತನ್ನ ವರದಿಯನ್ನು ಜುಲೈ ೧೮, ೧೯೧೯ ರಂದು ಸಲ್ಲಿಸಿತು ಮತ್ತು ಈ ಕೆಳಕಂಡ ಅಂಶಗಳನ್ನು ಶಿಫಾರಸ್ಸು ಮಾಡಿತು.

೧. ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ನಿಗದಿ ಪಡಿಸಿರುವ ಶೈಕ್ಷಣಿಕ ಅರ್ಹತೆಯಲ್ಲಿ ಹಿಂದುಳಿದ ಜಾತಿಗಳಿಗೆ ವಿನಾಯಿತಿ ನೀಡುವುದು.

೨. ಹಿಂದುಳಿದ ವರ್ಗಗಳಲ್ಲಿ ಕನಿಷ್ಠ ಅರ್ಹತೆಯುಳ್ಳ ಅಭ್ಯರ್ಥಿಗಳನ್ನು ಆಧ್ಯತೆಯ ಮೇಲೆ ಸರಕಾರಿ ಉದ್ಯೋಗಕ್ಕೆ ಆಯ್ಕೆ ಮಾಡುವುದು.

೩. ಸಾರ್ವಜನಿಕ ಸೇವೆಗೆ ಇರುವ ಗರಿಷ್ಠ ವಯೋಮಿತಿಯನ್ನು ೨೫ ರಿಂದ ೨೮ ಕ್ಕೆ ಹೆಚ್ಚಿಸುವುದು.

೪. ಹಿಂದುಳಿದ ವರ್ಗಗಳಿಗೆ ಶಿಕ್ಷಣ ಸೌಲಭ್ಯವನ್ನು ಕಡ್ಡಾಯ ಶಿಕ್ಷಣ ಜಾರಿಗೆ ತಂದು ಅದಕ್ಕಾಗಿ ಹೆಚ್ಚು ಶಾಲಾ ಕಾಲೇಜುಗಳನ್ನು ಪ್ರಾರಂಭಿಸಬೇಕು.

೫. ಗ್ರಾಮೀಣ ಹಾಗೂ ನಗರ ಪ್ರದೇಶಗಳಿಗೆ ಸಮಾನ ಅವಕಾಶ ಕಲ್ಪಿಸಲು ಆಂಗ್ಲ ಮಾಧ್ಯಮ ಶಾಲೆಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿಯೂ ಪ್ರಾರಂಭಿಸಬೇಕು.

೬. ಪ್ರೌಢ ಮತ್ತು ಕಾಲೇಜು ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಸೌಲಭ್ಯಗಳನ್ನು ಜಾರಿಗೊಳಿಸಬೇಕು.

೭. ತಾಲ್ಲೂಕು ಮಟ್ಟದಲ್ಲಿ ಹಿಂದುಳಿದ ವರ್ಗಗಳಿಗೆ ವಿದ್ಯಾರ್ಥಿನಿಲಯಗಳ ಸೌಲಭ್ಯಗಳನ್ನು ಜಾರಿಗೊಳಿಸಬೇಕು.

೮. ವರದಿ ಜಾರಿಗೆ ಬಂದ ೭ ವರ್ಷಗಳ ಒಳತಿಗಾಗಿ ಉನ್ನತ ಹುದ್ದೆಗಳಲ್ಲಿ ಶೇ. ೫೦ ರಷ್ಟು ಹುದ್ದೆಗಳನ್ನು ಮತ್ತು ಕೆಳಹಂತದ ಹುದ್ದೆಗಳಲ್ಲಿ ೨೩ ರಷ್ಟು ಹುದ್ದೆಗಳನ್ನು ಹಿಂದುಳಿದ ವರ್ಗಗಳಿಗೆ ನೀಡಲು ಕ್ರಮ ಕೈಗೊಳ್ಳಬೇಕು.

ಮೇಲ್ಕಂಡ ಶಿಫಾರಸ್ಸುಗಳನ್ನು ಸಮಿತಿಯ ಇಬ್ಬರು ಬ್ರಾಹ್ಮಣ ಸದಸ್ಯರುಗಳಾದ ಸಿ. ಶ್ರೀಕಂಠೇಶ್ವರ ಅಯ್ಯರ್ ಮತ್ತು ಎಂ. ರಂಗ ಅಯ್ಯಾಂಗಾರ್ ವಿರೋಧಿಸಿ ವರದಿಗೆ ಸಹಿ ಮಾಡಿದರು. ಉಳಿದ ಐದು ಜನ ಬ್ರಾಹ್ಮಣೇತರ ಸದಸ್ಯರು ವರದಿಯ ಪರವಾಗಿ ಸಹಿ ಮಾಡಿದರು. ಅಂತಿಮವಾಗಿ ಬ್ರಾಹ್ಮಣರ ತೀವ್ರ ವಿರೋಧದ ನಡುವೆಯೂ ನಾಲ್ವಡಿಯವರು ಮೇ. ೧೯೨೧ ರಲ್ಲಿ ಒಂದು ಸರ್ಕಾರಿ ಆದೇಶವನ್ನು ಹೊರಡಿಸಿ. ಬ್ರಾಹ್ಮಣರು ಮತ್ತು ಆಂಗ್ಲೋ ಇಂಡಿಯನ್ನರನ್ನು ಹೊರತು ಪಡಿಸಿ ಉಳಿದ ಎಲ್ಲಾ ಸಮುದಾಯಗಳನ್ನು ಹಿಂದುಳಿದ ವರ್ಗಗಳೆಂದು ಗುರುತಿಸಿ ಅವರಿಗೆ ಶೇ. ೭೫ ರಷ್ಟು ಮೀಸಲಾತಿಯನ್ನು ಜಾರಿಗೊಳಿಸಿದರು. ಮಹಾರಾಜರು ತೆಗೆದುಕೊಂಡ ಈ ಐತಿಹಾಸಿಕ ಮತ್ತು ದಿಟ್ಟ ನಿರ್ಣಯವು ಬ್ರಾಹ್ಮಣ ಸಮುದಾಯವನ್ನು ದಿಕ್ಕೆಡಿಸಿತು. ೧೯೨೧ ಅಕ್ಟೋಬರ್ ನಲ್ಲಿ ನಡೆದ ಪ್ರಜಾಪತಿನಿಧಿ ಸಭೆಯಲ್ಲಿ ಹೊಸ ಮೀಸಲಾತಿ ನೀತಿಯನ್ನು ಕುರಿತು ಚರ್ಚೆಗಳಾದವು. ಚರ್ಚೆಯಲ್ಲಿ ಭಾಗವಹಿಸಿದ್ದ ಬ್ರಾಹ್ಮಣ ಪ್ರತಿನಿಧಿಗಳು ಮೀಸಲಾತಿ ನೀತಿಯ ವಿರುದ್ಧ ಮಾತನಾಡಿದರೆ, ಬ್ರಾಹ್ಮಣೇತರ ಪ್ರತಿನಿಧಿಗಳು ಪರವಾಗಿ ಮಾತನಾಡಿದರು. ಕೊನೆಗೆ ಮಿಲ್ಲರ್ ವರದಿಯ ಶಿಫಾರಸ್ಸುಗಳು ಅಂಗೀಕೃತಗೊಂಡವು. ಆದರೆ ಬ್ರಾಹ್ಮಣೇತರರಿಗೆ ದೊರೆತ ಮೀಸಲಾತಿ ನೀತಿಯನ್ನು ಅತ್ಯಂತ ಹೆಚ್ಚಿನ ಲಾಭ ಪಡೆದವರು ಬ್ರಾಹ್ಮಣೇತರರಲ್ಲಿ ಪ್ರಬಲ ಜಾತಿಗಳಾಗಿದ್ದ ಲಿಂಗಾಯಿತರು ಮತ್ತು

ಒಕ್ಕಲಿಗರು. ಏಕೆಂದರೆ ಸಾಮಾಜಿಕವಾಗಿ ಬ್ರಾಹ್ಮಣರ ನಂತರ ಸ್ಥಾನಮಾನಗಳನ್ನು ಪಡೆದಿದ್ದ ಇವರು ಇತರ ಹಿಂದುಳಿದ ಜಾತಿಗಳಾದ ಕುರುಬ, ದೇವಾಂಗ, ಕಣಿಯ, ತಿಗಳ, ಯಾದವ, ಲಂಬಾಣಿ ಮುಂತಾದ ಜಾತಿಗಳು ಸಹ ಅಧಿಕಾರದಲ್ಲಿ ಪಾಲು ಪಡೆಯಲು ತಮ್ಮ ತಮ್ಮ ಜಾತಿ ಸಂಘಟನೆಗಳನ್ನು ಕಟ್ಟಿಕೊಂಡರು. ಒಟ್ಟಾರೆ ಹಿಂದುಳಿದ ಜಾತಿಗಳಿಗೆ ಶಾಸನಬದ್ಧ ಮೀಸಲಾತಿ ನೀಡುವ ಮಹಾರಾಜರ ತೀರ್ಮಾನವು ಬ್ರಾಹ್ಮಣರ ಏಕಸ್ವಾಮ್ಯಕ್ಕೆ ಕಡಿವಾಣ ಹಾಕಿತ್ತು ಮತ್ತು ಹಿಂದುಳಿದ ಜಾತಿಗಳಿಗೆ ಆಶಾಕಿರಣವಾಗಿತ್ತು ಮಹಾರಾಜರ ಅಂದಿನ ಈ ಕ್ರಮದಿಂದಾಗಿ ಕರ್ನಾಟಕದಲ್ಲಿ ಬ್ರಾಹ್ಮಣೇತರ ಜಾತಿಗಳು ಸಾಕಷ್ಟು ಸಂಖ್ಯೆಯಲ್ಲಿ ವಿದ್ಯಾವಂತರಾಗಿ ಸಂಸ್ಥಾನದ ಸೇವೆಯಲ್ಲಿ ಬ್ರಾಹ್ಮಣರಿಗೆ ಸರಿಸಮಾನವಾದ ಸ್ಥಾನಮಾನ ಗಳಿಸಲು ಸಾಧ್ಯವಾಯಿತು. ಹೀಗೆ ನಾಲ್ವಡಿಯವರ ದೂರದೃಷ್ಟಿ ಮತ್ತು ಉದಾರನೀತಿಗಳ ಫಲವಾಗಿ ಮೈಸೂರು ಸಂಸ್ಥಾನದಲ್ಲಿ ಸೇವೆ ಸಲ್ಲಿಸುವ ಅವಕಾಶಗಳು ಹಿಂದುಳಿದವರಿಗೆ ದೊರಕಿದವಲ್ಲದೇ ದಲಿತರು ಅಥವಾ ಅಸ್ಪೃಶ್ಯರಿಗೂ ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಸಮಾನ ಅವಕಾಶಗಳು ಮತ್ತು ಸವಲತ್ತುಗಳು ಲಭ್ಯವಾಯಿತೆಂದು ಮುಂದೆ ವಿವರಿಸಲಾಗಿದೆ. ದಲಿತ ವರ್ಗದಲ್ಲಿ ಶೇ. ಎಂಭತ್ತು ಭಾಗ ಆದಿಕರ್ನಾಟಕ ಜನವರ್ಗವೇ ಇದ್ದುದರಿಂದ ಅದರ ಲಾಭವನ್ನು ಸಹಜವಾಗಿಯೇ ಅವರು ಪಡೆದುಕೊಂಡರು.

ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲೂ ಸಮಾಜವೂ ಅಸ್ಪೃಶ್ಯತ ಸಮಸ್ಯೆಯಿಂದ ಮುಕ್ತವಾಗಿರಲಿಲ್ಲ ಎಂಬುದು ನಿಜ. ಆದರೂ ದಲಿತರ ವಿದ್ಯಾಭ್ಯಾಸಕ್ಕೂ ಅವರ ರಾಜಕೀಯ ಆರ್ಥಿಕ ಸಾಮಾಜಿಕ ಪರಿಸ್ಥಿತಿಗಳನ್ನು ಉತ್ತಮಪಡಿಸುವುದಕ್ಕಾಗಿಯೂ ಮೈಸೂರು ಸಂಸ್ಥಾನವು ನೀಡಿದ ಪ್ರೋತ್ಸಾಹ, ಮಾಡಿದ ಸಹಾಯ, ಕೈಗೊಂಡ ಕಾರ್ಯಕ್ರಮ, ತೋರಿದ ಕಳಕಳಿ ಅದ್ವಿತೀಯವಾದುದು. ಪಂಚಮರಿಗಾಗಿ ಮೊದಲು ಹಸ್ಕೂರು ಹಾಗೂ ನರಸಾಪುರದಲ್ಲಿ ಎರಡು ಸರ್ಕಾರಿ ಶಾಲೆಗಳನ್ನು ತೆರೆಯಲಾಯಿತು. ಅನಂತರ ಮೈಸೂರು, ಆನೇಕಲ್ಲು ಹಾಗೂ ಹಾಸನದಲ್ಲಿ ಅನುಧಾನರಹಿತ ಶಾಲೆಗಳನ್ನು ಆರಂಭಿಸಲಾಯಿತು. ಸಾರ್ವಜನಿಕ ಶಾಲೆಗಳಲ್ಲಿ ಪಂಚಮರ ಮಕ್ಕಳು ಹೊರಗಿನ ಆವರಣದಲ್ಲಿ ಕುಳಿತು ಪಾಠ ಕಲಿಯಬೇಕಾಗಿದ್ದಿತು. ಕಾರಣ ಅಂದಿನ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದ ಜಾತಿ ನಿಷೇಧಗಳು. ಆದರೆ ಕಾಲಕ್ರಮೇಣ ಪಂಚಮರಿಗಾಗಿಯೇ ಹಲವಾರು ಶಾಲೆಗಳನ್ನು ಪ್ರಾರಂಭಿಸಲಾಯಿತು. ೧೯೧೪ -೧೫ ರ ವರದಿಯೊಂದರ ಪ್ರಕಾರ ಶಿಕ್ಷಣಾಧಿಕಾರಿಯೊಬ್ಬರು ಹಿಂದೂ ಸಮಾಜದ ಮೇಲ್ವರ್ಗದವರಲ್ಲಿ ಪಂಚಮರ ಬಗ್ಗೆ ಇದ್ದ ಮನೋಭಾವನೆಗಳಲ್ಲಿ ಬದಲಾವಣೆಯಾಗಿದ್ದುದನ್ನು ಗುರುತಿಸಿದ್ದು ಕಂಡು ಬರುತ್ತದೆ.

ಪಂಚಮರಿಗೆ ಸಾಮಾನ್ಯ ವಿದ್ಯಾಭ್ಯಾಸ ಮಾತ್ರವಲ್ಲದೇ ವೃತ್ತಿಪರ ಶಿಕ್ಷಣವನ್ನೂ ಕೂಡ ನೀಡಲು ವ್ಯವಸ್ಥೆ ಮಾಡಲಾಗಿದ್ದಿತು. ಅವರಿಗಾಗಿ ಮೈಸೂರು, ತುಮಕೂರು, ಚಿಕ್ಕಮಗಳೂರು, ಬೆಂಗಳೂರು ಮುಂತಾದ ಕಡೆಗಳಲ್ಲಿ ವಸತಿ ಶಾಲೆಗಳನ್ನು ತರಬೇತಿ ನೀಡಲಾಯಿತು. ೧೯೧೮ -೧೯ ವೇಳೆಗೆ ಪಂಚಮರನ್ನು ಸಾರ್ವಜನಿಕ ಶಾಲೆಗಳಿಗೆ ಸೇರಿಸಲು ಸರ್ಕಾರಿ ಆದೇಶದ ಮೂಲಕವೇ ಅವಕಾಶವನ್ನುಂಟು ಮಾಡಿಕೊಡಲಾಯಿತು. ಅದಕ್ಕಾಗಿ ಸರಕಾರವು ತನ್ನ ಆದೇಶದಲ್ಲಿ ಜಾತಿಯ ಆಧಾರದ ಮೇಲೆ ವ್ಯಕ್ತಿಗಳಿಗೆ ಶಾಲಾ ಪ್ರವೇಶಾತಿಯನ್ನು ನಿರಾಕರಿಸುವುದನ್ನು ಒಪ್ಪಲಾಗುವುದಿಲ್ಲ.ಈ ಬಗೆಯ ಅಸಮಾನತೆಯ ಮತ್ತು ಅನ್ಯಾಯಕರವಾದ ಸಾಮಾಜಿಕ ಪೂರ್ವಾಗ್ರಹಗಳಿಂದ ಸಾಮಾಜದ ಪ್ರಗತಿ ಕುಂಠಿತವಾಗುತ್ತದೆ ಎಂಬುದನ್ನು ಸ್ಪಷ್ಟವಾಗಿ ತಿಳಿಸಿತು. ಈ ಧೋರಣೆಗಳಿಗೆ ಅನುಗುಣವಾಗಿ ಆದಿ ಕರ್ನಾಟಕ ಮಕ್ಕಳಿಗೆ ವಿದ್ಯಾರ್ಥಿ ವೇತನಗಳನ್ನು ಉಚಿತ ಭೋಜನಾ, ವಸತಿ ಸೌಕರ್ಯಗಳನ್ನು ಮತ್ತು ಉಚಿತವಾಗಿ ಪುಸ್ತಕ ಉಡುಪುಗಳನ್ನು ಒದಗಿಸಿಕೊಡಲಾಗುತ್ತಿದ್ದಿತು. ಅವರನ್ನು ಶಾಲೆಗೆ ಕಳುಹಿಸುವಂತೆ ಮನ ಒಲಿಸುವುದಕ್ಕಾಗಿ ಅವರ ತಂದೆ ತಾಯಿಯಂದಿರಿಗೆ ಹಣದ ಸಹಾಯವನ್ನು ಸಹ ಮಾಡಲಾಗುತ್ತಿದ್ದಿತು.

ಅವರಿಗೆ ಪವೇಶ ಹಾಗೂ ಪವೇಶ ಶುಲ್ಕವನ್ನು ಕೂಡ ಮನ್ನಮಾಡಲಾಗಿದ್ದಿತು. ಇಂಗ್ಲೀಷ್ ಭಾಷೆಯನ್ನು ಕಲಿಸಲು ತಕ್ಕ ವ್ಯವಸ್ಥೆಯನ್ನು ಹಾಗೂ ಶಾಲೆ ಸೇರಲು ಉಚಿತ ಅವಕಾಶವನ್ನು ಮಾಡಿ ಕೊಡಲಾಗಿದ್ದಿತು. ಇಷ್ಟು ಮಾತವಲ್ಲದೆ, ವ್ಯವಸಾಯ ಮಾಡಲು ಜಮೀನು ನೀಡಿದ್ದು ಪ್ರತ್ಯೇಕ ಬಡಾವಣೆ ಹಾಗೂ ಸಹಕಾರ ಸಂಘ ಇತ್ಯಾದಿ ಸೌಲಭ್ಯಗಳನ್ನು ನೀಡಲಾಯಿತು. ಇದರೊಂದಿಗೆ ಸರ್ಕಾರಿ ಉದ್ಯೋಗಗಳಿಗೆ ವಿದ್ಯಾವಂತರಾಗಿದ್ದ ಆದಿ ಕರ್ನಾಟಕದವರನ್ನು ಆದ್ಯತೆಯ ಮೇರೆಗೆ ನೇಮಿಸಿಕೊಳ್ಳಲಾಗುತ್ತಿದ್ದಿತು. ಪುರಸಭೆ, ಜಿಲ್ಲಾಮಂಡಳಿ, ಪಜಾ ಪತಿನಿಧಿ ಸಭೆ ಮುಂತಾದವುಗಳಲ್ಲಿ ಈ ಪಂಗಡದವರು ಸದಸ್ಯರಾಗಲು ವಿಶೇಷ ಸೌಕರ್ಯ ಹಾಗೂ ಮೀಸಲಾತಿಗಳನ್ನು ಮಾಡಿಸಿಕೊಳ್ಳಲಾಯಿತು. ೧೯೨೩ ರಲ್ಲಿ ಜಾರಿಗೆ ಬಂದ ಹೊಸ ಸಂವಿಧಾನದಲ್ಲಿ ಪಜಾ ಪತಿನಿಧಿ ಸಭೆಯಲ್ಲಿ ವಿಶೇಷ ಹಿತಾಶಕ್ತಿ ಜನರಿಗೆ ೧೫ ಸ್ಥಾನಗಳನ್ನು ಮೀಸಲಿಡಲಾಯಿತು. ಎಲ್ಲಕ್ಕಿಂತ ಹೆಚ್ಚಾಗಿ ಆದಿ ಕರ್ನಾಟಕ ಜನವರ್ಗ ಸಾರ್ವಜನಿಕ ಮೂಲಗಳ ನೀರನ್ನು ಬಳಸುವ ಹಕ್ಕನ್ನು ಪಡೆದುಕೊಂಡರು.ಅಂತೆಯೇ ಸರ್ಕಾರವು ಬುಡಕಟ್ಟು ಹಾಗೂ ಅರಣ್ಯ ನಿವಾಸಿಗಳಿಗೆ ಶಿಕ್ಷಣದ ಮೂಲ ಸೌಲಭ್ಯಗಳನ್ನು ಒದಗಿಸುವ ಉದ್ದೇಶದಿಂ ಲಂಬಾಣಿ ಮತ್ತು ಗಿರಿಜನ ಶಾಲೆಗಳನ್ನು ಆಯಾ ಪ್ರದೇಶದಲ್ಲೇ ತೆರೆಯಲಾಯಿತು. ೧೯೨೧-೨೨ ರ ಅಂಕಿ ಅಂಶಗಳ ಪಕಾರ ೩೨ ಲಂಬಾಣಿ ವಸತಿ ಶಾಲೆಗಳಿದ್ದು ೬೧೦ ವಿದ್ಯಾರ್ಥಿಗಳು ಶಿಕ್ಷಣವನ್ನು ಪಡೆಯುತ್ತಿದ್ದರು. ಬಿಳಿಗಿರಿ ರಂಗನ ಬೆಟ್ಟ ಮುಂತಾದ ಬೆಟ್ಟ ಗುಡ್ಡ ಪದೇಶಗಳಲ್ಲಿ ನಾಲ್ಕು ಗಿರಿಜನ ಸೋಲಿಗರ ಶಾಲೆಗಳು, ಕಾಕನ ಕೋಟೆ ಮುಂತಾದ ಅರಣ್ಯ ಪದೇಶಗಳಲ್ಲಿ ಜೇನು ಕುರುಬ ಮತ್ತು ಕುಣಬಿ ಜನರಿಗಾಗಿ ೫ ಶಾಲೆಗಳು, ಕೋಲಾರ ಜಿಲ್ಲೆಯಲ್ಲಿ ವಡ್ಡರಿ (ಭೋವಿಗಳು) ಗಾಗಿ ೩ ಶಾಲೆಗಳು, ಒಟ್ಟು ೧೨ ಶಾಲೆಗಳಲ್ಲಿ ೨೨೪ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದರು.

ಹಿಂದುಳಿದ ಮತ್ತು ದಲಿತ ವರ್ಗಗಳ ಮಕ್ಕಳು ತಮ್ಮ ಜೀವನ ಶೈಲಿಯನ್ನು ಮಾರ್ಪಾಡುಗೊಳಿಸಿಕೊಂಡು ಸಮಾಜದ ಮುಖ್ಯ ವಾಹಿನಿಯಲ್ಲಿ ಸೇರುವಂತಾಗುವ ಘನ ಉದ್ದೇಶದಿಂದ ಮಹಾರಾಜರ ಸರ್ಕಾರವು ನವೆಂಬರ್ ೨೯, ೧೯೧೮ ರಲ್ಲಿ ಹೊರಡಿಸಿದ ಗೆಜೆಟ್ ಪಕಟಣೆಯ ಪಾಠ ಈ ರೀತಿಯಾಗಿತ್ತು ಜಾತಿಯ ಆಧಾರದ ಮೇಲೆ ಯಾರನ್ನು ಸಾರ್ವಜನಿಕ ಶಾಲೆಗಳಿಂದ ದೂರವಿಡುವ ಪರಿಪಾಠವನ್ನು ಸರ್ಕಾರವು ಎತ್ತಿ ಹಿಡಿಯಲಾರದು. ಸಾರ್ವಜನಿಕ ಶಾಲೆಗಳನ್ನು ಲೋಕಾದಾಯಗಳಿಂದ ನಡೆಸುತ್ತಿರುವುದರಿಂದ, ಶಿಕ್ಷಕನವೂ ಸಹ ಆಸ್ಪತ್ರೆ, ನ್ಯಾಯಾಲಗಳು, ರೈಲು ಪ್ರಯಾಣ ಇತ್ಯಾದಿ ಸಾರ್ವಜನಿಕ ಕ್ಷೇತ್ರಗಳಲ್ಲಿ ಇರುವಂತೆಯೇ ರಾಜ್ಯದ ಎಲ್ಲಾ ವರ್ಗದ ಜನರಿಗೂ ಲಭ್ಯವಾಗಬೇಕು ಎಂದು ಉದ್ದೇಶಿಸಲಾಗಿದ್ದೆ ಅದೇ ವರ್ಷ ಈ ಘೋಷಣೆಯ ಆಧಾರದ ಮೇಲೆ ದಲಿತ ವರ್ಗದ ಹಾಗೂ ಇತರೆ ಹಿಂದುಳಿದ ಎಲ್ಲಾ ವರ್ಗದ ಮಕ್ಕಳನ್ನು ಸಾರ್ವಜನಿಕ ಶಾಲೆಗಳಿಗೆ ನಿರಾತಂಕವಾಗಿ ಸೇರಿಸಿಕೊಳ್ಳಬೇಕೆಂಬ ಆಜ್ಞೆಯನ್ನು ಜಾರಿಗೆ ತರಲಾಯಿತು. ೧೯೧೯ ೨೦ ರಲ್ಲಿ ೩,೧೪೪೪ ಅಂತಹ ವಿದ್ಯಾರ್ಥಿಗಳು ಶಾಲೆಗಳಿಗೆ ಹೋಗುತ್ತಿದ್ದರು. ಇದಲ್ಲದೇ ದಲಿತ ವರ್ಗದ ವಿದ್ಯಾರ್ಥಿ ವೇತನಕ್ಕಾಗಿಯೇ ಪತ್ಯೇಕ ೧೫,೦೦೦ ರೂ.ಗಳ ವಾರ್ಷಿಕ ಗ್ರ್ಯಾಂಟನ್ನು ಸರ್ಕಾರವು ಮುಂಜೂರು ಮಾಡಲಾಯಿತು. ಮಹಾರಾಜರ ಈ ಧೃಡ ಸಂಕಲ್ಪಗಳಿಂದ ಹಾಗೂ ನಿಷ್ಠಾವಂತ ಅಧಿಕಾರಿಗಳ ಪರಿಶ್ರಮದಿಂದ ಅಸ್ಪೃಶ್ಯ ವರ್ಗದ ಮಕ್ಕಳ ಪ್ರವೇಶದ ಬಗ್ಗೆ ಇದ್ದ ವಿರೋಧವು ಅವರ ಕಾಲದಲ್ಲೇ ಪೂರ್ತಿ ಸಡಿಲವಾಯಿತು.

ಹೀಗೆ ಪಂಚಮರಿಗಾಗಿ ಇಷ್ಟೆಲ್ಲಾ ಸುಧಾರಣಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದ ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಪಂಚಮರ ಬಗ್ಗೆ ಎಂತಹ ಕಾಳಜಿಯಿದ್ದಿತು. ಅವರ ಸಾಮಾಜಿಕ ಮನೋಭಾವ ಎಷ್ಟು ಪ್ರಗತಿ ಪರವಾಗಿದ್ದಿತೆಂಬುದನ್ನು ೧೯೩೬ ರ ಅಕ್ಟೋಬರ್ ತಿಂಗಳಲ್ಲಿ

ನಡೆದ ಘಟನೆಯೊಂದು ದೃಢೀಕರಿಸುತ್ತದೆ. ಪೂರ್ವ ಸಂಪ್ರದಾಯಗಳನ್ನು ಅನುಸರಿಸುತ್ತಿದ್ದ ಅರಮನೆಯನ್ನು ಪ್ರವೇಶಿಸುವ ಅವಕಾಶ ಪ್ರಾಚೀನ ಕಾಲದಿಂದಲು ಅನುಸರಿಸಿಕೊಂಡು ಬರಲಾಗಿದ್ದ ಜಾತಿ ಪದ್ಧತಿಗಳ ಕಟ್ಟು ನಿಟ್ಟಾದ ರೂಢಿಯ ಕಪಿಮುಷ್ಠಿಯ ಹಿಡಿತವನ್ನು ಸಡಿಲಿಸುವ ವಿಷಯದಲ್ಲಿ ಇದೆಷ್ಟು ಅಮೋಘವಾಗಿದ್ದ ಮಾರ್ಪಾಡು ಎಂಬುದನ್ನು ಈ ಘಟನೆಯ ಪ್ರತ್ಯಕ್ಷ ದರ್ಶಿಯಾಗಿದ್ದವರು ಹಾಗೂ ಪೂರ್ವ ಆಚರಣೆಗಳ ಒತ್ತಡ ಎಷ್ಟು ಕಟುನಿಟ್ಟಿನದು ಎಂಬುದನ್ನು ಅರಿತವರು ಮಾತ್ರ ಪೂರ್ಣವಾಗಿ ಗ್ರಹಿಸಿ, ನಿರ್ದಿಷ್ಟವಾಗಿ ಶ್ಲಾಘಿಸಬಲ್ಲರು. ಹೀಗೆ ಪಂಚಮರೂ ಸಹ ಅರಮನೆಯನ್ನು ಪ್ರವೇಶಿಸಬಹುದೆಂಬುದಾಗಿಯೂ ಹೇಳಿ ಅದರಂತೆ ಅವಕಾಶ ಮಾಡಿಕೊಟ್ಟ ಭಾರತದ ಸಂಸ್ಥಾನಾಧೀಶರುಗಳಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರೇ ಮೊಟ್ಟ ಮೊದಲನೆಯವರು ಎಂಬುದಾಗಿ ಬ್ರಿಟ್ಯಾನಿಕಾ ವಿಶ್ವಕೋಶದಲ್ಲಿರುವ ಹೊಗಳಿಕೆಯ ಮಾತುಗಳು ನಾವು ಹೆಮ್ಮೆ ಪಡುವಂತಹದ್ದಾಗಿವೆ.

ಒಟ್ಟಾರೆ ಐಷಾರಾಮದಿಂದ ದೂರವಿದ್ದು, ಪ್ರಜಾ ಕ್ಷೇಮವನ್ನೆ ಉಸಿರಾಗಿಸಿಕೊಂಡು, ಸ್ವದೇಶಿ ಸಂಪನ್ಮೂಲಗಳನ್ನು ವ್ಯವಸ್ಥಿತ ಯೋಜನೆ ಮತ್ತು ಬಳಕೆಯಿಂದ ರಾಜ್ಯದ ಆಧುನೀಕರಣ, ಅಸ್ಪೃಶ್ಯ ಮತ್ತು ಹಿಂದುಳಿದ ಜನಾಂಗದ ಹಿತ ರಕ್ಷಣೆಗಾಗಿ ಮಿಲ್ಲರ್ ಸಮಿತಿ ರಚನೆ, ಅರಮನೆಗೆ ಪಂಚಮರ ಪ್ರವೇಶಾವಕಾಶ, ದುರ್ಬಲರಿಗೆ, ಅಲ್ಪಸಂಖ್ಯಾತರಿಗೆ ಪ್ರಾತಿನಿಧ್ಯ, ಎಲ್ಲರಿಗೂ ಮುಕ್ತ ಶಿಕ್ಷಣ ಇತ್ಯಾದಿ ಹತ್ತಾರು ಪ್ರಥಮಗಳನ್ನು ಸಾಧಿಸಿದ ಕೀರ್ತಿ ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಸಲ್ಲುತ್ತದೆ. ಮಿಗಿಲಾಗಿ ಮೇಲ್ವರ್ಗದ ಜನರ ವಿರೋಧವಿದ್ದರೂ, ಹಿಂದುಳಿದ ಮತ್ತು ದಲಿತ ವರ್ಗದ ಜನರಿಗೆ ಪಕ್ಷರಹಿತ ನ್ಯಾಯ ಮತ್ತು ಸಮಾನತೆಯನ್ನು ತಮ್ಮ ಆಡಳಿತದಲ್ಲಿ ಒದಗಿಸಿಕೊಟ್ಟರು. ಸಾಮಾಜಿಕ ಅಸಮಾನತೆಯ ವಿರುದ್ಧ ಕಟ್ಟಿ ಬದ್ಧರಾಗಿದ್ದ ನಾಲ್ವಡಿಯವರು ಹಿಂದುಳಿದ ಮನೋಭಾವ, ಪಾಶ್ಚತ್ಯಾ ಶಿಕ್ಷಣ ಮತ್ತು ಸಂಸ್ಕೃತಿಯ ಪ್ರಭಾವ ಹಿರಿಯರ ಮಾರ್ಗದರ್ಶನ ಸಮುವರ್ತಿಗಳ ಪ್ರೇರಣೆ, ಪರಂಪರೆಗಳ ಪಾಲನೆ ಮುಂತಾದ ಅಂಶಗಳಿಂದ ಪರಿಪೂರ್ಣ ವ್ಯಕ್ತಿತ್ವ ಹೊಂದಿದ್ದ ನಾಲ್ವಡಿಯವರಿಗೆ 'ರಾಜರ್ಷಿ' ಎಂಬ ಬಿರುದು ಅನ್ವರ್ಥಗೊಂಡು ಸಕಾರಗೊಂಡಿರುವುದಲ್ಲದೆ, ಹಿದುಳಿದವರ ಮತ್ತು ಅಸ್ಪೃಶ್ಯರು ಸದಾ ಅವರಿಗೆ ಚಿರ ಋಣಿಗಳಾಗಿದ್ದಾರೆ[7].

**ಸ್ವಾತಂತ್ರ್ಯ ನಂತರ ದಲಿತರ ಸ್ಥಿತಿಗತಿ**

ಸ್ವಾತಂತ್ರ್ಯ ಪೂರ್ವದಲ್ಲಿ ಅನೇಕ ಸುಧಾರಣಾವಾದಿಗಳಿಂದ, ಮಹಾತ್ಮರುಗಳಿಂದ ಪ್ರೇರೇಪಿತರಾದ ಕೆಲವು ಪ್ರಗತಿಪರ ರಾಜಕಾರಣಿಗಳು, ರಾಜ ನೀತಿಜ್ಞರು, ದಲಿತವರ್ಗದವರನ್ನು ಅಭಿವೃದ್ಧಿ ಪಡಿಸುವ ಬಗ್ಗೆ ಸಾಕಷ್ಟು ಸುಧಾರಣಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದು ಪ್ರಗತಿಯ ದ್ಯೋತಕವೆಂದು ಹೇಳಬಹುದಾಗಿದೆ. ಅವುಗಳಲ್ಲಿ ಡಾ॥ ಬಿ.ಆರ್. ಅಂಬೇಡ್ಕರ್, ಜವಹರಲಾಲ್‌ನೆಹರು, ಇಂಧಿರಾಗಾಂಧಿ, ಬಾಬುಜಗಜೀವನರಾಮ್, ದೇವರಾಜ್‌ಅರಸ್ ಮೊದಲಾದವುಗಳನ್ನು ಪ್ರಮುಖವಾಗಿ ಸ್ಮರಿಸಬೇಕಾಗುತ್ತದೆ.

ಅಪ್ಪಟ ಗ್ರಾಮೀಣ ಹಿನ್ನೆಲೆ ಕುಟುಂಬದಿಂದ ಬಂದ ದೇವರಾಜ್‌ಅರಸುರವರು ಜನಸಾಮಾನ್ಯರ ಕಷ್ಟ, ನೋವುಗಳು ಹಾಗೂ ನ್ಯಾಯ ಅನ್ಯಾಯಗಳನ್ನು ಕಣ್ಣಾರೆ ಕಂಡು ಬೆಳೆದು ನಾಯಕರಾಗಿದ್ದ ಕಾರಣ ಅವರಿಗೆ ಭೂಮಿಯ ನಿಜ ಗೆಳೆಯ ಯಾರು? ಅವರ ವಾರಸುದಾರರು ಯಾರಾಗಬೇಕು? ಎಂಬ ಬಗ್ಗೆ ಸ್ಪಷ್ಟ ಅರಿವಿತ್ತು. ನೊಂದವರನ್ನು ಕಂಡರೆ ಮರಗುವ ಮನೋಧರ್ಮದವರಾಗಿದ್ದ ದೇವರಾಜ್‌ಅರಸುರವರು ತಮ್ಮ ವ್ಯಕ್ತಿತ್ವದ ಇನ್ನೊಂದು ಮುಖವಾದ ಧೈರ್ಯ ಹಾಗೂ ಎದೆಗಾರಿಕೆಯಿಂದ ತುಂಬ ಕ್ರಾಂತಿಕಾರಕವಾದ ಭೂ ಸುಧಾರಣಾ ಕಾಯ್ದೆಯನ್ನೇ ಕರ್ನಾಟಕದಲ್ಲಿ ಜಾರಿಗೆ ತಂದರು. ಇದರಿಂದ ಸಾವಿರಾರು ವರ್ಷಗಳಿಂದ ಶೋಷಿತರಾಗಿದ್ದ ಗೇಣಿದಾರರಿಗೆ (ಶೂದ್ರರು ಹಿಂದುಳಿದವರು ಹಾಗೂ ದಲಿತರೂ ಸೇರಿದ

ಹಾಗೆ) ನ್ಯಾಯಯುತವಾಗಿ ಭೂಮಿ ದೊರಕಿತು. ಇದು ಸಾಮಾಜಿಕ ನ್ಯಾಯದ ಬಗ್ಗೆ ಅರಸುರವರಿಗಿದ್ದ ಅಚಲ ನಿಷ್ಠೆ ಹಾಗೂ ದಕ್ಷತೆಗೆ ಸಾಕ್ಷಿಯಾಗಿದೆ. ಅರಸುರವರು ಧೀರತ್ವದ ಈ ಸುಧಾರಣಾ ಕೆಲಸ ಕರ್ನಾಟಕ ಮಾತ್ರ ಅಲ್ಲ ಇಡೀ ಭಾರತದ ಹೆಗ್ಗಳಿಕೆಗೆ ಪಾತ್ರವಾದದ್ದು ಈಗ ಚರಿತ್ರೆಯಾಗಿದೆ.

ಹಿಂದುಳಿದ ಜನಾಂಗಗಳ ಬಾಳಿನುಸಿರಾದ ಎಲ್.ಜಿ. ಹಾವನೂರ್ ಕಮೀಷನ್ನನ್ನು ನೇಮಿಸಿ ಅವರು ತಯಾರಿಸಿಕೊಟ್ಟ ವರದಿಯನ್ನು ತಮ್ಮ ವ್ಯಕ್ತಿತ್ವದ ಚಾಣಾಕ್ಷತೆಯಿಂದ ಮೇಲ್ವರ್ಗದ ಸಹೋದ್ಯೋಗಿಗಳಿಗೆಲ್ಲಾ ಸರಿಯಾಗಿ ಮನದಟ್ಟು ಮಾಡಿಕೊಟ್ಟು ಯಥವತ್ತಾಗಿ ಜಾರಿಗೊಳಿಸಿ ದುರ್ಬಲ ಜನಾಂಗಗಳಿಗೆಲ್ಲಾ ಶೇ. ೮೪ ರಷ್ಟು ಶಿಕ್ಷಣ ಮತ್ತು ನೌಕರಿಯಲ್ಲಿ ಮೀಸಲಾತಿಯನ್ನು ಒದಗಿಸಿಕೊಟ್ಟದ್ದು, ಇಡೀ ದೇಶದ ರಾಜಕೀಯ ನಾಯಕರು ಅರಸು ಅವರ ಕಡೆ ಗಮನಹರಿಸುವಂತೆ ಮಾಡಿದ್ದು ಗಮನಾರ್ಹವಾದದ್ದು.

ಕ್ರಾಂತಿಕಾರಿ ರಾಜಕಾರಣಿಯಾಗಿದ್ದ ಬಿ. ಬಸವಲಿಂಗಪ್ಪನವರು ಅರಸುರವರ ಸಂಪುಟದಲ್ಲಿ ಪೌರಾಡಳಿತ ಸಚಿವರಾಗಿದ್ದಾಗ ದಲಿತರು ತಲೆಯ ಮೇಲೆ ಮಲ ಹೊರುವ ಅಮಾನುಷ ಪದ್ಧತಿಯನ್ನು ನಿರ್ಮೂಲನೆ ಮಾಡಲು ದಿಟ್ಟ ಹೆಜ್ಜೆ ಇಟ್ಟು ಕೆಲಸ ಮಾಡುತ್ತಿದ್ದಾಗ, ಬಸವಲಿಂಗಪ್ಪನವರ ಈ ಕ್ರಾಂತಿಕಾರಕ ಕೆಲಸಕ್ಕೆ ಪೂರ್ಣ ಮನಸ್ಸಿನಿಂದ ದೇವರಾಜ ಅರಸುರವರು ಪ್ರೋತ್ಸಾಹ ನೀಡಿದ್ದೂ ಕೂಡ ಅವರ ಆರೋಗ್ಯಕರವಾದ ಮಾಗಿದ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ.

ಡಾ॥ ಎಂ.ಎಸ್.ಶೇಖರ್‌ರವರು ಹೀಗೆ ಹೇಳುತ್ತಾರೆ. ಮಾನವೀಯತೆಗೆ ಅಪೂರ್ವದಂತಿರುವ ಜೀತ ಮುಕ್ತಿಯನ್ನು ಜಾರಿಗೆ ತಂದರಲ್ಲದೆ, ಕೃಷಿ ಕಾರ್ಮಿಕರಿಗೆ ಕನಿಷ್ಠ ಕೂಲಿಯನ್ನು ನಿಗದಿಪಡಿಸಿ ಜನಸಾಮಾನ್ಯರ ಆರ್ಥಿಕ ಮಟ್ಟ ಸುಧಾರಿಸಲು ಪ್ರಮುಖ ಕಾರಣರಾದರು. ಅರಸು ಸರ್ಕಾರದ ಪ್ರಪ್ರಥಮ ಬಾರಿಗೆ ಜೀತ ಪದ್ಧತಿಯನ್ನು ಹೋಗಲಾಡಿಸಿತು. ಸುಮಾರು ೬೦-೭೦ ಸಾವಿರ ಜೀತದಾರರನ್ನು ಬಿಡುಗಡೆ ಮಾಡಿದರು. ಅವರಿಗೆ ಸ್ವತಂತ್ರವಾಗಿ ಬದುಕಲು ವ್ಯವಸ್ಥೆ ಮಾಡಿದರು.

ಅವರು ಮುಖ್ಯಮಂತ್ರಿ ಪದವಿಯನ್ನು ಸ್ವೀಕರಿಸಿದ ತಕ್ಷಣ ಕರ್ನಾಟಕದ ರಾಜಕಾರಣದಲ್ಲಿ ಹಲವಾರು ಕ್ರಾಂತಿಕಾರಕ ಬದಲಾವಣೆಗೆ ಕಾರಣವಾದದ್ದು ಐತಿಹಾಸಿಕ ಸತ್ಯ. ನಾಡು ಸಮತೋಲನವಾಗಿ ವಿಕಾಸವಾಗಬೇಕಾದರೆ, ಬಡವರ ಉದ್ಧಾರವಾಗಬೇಕಾದರೆ, ಪ್ರಬಲ ಕೋಮುಗಳನ್ನು ಒಳಗೊಳ್ಳಲೇಬೇಕೆಂಬ ರಹಸ್ಯವನ್ನು ಅತ್ಯಂತ ಸೂಕ್ಷ್ಮವಾಗಿ ಬಲ್ಲವರಾಗಿದ್ದು. ಹೀಗಾಗಿ ಭಾರತದ ಚರಿತ್ರೆಯಲ್ಲಿ ಕರ್ನಾಟಕವನ್ನು ಎದ್ದು ಕಾಣುವಂತೆ ಮಾಡಿದ ಕೆಲಸದಲ್ಲಿ ದೇವರಾಜ ಅರಸರ ಪಾತ್ರ ಹಿರಿದಾದು.

**ಉಳುವವನೇ ಹೊಲದೊಡೆಯ**

ಶ್ರಮ ಸಂಸ್ಕೃತಿಯ ಹಿನ್ನೆಲೆಯಿಂದ ಬಂದ ಅರಸು ಶ್ರಮಜೀವಿಗಳ ಯುಗವನ್ನೇ ಸ್ಥಾಪಿಸಿದ್ದುಂಟು. ಅಂದರೆ ಸಿರಿತನ ಬಡತನ, ಭೂಮಾಲೀಕ ಗೇಣಿದಾರ, ಗ್ರಾಮ ಮತ್ತು ನಗರಗಳ ನಡುವಿನ ಅಂತರವನ್ನು ಕಡಿಮೆ ಮಾಡುಲ ಪ್ರಯತ್ನಿಸುವುದರ ಮೂಲಕ ಶೋಷಣಾರಹಿತ ಸಮಾಜವನ್ನು ಕಟ್ಟಲು ಪ್ರಯತ್ನಿಸಿದ್ದು ಗಮನಾರ್ಹ ಅಂಶ. ಅವರು ಜಾರಿಗೆ ತಂದ ಪ್ರಗತಿಪರ ಶಾಸನಗಳಲ್ಲಿ ಪ್ರಮುಖವಾದದ್ದು ಉಳುವವನೇ ಹೊಲದೊಡೆಯ ಎಂಬುದು. ಅರಸು ಸ್ವತಃ ಗೇಣಿದಾರರ ದುಃಖ ದುಮ್ಮಾನಗಳನ್ನು ಅರಿತವರು. ಯಾರು ಗೇಣಿ ಮಾಡುತ್ತಿದ್ದರೋ ಅಂಥವರು ಭೂಮಿಯನ್ನು ಒಡೆಯರಿಗೆ ಕೊಡುವಂತಿಲ್ಲ. ಆ ಭೂಮಿಗೆ ಗೇಣಿದಾರರೇ ಒಡೆಯರು ಎಂಬ ಕಾನೂನು ಜಾರಿಗೆ ಬಂದ ತಕ್ಷಣವೇ ಗ್ರಾಮಾಂತರ ಪ್ರದೇಶಗಳಲ್ಲಿ ರೈತಾಪಿ ಜನರಲ್ಲಿ, ಗೇಣೀದಾರರಲ್ಲಿ ಹೊಸ ಆಸೆ ಉದಯವಾಯಿತು. ಈ

ಮೂಲಕ ಅರಸರಿಗೆ ಕೀರ್ತಿಯೂ ಲಭಿಸಿತು. ಅಲ್ಲದೆ ಭೂ ಸುಧಾರಣೆಗೆ ಸಂಬಂಧಿಸಿದ ಸಂಗತಿಯನ್ನು ನ್ಯಾಯಾಲಯದ ಪರಿಧಿಗೆ ತರದ ಹಾಗೆಯೂ ಮಾಡಿದರು. ನ್ಯಾಯಾಲಯದ ಬಗ್ಗೆ ಜನರು ಹೆದರುತ್ತಿದ್ದ ರೀತಿಯನ್ನು, ಅದಕ್ಕಾಗಿ ತಮ್ಮ ಆಸ್ತಿ ಪಾಸ್ತಿಯನ್ನೆಲ್ಲಾ ಮಾರಿ ನ್ಯಾಯಾಲಯದ ಕಟಕಟೆ ಹತ್ತುತ್ತಿದ್ದ ಮುಗ್ಧ ಜನರೆಲ್ಲರ ಪಾಡೆಲ್ಲವನ್ನೂ ಗಮನಿಸುತ್ತಿದ್ದ ಅರಸ ಅವರು ಭೂ ಮಾಲೀಕರ ಕಿರುಕುಳದಿಂದ ತಪ್ಪಿಸುವ ಸಲುವಾಗಿ ಭೂ ಸುಧಾರಣಾ ಮಂಡಳಿಗಳನ್ನು ರಚಿಸಿದರು. ಅಲ್ಲದೇ, ಅದು ಕೊಡುವ ತೀರ್ಪನ್ನು ನ್ಯಾಯಾಲಯಗಳು ಯಾವ ರೀತಿಯಲ್ಲೂ ಪ್ರಶ್ನಿಸದಿರುವಂತೆ ವ್ಯವಸ್ಥೆ ಮಾಡಿದರು. ಜನಸಾಮಾನ್ಯರ ಹತ್ತಿರವೇ ನಿರ್ಮಾಣಗೊಂಡ ಈ ಭೂ ಸುಧಾರಣಾ ಮಂಡಳಿಯಲ್ಲಿ ರೈತ ಪ್ರತಿನಿಧಿಗಳು, ಶಾಸಕರು ಮತ್ತು ದಲಿತ ಪ್ರತಿನಿಧಿಗಳು ಇರುವಂತೆ ವ್ಯವಸ್ಥೆ ಮಾಡಿದರು. ಇದು ಶ್ರಮಜೀವಿಗಳ ಪಾಲಿಗೆ ವರವಾಗಿ ಪರಿಣಮಿಸಿತು. ಗೇಣಿದಾರರಿಗೆ ಅನ್ಯಾಯವಾದರೆ ಭೂ ಸುಧಾರಣಾ ಮಂಡಳಿಗಳ ಮೂಲಕ ಕಾನೂನು ಸಲಹೆ ಪಡೆಯುವ ವ್ಯವಸ್ಥೆಯಾದಂತೆ ಭೂಮಿಯನ್ನು ತನ್ನ ಸ್ವಾಧೀನ ಪಡೆಯುವವರೆಗೆ ರಾಜ್ಯದಾದ್ಯಂತ ಅಭಿವೃದ್ಧಿ ಬ್ಯಾಂಕಿನಿಂದ ಹಣಕಾಸಿನ ನೆರವನ್ನು ಪಡೆಯಲು ಅವಕಾಶ ಮಾಡಿಕೊಟ್ಟರು.

ಅರಸು ಸರ್ಕಾರ ಪ್ರಥಮ ಬಾರಿಗೆ ಜೀತಪದ್ಧತಿಯನ್ನು ಹೋಗಲಾಡಿಸಿತು. ಸುಮಾರು ೬೦-೭೦ ಸಾವಿರ ಜೀತದಾಳುಗಳನ್ನು ಬಿಡುಗಡೆ ಮಾಡಿದರು. ಅವರು ಸ್ವತಂತ್ರವಾಗಿ ಬದುಕಲು ವ್ಯವಸ್ಥೆ ಮಾಡಿದರು. ಈ ಅಮಾನುಷ ಪದ್ಧತಿ ಇನ್ನೂ ತೆರೆಮರೆಯಲ್ಲಿ ಜೀವಂತವಾಗಿರುವುದನ್ನು ಇತ್ತೀಚಿನ ದಿನಗಳಲ್ಲಿ ಕಾಣುತ್ತಿದ್ದೇವೆ. ದುಡಿಯುವವರಿಗೆ ಕನಿಷ್ಠ ಕೂಲಿಯನ್ನು ನಿಗದಿಪಡಿಸುವುದರ ಮೂಲಕವಾಗಿ ಅರಸು ಸರ್ಕಾರದ ಯಜಮಾನಶಾಹಿಯ ಅವಕೃಪೆಗೆ ಪಾತ್ರವಾದರೂ ದುಡಿಯುವ ವರ್ಗದ ಪ್ರಶಂಸೆಗೆ ಕಾರಣವಾಯಿತು. ಕೂಲಿಯಲ್ಲಿ ತಾರತಮ್ಯವನ್ನು ತಪ್ಪಿಸಿದ್ದಲ್ಲದೆ, ಸಾಲಗಳಲ್ಲಿ ಮುಳುಗಿ ಮನೋವೇದನೆಯಿಂದ ಹಗಲಿರುಳು ನರಳುತ್ತಿದ್ದವರಿಗೆ ಮರುಪಾತಿಯಿಂದ ಮುಕ್ತಗೊಳಿಸಿದರು. ಅರಸು ಜಾರಿಗೆ ತಂದ ಈ ಋಣ ಪರಿಹಾರ ಕಾಯಿದೆ ರೈತಾಪಿಗಳಿಗೆ ವರದಾನವಾಗಿಬಿಟ್ಟಿತು. ಹೀಗೆ ಒಂದೊಂದು ಕಾನೂನು ಜಾರಿಗೆ ಬಂದಂತೆಲ್ಲಾ ಜನರ ವಿಶ್ವಾಸ ಹೆಚ್ಚತೊಡಗಿತು. ಅರಸು ಅವರಲ್ಲಿ ಹುಮ್ಮಸ್ಸು ಬೆಳೆಯಿತು. ಶ್ರಮಜೀವಿಗಳ ಏಳಿಗೆಗಾಗಿ ಆ ಮುಖಾಂತರ ಸಮೃದ್ಧ ಕರ್ನಾಟಕವನ್ನು ರೂಪಿಸುವ ಸಲುವಾಗಿ ಹಲವಾರು ಯೋಜನೆಗಳನ್ನು ಹಮ್ಮಿಕೊಂಡರು. ಜಲ ಅಭಿವೃದ್ಧಿ ಯೋಜನೆ, ವಿದ್ಯುತ್ ಯೋಜನೆ, ನೀರಾವರಿ ಕಾಮಗಾರಿ, ಮಣ್ಣನ್ನು ಸಂರಕ್ಷಿಸುವುದು ಇತ್ಯಾದಿಗಳಲ್ಲದೆ ಮನೆ ಕಟ್ಟಲು ಆರ್ಥಿಕ ಸಾಹಾಯ ನೀಡಿದರು. ಗೃಹ ನಿರ್ಮಾಣ ಸಂಸ್ಥೆಗಳ ಮೂಲಕ ಮನೆಗಳನ್ನು ಕಟ್ಟಿ ಹಂಚಿದರು. ಇದರಲ್ಲಿ ಅರ್ಧದಷ್ಟು ಮನೆಗಳನ್ನು ಹಿಂದುಳಿದ ವರ್ಗದವರಿಗೆ ಮೀಸಲಿರಿಸುವುದರ ಮೂಲಕ ಅರಸು ಅಸಮಾನತೆಯನ್ನು ತೊರೆಯುವ ಕೆಲಸದಲ್ಲಿ ದಾಪುಗಾಲು ಹಾಕಿದ್ದುಂಟು. ಭಾಗ್ಯಜ್ಯೋತಿ ಯೋಜನೆ ಸರ್ವರಿಗೂ ಶಿಕ್ಷಣ ಇವೆಲ್ಲಾ ಅರಸು ಅವರ ಜನಪರ ಮೌಲ್ಯಕ್ಕೆ ಸಾಕ್ಷಿಯೆನಿಸುತ್ತವೆ. ಮಲ ಹೊರುವ ಕಾಯಕದಂಥ ಅನಿಷ್ಟ ಪದ್ಧತಿಯನ್ನು ನಿಷೇದಿಸಿದ್ದು, ಅರಸು ಸರ್ಕಾರದ ಒಂದು ಕ್ರಾಂತಿಕಾರ ಬದಲಾವಣೆಯೆನ್ನಬಹುದು. ಮಲ ಹೊರುವ ಕಾಯಕದಲ್ಲಿ ತೊಡಗಿದ್ದವರನ್ನು ಪೌರ ಕಾರ್ಮಿಕರನ್ನಾಗಿ ಖಾಯಂ ಆಗಿ ಸರ್ಕಾರ ನೇಮಿಸಿಕೊಂಡಿತು. ಇದೊಂದು ಮರೆಯಲಾಗದ ಸಂಗತಿ ಎಂದು ಲೇಖಕ ಡಾ. ತಿಪ್ಪೇಸ್ವಾಮಿ ಅವರು ಕರ್ನಾಟಕದ ಅರಸು ಎಂಬ ಪುಸ್ತಕದ ಪುಟ ೫ ಮತ್ತು ೬ ರಲ್ಲಿ ಹೇಳಿರುತ್ತಾರೆ.

ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ದೇವರಾಜ್‌ಅರಸು ತಮ್ಮದೇ ಹೆಜ್ಜೆ ಗುರುತುಗಳನ್ನು ಮೂಡಿಸಿದ್ದಾರೆ. ಬಹುಶಃ ಸ್ವಾತಂತ್ರ್ಯೋತ್ತರ ಭಾರತದ ಇತಿಹಾಸದ ಕರ್ನಾಟಕದ ಪುಟಗಳನ್ನು ಅರಸು ಯುಗ ಎಂದು ವರ್ಗೀಕರಿಸುವಷ್ಟರ ಮಟ್ಟಿಗೆ ಅರಸು ಕಾಣಿಕೆ ಸಂದಿದೆ.

ಹಿಂದುಳಿದ ಜಾತಿಗಳಲ್ಲಿ ಆತ್ಮ ವಿಶ್ವಾಸವನ್ನು ತುಂಬಿ ಚದುರಿ, ಹೋಗಿದ್ದ ಅವರ ಶಕ್ತಿಯನ್ನು ಒಗ್ಗೂಡಿಸಿ ಮುಂದುವರಿದ ಜಾತಿವಂತರ ರಾಜಕೀಯವಾಗಿ ದೊಡ್ಡ ಸವಾಲನ್ನು ಒಡ್ಡಿದವರು ಅರಸರು ಸ್ವತಃ ಹಿಂದುಳಿದ ವರ್ಗಕ್ಕೆ ಸೇರಿದ ಅರಸು ಅವರನ್ನು ಹಿಂದುಳಿದ ವರ್ಗಗಳ ಧುರೀಣರು ಎಂದು ರಾಜಕೀಯವಾಗಿ ಗುರುತಿಸಲಾಗುತ್ತದೆ. ನನ್ನ ಪ್ರಕಾರ ಹಿಂದುಳಿದ ವರ್ಗದವರಿಗೆ ಶಕ್ತಿಯನ್ನು ತುಂಬಿದ್ದು ಕೇವಲ ಉದ್ಯೋಗಗಳ ಮೀಸಲಾತಿ ಅಥವಾ ರಾಜಕೀಯ ಹುದ್ದೆಗಳ ಮೀಸಲಾತಿಯಿಂದಲ್ಲ. ಅದು ಅರಸು ಅವರು ತೀವ್ರವಾಗಿ ಅನುಷ್ಠಾನಕ್ಕೆ ತಂದ ಭೂ ಸುಧಾರಣೆ ಮುಖಾಂತರ ಹಿಂದುಳಿದ ವರ್ಗದವರಲ್ಲಿ ನೈಜ ಶಕ್ತಿ ಮೊಳೆತು ಬೆಳೆಯಲು ಅರಸು ಅವರ ಭೂ ಸುಧಾರಣೆ ಮುಖ್ಯ ಕಾರಣ ಎಂಬುದು ನನ್ನ ದೃಢ ನಿಲುವು. ಅಲ್ಲದೆ ಅರಸುರವರು ಪಾರಂಪರಿಕ ಸಾಲಗಳ ಸಂಕೋಲೆಯಲ್ಲಿ ತೊಳಲುತ್ತಿದ್ದ ಬಾಂಧವರನ್ನು ಋಣಮುಕ್ತಗೊಳಿಸಿದರು, ಸರ್ಕಾರಿ ಜಮೀನಿನ ಮಂಜೂರಾತಿಯನ್ನು ನಿರ್ಭಿಡೆಯಿಂದ ಮಾಡಿ ಹಿಂದುಳಿದ ವಚರ್ಗಗಳನ್ನು ಆರ್ಥಿಕವಾಗಿ ಬಲಗೊಳಿಸಿದರು ಎಂದು ವಡ್ಡರ್ಸೆ ರಘುರಾಮಶೆಟ್ಟಿಯವರು ಬರೆದಿರುವ ಬಹುರೂಪಿ ಅರಸು ಎಂಬ ಪುಸ್ತಕದ ಮುನ್ನುಡಿಯಲ್ಲಿ ಜೆ.ಹೆಚ್.ಪಟೇಲ್ ಹೇಳಿರುವ ಮಾತುಗಳಿವು.

೧೯೭೪ ರಲ್ಲಿ ಸಂಸದೀಯ ವೇದಿಕೆಯಲ್ಲಿ ಸೋಲು ಗೆಲುವಿನ ನಡುವೆಯೂ ದೇವರಾಜ ಅರಸು ತಮ್ಮ ಹೊಸತನದ ದಾಖಲೆಯನ್ನು ಉಳಿಸಿಕೊಂಡರು. ಆ ವರ್ಷ ಅವರು ಈ ದೇಶದಲ್ಲಿ ಒಂದು ಅತ್ಯಂತ ಪುರೋಗಾಮಿ ಶಾಸನವೆಂದು ಮನ್ನಣೆ ಪಡೆದಿರುವ ಭೂ ಸುಧಾರಣಾ ಶಾಸನವನ್ನು ಜಾರಿಗೆ ತಂದರು. ಅನೇಕರ ಬದುಕಿಗೆ ಸ್ವಂತಿಕೆಯ ನೆಲೆಯನ್ನೊದಗಿಸಿ ಕೇವಲ ಮಂದಿಯ ನೆಲೆ ತಪ್ಪಿಸಿದ ಶಾಸನವಿದು.

ಸ್ವಾತಂತ್ರ್ಯಪೂರ್ವದ ದಿನಗಳಲ್ಲಿ ಉಳವವನೇ ಹೊಲದೊಡೆಯನೆಂದು ಮಹಾತ್ಮಗಾಂಧಿ ಹೇಳಿದ ಮಾತನ್ನು ಜಪದ ವಸ್ತುವಾಗಿಯೇ ಉಳಿಸಿಕೊಂಡು ಬಂದು ಅದನ್ನು ಆಚರಣೆಗೆ ತರಲಾಗದ ಗಾಂಧೀವಾದಿ ರಾಜಕಾರಣಿಗಳ ಗುಪಿನಲ್ಲಿ ಅರಸು ಎದ್ದು ಕಂಡರು.

ಇಂದಿಗೂ ಈ ದೇಶದಲ್ಲಿ ಗಾಂಧಿ ಹೇಳಿದ ಉಳವವನೇ ಹೊಲದೊಡೆಯ್ಯ ಎಂಬ ಮಾತನ್ನು ದೇವರಾಜಅರಸರಷ್ಟು ಅರ್ಥವತ್ತಾಗಿ ಆಚರಣೆಗೆ ತಂದವರು ಇನ್ನೊಬ್ಬರಿಲ್ಲ.

ಭೂ ಒಡೆತನಕ್ಕೂ ಸಾಮಾಜಿಕ ಅಂತಸ್ತಿಗೂ ಧಾರ್ಮಿಕ ವಿಧಿ ನಿಯಮದ ಸಂಕೋಲೆಯಿರುವ ಭಾರತದಲ್ಲಿ ಉಳುವವನನ್ನೇ ಹೊಲದೊಡೆಯನನ್ನಾಗಿ ಮಾಡುವ ಕೆಲಸ ಸಾಮಾನ್ಯವಾದುದಲ್ಲ. ಐದು ಸಹಸ್ರ ವರ್ಷಗಳ ಪರಂಪರೆಯುಳ್ಳ ಭೂ ಮಾಲಿಕತ್ವದ ವಿಸರ್ಜನೆ ಸುಲಭದ ಕೆಲಸವಲ್ಲ. ಈ ದೇಶದಲ್ಲಿ ಯಾವುದೇ ಪುರೋಗಾಮಿ ಶಾಸನ ಬಂದರೂ ಅದನ್ನು ಪತಿಗಾಮಿಯಾಗಿ ಪರಿವರ್ತಿಸುವ ಸಾಮರ್ಥ್ಯ ರಾಜಕೀಯ ವ್ಯವಸ್ಥೆಗಿದೆ. ವ್ಯವಸ್ಥೆಯ ಈ ಬಲದ ಪಜ್ಞೆಯಿರುವ ದೇವರಾಜ ಅರಸು ತಮ್ಮ ಭೂ ಸುಧಾರಣಾ ಶಾಸನ ಅರ್ಥವತ್ತಾಗಿ ಆಚರಣೆಗೆ ಬರುವಂತೆ ಮಾಡಲು ಭೂ ಪಂಚಾಯಿತಿಗಳೆಂಬ ಜನತಾ ನ್ಯಾಯಾಲಯಗಳ ಸೃಷ್ಟಿ ಮಾಡಿದರು. ಜನತಾ ನ್ಯಾಯಾಲಯವೆಂಬುದು ಮೂಲತಃ ಕಮ್ಯುನಿಷ್ಟ್ ಕಲ್ಪನೆ. ೧೯೭೧ ರಲ್ಲಿ ದೇವರಾಜಅರಸು ಬೆಂಗಳೂರಿನ ಬಸವನಗುಡಿಯ ಭಾರತಿ ಕಲ್ಯಾಣಮಂದಿರದಲ್ಲಿ ನಡೆದ ಇಂದಿರಾ ಕಾಂಗೆಸ್ ಕಾರ್ಯಕರ್ತರ ಸಭೆಯಲ್ಲಿ ಜನತಾ ನ್ಯಾಯಾಲಯ ಕಲ್ಪನೆಯನ್ನು ಮುಂದಿಟ್ಟಾಗ ನಕ್ಕವರುಂಟು. ಇದು ಆಗದ ಹೋಗದ ಕೆಲಸವೆಂದು ಗೇಲಿ ಮಾಡಿದವರುಂಟು.

ಈ ದೇಶದಲ್ಲಿ ಬಹುತೇಕ ರಾಜಕಾರಣಿಗಳು ಸಂದರ್ಭಕ್ಕೆ ಸಲ್ಲುವ ಭರವಸೆಯ

ಮಾತುಗಳನ್ನಾಡಿ ಜನಸಾಮಾನ್ಯರನ್ನು ಭ್ರಮಾಲೋಕದಲ್ಲಿ ತಿರುಗಾಡಿಸಿದ್ದೇ ಒಂದು ಇತಿಹಾಸ. ಇದಕ್ಕೆ ವ್ಯತಿರಿಕ್ತವಾಗಿ ನಡಕೊಂಡವರು ದೇವರಾಜಅರಸರು. ೧೯೭೧ ರಲ್ಲಿ ಅವರು ಉಳುವವನನ್ನೇ ಹೊಲದೊಡೆಯನನ್ನಾಗಿ ಮಾಡುವ ಪುರೋಗಾಮಿ ಶಾಸನ ತರುವ ಭರವಸೆ ಕೊಟ್ಟಿದ್ದರು. ಇಂತಹ ಶಾಸನವನ್ನು ಅರ್ಥವತ್ತಾಗಿ ಆಚರಣೆಗೆ ತರಲು ಜನತಾ ನ್ಯಾಯಾಲಯಗಳನ್ನು ರಚಿಸುವುದಾಗಿ ಹೇಳಿದ್ದರು.

ವಿಚಾರವಾದಿಯಾದ ಈ ವ್ಯಕ್ತಿಗೆ ಆಡಿದ ಮಾತಿನಲ್ಲಿ ನಂಜಿಕೆಯಿತ್ತದೆಂಬುದರಲ್ಲಿ ನನಗೆ ಸಂಶಯವಿರಲಿಲ್ಲ. ಆದರೆ ಅವರಿಗೆ ನುಡಿದಂತೆ ನಡೆವ ರಾಜಕೀಯ ಕಸುವು ಇದೆಯೆಂದು ನಾನು ತಿಳಿದಿರಲಿಲ್ಲ. ಭಾರತೀಯ ವಿದ್ಯಮಾನದಲ್ಲಿ ಇದು ತೀರಾ ಕಷ್ಟದ ಕೆಲಸ.

ಭೂ ಸುಧಾರಣ ಶಾಸನ ಸಾಮಾಜಿಕ ವ್ಯವಸ್ಥೆಯನ್ನೇ ಒಮ್ಮೆ ಅಲುಗಿಸಿತು. ಭೂ ಮಾಲಿಕರ ಆಜ್ಞಾನುವರ್ತಿಗಳಾಗಿ ಯಜಮಾನ ಸಂಸ್ಕೃತಿಗೆ ತಲೆಬಾಗಿ ಬದುಕಿ ಬಂದಿದ್ದ ಗೇಣಿದಾರ ಜನರು ಸೆಟೆದು ನಿಂತು ತಮ್ಮ ಉಳುಮೆಯ ಭೂಮಿಯ ಒಡೆತನ ಪಡೆಯಲು ಅವಕಾಶವಾಯಿತು. ಇದು ಗೇಣಿದಾರರಿಗೆ ಸ್ವತಂತ್ರ ಬದುಕಿನ ಆಸರೆಯನ್ನು ಒದಗಿಸುವ ಆರ್ಥಿಕ ಕ್ರಮ ಮಾತ್ರವಾಗಿರದೇ ಸಾಮಾಜಿಕ ಬಂಧನಗಳಿಂದಲೂ ಅವರನ್ನು ಬಿಡುಗಡೆಗೊಳಿಸಿದ ಸಾಮಾಜಿಕ ಕ್ರಾಂತಿಯು ಆಗಿತ್ತು.

ತಮ್ಮ ಕಲ್ಪನೆಯ ಕ್ರಾಂತಿಯನ್ನು ಮುನ್ನಡೆಸಲು ಆಡಳಿತ ಯಂತ್ರವನ್ನು ಸಜ್ಜುಗೊಳಿಸದರು. ಸಂಭಂಧಪಟ್ಟ ಸಹಾಯಕ ಆಯುಕ್ತರ ಅಸಿಸ್ಟೆಂಟ್ ಕಮೀಷನರ್ ಅಧ್ಯಕ್ಷತೆಯಲ್ಲಿ ತಾಲೂಕಿನ ಶಾಸಕ ಮತ್ತು ಮೂವರು ಸದಸ್ಯರಿಂದ ಕೂಡಿದ ಭೂ ಪಂಚಾಯಿತಿಗಳನ್ನು ರಚಿಸಿದರು. ಕಮ್ಯುನಿಷ್ಟ್ ಕಲ್ಪನೆಯ ಜನತಾ ನ್ಯಾಯಾಲಯಗಳ ಮಾದರಿಯಲ್ಲಿ ರೂಪಿತವಾದ ಈ ಭೂಪಂಚಾಯಿತಿಗಳು ಪೂರ್ಣ ಕೃತಿಯಲ್ಲಿ ನ್ಯಾಯಾಲಯಗಳಾಗಿದ್ದವು. ಪಂಚಾಯಿತಿಗಳಲ್ಲಿ ವಿಚಾರಣೆಗೆ ಬರುವ ವಿವಾದಗಳಲ್ಲಿ ವಕೀಲರ ಪ್ರವೇಶಕ್ಕೆ ಅವಕಾಶವಿರಲಿಲ್ಲ. ಗೇಣಿದಾರನು ತನ್ನ ಉಳುಮೆಯಲ್ಲಿರುವ ಜಮೀನಿನ ವಿವರ ಸಹಿತ ಸಲ್ಲಿಸಿದ ಅರ್ಜಿಯೇ ಪಂಚಾಯಿತಿಯ ತೀರ್ಪಿಗೆ ಆಧಾರ. ಅವರ ವಿರುದ್ಧ ಮೇಲಿನ ನ್ಯಾಯಾಲಯಗಳಿಗೆ ಹೋಗಲು ಸಾಧ್ಯವಿರಲಿಲ್ಲ. ಉಳುಮೆಗಾರ ಯಾರೆಂಬುದರ ಬಗ್ಗೆ ವಿವಾದ ತಲೆದೋರಿದರೆ ಭೂ ಪಂಚಾಯಿತಿ ಸದಸ್ಯರು ಸ್ಥಳ ಪರಿಶೀಲನೆ ಮಾಡಿ ತೀರ್ಪು ಕೊಡುವ ಪದ್ಧತಿ ರೂಪಿತವಾಯಿತು. ನಿಜವಾದ ಉಳುಮೆಗಾರ ಯಾರೆಂಬುದನ್ನು ಗುರುತಿಸಿ ಅವನಿಗೆ ಒಡೆತನ ನೀಡುವ ಕೆಲಸಕ್ಕೆ ಸ್ಥಳ ಪರಿಶೀಲನೆ ಮಾತ್ರ ಅವಲಂಬಿಸಿರಲಿಲ್ಲ. ವಿವಾದ ತಲೆದೂರಿದ ಎಲ್ಲಾ ಪ್ರಕರಣಗಳಲ್ಲಿಯೂ ಪೋಲಿಸ್ ಸಿಬ್ಬಂದಿ ಮತ್ತು ಕಂದಾಯ ಇಲಾಖೆಯ ಅಧಿಕಾರಿಗಳ ಸೇವೆಯನ್ನು ಪಡೆಯಲಾಯಿತು. ಭೂ ಪಂಚಾಯಿತಿಗೆ ಸದಸ್ಯರನ್ನು ನೇವಕ ಮಾಡುವಾಗಲು ಅರಸು ವಿಶೇಷ ಎಚ್ಚರಿಕೆ ವಹಿಸಿದ್ದರು. ಇವುಗಳು ಜಿಲ್ಲಾ ಮಟ್ಟದ ನೇಮಕಾತಿ ಸಮಿತಿಗಳ ಹಾದಿ ಹಿಡಿಯದಂತೆ ನೋಡಿಕೊಳ್ಳಲು ಕಾವಲು ಕಣ್ಣಿಟ್ಟಿದ್ದರು. ಇದೆಲ್ಲದರ ಪರಿಣಾಮವಾಗಿ ಭೂ ಪಂಚಾಯಿತಿಯ ಸದಸ್ಯರುಗಳ ವಿರುದ್ಧ ಭ್ರಷ್ಟಾಚಾರದ ಆರೋಪಗಳು ಕೇಳಿಬರಲಿಲ್ಲ.

ಭೂ ಶಾಸನ ಜಾರಿಗೆ ಬಂದ ಎರಡು ವರ್ಷಗಳ ಅವಧಿಯಲ್ಲಿ ಭೂ ಪಂಚಾಯಿತಿಗಳು ನೀಯತ್ತಿನಿಂದ ಕೆಲಸ ಮಾಡಿದವು. ಸುಮಾರು ೧೫ ಲಕ್ಷ ಗೇಣಿದಾರ ಕುಟುಂಬಗಳಿಗೆ ಅವರ ಉಳುಮೆಯ ಜಮೀನಿನ ಒಡೆತನ ನೀಡಿದವು. ಅರಸು ಕಲ್ಪನೆಯ ಜನತಾ ನ್ಯಾಯಾಲಯ ಉದ್ದೇಶದ ಈಡೇರಿಕೆಯಲ್ಲಿ ಸಫಲವಾಯಿತು. ಕಲುಷಿತ ಸಾಮಾಜಿಕ ವ್ಯವಸ್ಥೆಯಲ್ಲಿ ಜನತಾ ನ್ಯಾಯಾಲಯ ಕಲ್ಪನೆ ಹೀಗೆ ಯಶಸ್ವಿಯಾಗಿ ಕೆಲಸ ಮಾಡಿದ್ದು ಒಂದು ಪವಾಡವೇ.

ಸಾಮಾಜಿಕ ದುರ್ಬಲರ ಬದುಕಿಗೆ ಭೂ ಸುಧಾರಣಾ ಶಾಸನಗಳ ಮೂಲಕ ಸ್ಪಂತಿಕೆಯ

ನೆಲೆ ಒದಗಿಸಿ ಅರಸು ಸಮಾಜದಲ್ಲಿ ಪ್ರತಿಷ್ಠಿತರ ಕೆಂಗಣ್ಣಿಗೆ ಗುರಿಯಾದರು. ಭೂ ಒಡೆತನವನ್ನು ಕಳಕೊಂಡ ಸಾವಿರಾರು ಕುಟುಂಬಗಳವರು ಅರಸುರವರನ್ನು ಮನಸಾರೆ ಶಪಿಸಿದರು. ರಾಜಕೀಯವಾಗಿ ಪ್ರಜ್ಞಾವಂತರಾದ ಈ ಜನರು ಅರಸು ವಿರುದ್ಧ ಪ್ರಚಾರದ ಸಮರವನ್ನೇ ಸಾರಿದರು.

ಭೂ ಪಂಚಾಯಿತಿಗಳೆನ್ನುವ ಜನತಾ ನ್ಯಾಯಾಲಯಗಳಿಗೆ ಸಮಾಜದಲ್ಲಿ ಅಪ್ರತಿಷ್ಠಿತರೆನ್ನಿಸಿದ ಅನಾಮಧೇಯರನ್ನು ಹುಡುಕಿ ಹೆಕ್ಕಿ ನೇಮಕ ಮಾಡಿದ ಅರಸು ಕ್ರಮ ಪ್ರಜ್ಞಾವಂತ ಜನರನ್ನು ಇನ್ನಷ್ಟು ಕೆರಳಿಸಿತು. ಆಗ ಅರಸು ಮಾಡಿದ್ದು ಈ ದೇಶದಲ್ಲಿ ರಾಜಕಾರಣಿಗಳು ಮೊದಲಿನಿಂದಲೂ ಪಠಿ ಪಾದಿಸುತ್ತಲೇ ಬಂದಿದ್ದ ತತ್ವಗಳನ್ನು ಆಚರಣೆಗೆ ತಂದದ್ದು ಎಂಬುದನ್ನು ಹೇಳುವ ಜನರೂ ಇರಲಿಲ್ಲ. ಅರಸು ಎತ್ತಿ ಕಟ್ಟಿದ ದುರ್ಬಲ ವರ್ಗಗಳ ಶಾಸಕರು ತಮ್ಮ ವೈಯಕ್ತಿಕ ಸುಖ ಸವಲತ್ತುಗಳ ಬಗ್ಗೆ ಕೊಟ್ಟಷ್ಟು ಗಮನವನ್ನು ಅರಸು ಬೆಳೆಸಲು ಬಯಸಿದ್ದ ದುರ್ಬಲ ವರ್ಗಗಳ ರಾಜಕೀಯ ಶಕ್ತಿಯ ಕಡೆಗೆ ನೀಡಲಿಲ್ಲ. ಸಾಮಾಜಿಕ ಆರ್ಥಿಕ ವ್ಯವಸ್ಥೆಯನ್ನು ಅಲುಗಾಡಿಸಿ ಪರಿವರ್ತನೆಗೆ ದಾರಿ ಮಾಡುವ ಅರಸು ಕ್ರಮಗಳಿಗೆ ರಾಜಕೀಯ ಬಲ ನೀಡಲು ದುರ್ಬಲ ವರ್ಗಗಳ ಶಾಸಕರಿಂದ ಆಗಲಿಲ್ಲ. ಅರಸು ನಂಬಿದ್ದ ಪುರೋಗಾಮಿ ತತ್ತ್ವ ವಿಚಾರಗಳನ್ನು ಅರ್ಥ ಮಾಡಿಕೊಳ್ಳುವ ಬುದ್ಧಿ ಬಲವಾಗಲಿ, ಮಾನಸಿಕ ಸಿದ್ಧತೆಯಾಗಲಿ ಆ ಶಾಸಕರಿಗೆ ಇರಲಿಲ್ಲ. ಎಲ್ಲರೊಟ್ಟಿಗೆ ತಮ್ಮದೂ ಒಂದು ಗೋವಿಂದ ಎನ್ನುವ ರೀತಿಯಲ್ಲಿ ಅವರು ಗುಲ್ಲೆಬ್ಬಿಸುತ್ತಿದ್ದರೇ ಹೊರತು ಬೇರೇನು ಅವರಿಂದ ಆಗಲಿಲ್ಲ. ದೇವರಾಜ ಅರಸು ನಾಯಕರಾಗಿದ್ದ ಆಗಿನ ಇಂದಿರಾ ಕಾಂಗ್ರೆಸ್ಸಿನ ಶಾಸಕಾಂಗ ಪಕ್ಷದ ೧೬೦ ಮಂದಿ ಶಾಸಕರಲ್ಲಿ ೧೦-೨೦ ಮಂದಿ ಮಾತ್ರ ಪುರೋಗಾಮಿ ರಾಜಕೀಯ ತತ್ತ್ವಕ್ಕೆ ಬದ್ಧರಾಗಿದ್ದರು. ಅದರಲ್ಲಿಯೂ ಮಂತ್ರಿ ಪದವಿ ಅಥವಾ ಇತರ ಅಧಿಕಾರ ಸ್ಥಾನ ಲಭಿಸಿದ ಸಾಮಾಜಿಕ ದುರ್ಬಲರು, ವಿಲಾಸಪ್ರಿಯರು ಸುಖಲೋಲುಪರೂ ಆದರು. ಹೀಗಾಗಿ ದುರ್ಬಲ ಜನಾಂಗದ ಶಾಸಕರು ಅರಸುರವರಿಗೆ ರಾಜಕೀಯವಾಗಿ ಒಂದು ಹೊರೆಯೇ ಆದರು.

ಮುಖ್ಯಮಂತ್ರಿಯಾದ ಮೇಲೆ ದೇವರಾಜ ಅರಸರ ಜೀವನ ಕ್ರಮವು ಕೂಡ ಬದಲಾಗತೊಡಗಿತು. ಅವರು ಮೊದಲು ಸೇದುತ್ತಿದ್ದ ಪನಾಮಾ ಸಿಗರೇಟಿನ ಸ್ಥಾನಕ್ಕೆ ೫೫೫ ಸಿಗರೇಟ್ ಮತ್ತು ಪೈಪ್ ಬಂದಿದ್ದವು. ಅವರ ಪಾನಪ್ರಿಯತೆ ಅತ್ಯಂತ ಬೆಲೆಬಾಳುವ ಸ್ಕಾಚ್ ವಿಸ್ಕಿಯಾದ ರಾಯಲ್ ಸೆಲ್ಯೂಟ್‌ನ ಮಟ್ಟಕ್ಕೆ ಏರಿತ್ತು ಅರಸರ ರಸಿಕತನದ ಸುತ್ತ ಹಲವಾರು ಕಥೆಗಳು ಹೆಣೆಯಲ್ಪಟ್ಟವು.

**ಬದುಕಿನ ಆಸರೆ ಕಲ್ಪಿಸಿದ ಜೀತ ವಿಮುಕ್ತಿ**

ದೀನ ಜನತೆಯ ಬಂಧ ವಿಮೋಚನೆಯ ತಮ್ಮ ಕಾಯಕದಲ್ಲಿ ಅರಸು ಆಗಲೂ ವಿರಮಿಸಿರಲಿಲ್ಲ. ಜೀವನಕ್ಕೆ ಸಾಕಷ್ಟು ಆದಾಯವಿಲ್ಲದ ಸಣ್ಣ ಪುಟ್ಟ ಹಿಡುವಳಿದಾರರು, ಕೃಷಿ ಕಾರ್ಮಿಕರು, ಕುಂಬಾರರು, ಅಗಸರು, ಕಮ್ಮಾರರು ಮತ್ತಿತರ ಕಸುಬುದಾರ ಕುಟುಂಬಗಳು ಸಾಲದ ಶೂಲದಲ್ಲಿ ಸಿಕ್ಕಿವೆ ಎಂಬುದರ ಅರಿವು ಅರಸರಿಗಿತ್ತು. ಇಂತಹ ಬಡ ಜನರು ತಮ್ಮ ಬದುಕಿನ ಬಂಡಿ ಸಾಗಿಸಲು ಊರಿನ ಶ್ರೀಮಂತರಿಂದ ಸಾಲ ಪಡೆದು ಇದ್ದು ಬದ್ದವನೆಲ್ಲ ಒತ್ತೆ ಇಡುತ್ತಿದ್ದರು. ತುಂಡು ಜಮೀನು ಇದ್ದರೆ ಅದನ್ನು ಒತ್ತೆ ಇಡುತ್ತಿದ್ದರು. ಮನೆಯಲ್ಲಿರುವ ಒಡವೆ ವಸ್ತುಗಳೆಲ್ಲವನ್ನು ಮಾರಾಟಮಾಡಿ ಅಂಗಡಿಗಳಲ್ಲಿ ಅಡವಿಡುತ್ತಿದ್ದರು. ಹೀಗೆ ಶ್ರೀಮಂತರ ಹಂಗಿನಲ್ಲಿ ಬದುಕಿ ಬಂದಿರುವ ಬಡ ಜನರ ಸಾಲದ ಹೊರೆಯನ್ನು ಒಂದೇಟಿನಲ್ಲಿ ಇಳಿಸುವ ತೀರ್ಮಾನಕ್ಕೆ ಅರಸು ಬಂದರು. ೧೯೭೫ ರಲ್ಲಿ ಬಡ ಜನರು ಶ್ರೀಮಂತರಿಂದ ಪಡೆದಿದ್ದ ಎಲ್ಲಾ ಸಾಲವನ್ನು ಮನ್ನಾ ಮಾಡುವ ಶಾಸನವನ್ನು ಜಾರಿಗೆ ತಂದರು. ಇದನ್ನು ಋಣ ಪರಿಹಾರ ಕಾಯಿದೆ ಅಂತಲೂ ಕರೆಯುತ್ತಾರೆ.

ಜಿಲ್ಲಾಧಿಕಾರಿಗಳ ಸಭೆ ಕರೆದು ಈ ಕಾಯಿದೆಯ ಮೂಲ ಉದ್ದೇಶ ಮತ್ತು ಅದರ ಅನುಷ್ಠಾನದ ಬಗ್ಗೆ ನಿರ್ದೇಶನ ನೀಡಿದರು. ಶ್ರೀಮಂತ ಸಾಹುಕಾರರ ಒಡವೆಗಳನ್ನು ಪತ್ತೆ ಹಚ್ಚಿ ಸಾಲಿಗರಿಗೆ ಹಿಂತಿರುಗಿಸುವ ಜವಾಬ್ದಾರಿಯನ್ನು ಜಿಲ್ಲಾಧಿಕಾರಿಗಳಿಗೆ ವಹಿಸಿದರು. ಮುಖ್ಯ ಮಂತ್ರಿಯ ನೇರ ಆದೇಶದಿಂದ ಉತ್ತೇಜಿತರಾದ ಜಿಲ್ಲಾಧಿಕಾರಿಗಳು ಕಾನೂನು ಜಾರಿಗೆ ಕ್ಷೇತ್ರಕ್ಕಿಳಿದರು. ಜಾರಿಗೆ ಬಂದ ಕೆಲವೇ ತಿಂಗಳುಗಳಲ್ಲಿ ಕಾನೂನಿನ ಬಹುತೇಕ ಉದ್ದೇಶ ಈಡೇರಿತು. ಬಡ ಜನರು ಗಿರವಿ ಇಟ್ಟಿದ್ದ ಚಿನ್ನಾಭರಣಗಳು ಮತ್ತಿತರ ಒಡವೆಗಳು ಮರಳಿ ಅವರ ಕೈ ಸೇರಿದವು. ಅರಸು ಆಡಳಿತದಲ್ಲಿ ಜನ ಮರೆಯಲಾಗದ ದಾಖಲೆಯಿದು. ಋಣ ಪರಿಹಾರ ಕಾಯಿದೆಯ ಬೆನ್ನಲ್ಲೇ ಅರಸು ಇನ್ನೊಂದು ವಿಮೋಚನಾ ಸಮರ ಸಾರಿದರು. ಅದು ಗ್ರಾಮಾಂತರ ಪ್ರದೇಶಗಳಲ್ಲಿ ಆಚರಣೆಯಲ್ಲಿದ್ದ ಜೀತ ಪದ್ಧತಿಯ ನಿಷೇಧಕ್ಕೆ ಸಂಬಂಧಿಸಿದ್ದು.

ಭಾರತೀಯ ಸಮಾಜಕ್ಕೆ ಅಂಟಿಕೊಂಡು ಬಂದಿದ್ದ ಅನೇಕ ಸಾಮಾಜಿಕ ಜಾಡ್ಯಗಳಲ್ಲಿ ಜೀತ ಪದ್ಧತಿ ಬಹಳ ನಿಕೃಷ್ಟವಾದುದು. ಪ್ರಾಣಿಗಳಂತೆ ಮನುಷ್ಯರ ಮಾರಾಟದಲ್ಲಿ ರೂಪುಗೊಂಡಿದ್ದ ಗುಲಾಮಗಿರಿ, ಜೀತಪದ್ಧತಿ ಹೀನಾಯವಾದದ್ದು, ಕಡುಬಡವರಾದ ಕೃಷಿ ಕಾರ್ಮಿಕರು ತಮ್ಮ ಹೊಟ್ಟೆ ಹೊರೆದುಕೊಳ್ಳಲು ಅಥವಾ ಮಕ್ಕಳನ್ನು ಸಾಕಲು ಊರಿನ ಸಾಹುಕಾರರಿಂದ ೨೦೦ – ೩೦೦ ರೂಪಾಯಿಗಳಷ್ಟು ಸಾಲ ಪಡೆದು ಅದನ್ನು ತೀರಿಸಲು ಸಾಹುಕಾರನ ಮನೆಯಲ್ಲಿ ಒತ್ತೆಯಾಳುಗಳಾಗಿ ದುಡಿಯುತ್ತಿದ್ದರು. ಜೀವನದುದ್ದಕ್ಕೂ ಸಂದಾಯ ಮಾಡಲಾಗದ ಸಾಲವಿದು. ಸಾಲಕ್ಕೆ ಒತ್ತೆಯಾಳಾಗಿ ಕೆಲಸ ಮಾಡುವವನಿಗೆ ವೇತನವೆಂಬುದಿಲ್ಲ. ಜೀವನಪರ್ಯಂತ ಜೀತದಾಳಾಗಿ ಇರುವುದೇ ಅವನ ಪಾಡು. ಸಾಹುಕಾರನ ಮನೆಯ ಕೊಟ್ಟಿಗೆಯಲ್ಲಿ ವಾಸ ಮಾಡಿ ಮುಂದೆ ಎಸೆದ ಅನ್ನ ಅಥವಾ ಮುದ್ದೆಯನ್ನು ತಿಂದು ಜೀವ ಸವೆಸುವುದೇ ಇಂತಹ ಸಾಲಿಗನ ಗತಿ. ಜೀತದಾಳು ತಂದೆ ಸತ್ತರೆ ಆತನ ಮಕ್ಕಳಲ್ಲಿ ಒಬ್ಬನನ್ನು ಜೀತಕ್ಕೆ ತೆಗೆದುಕೊಳ್ಳುವ ಅಮಾನುಷ ಸಂಪ್ರದಾಯವೂ ಜಿತ ಪದ್ಧತಿಯಲ್ಲಿ ಅಡಕವಾಗಿತ್ತು.

ಈ ಜೀತ ಪದ್ಧತಿ ವ್ಯಾಪಕವಾಗಿ ಆಚರಣೆಯಲ್ಲಿದ್ದಿಲ್ಲವಾದರೂ ಬಡವರ ಸಾಲ ತೀರುವ ತನಕ ಪುಕ್ಕಟೆಯಾಗಿ ದುಡಿಸಿಕೊಳ್ಳುವ ಪದ್ಧತಿ ಆಚರಣೆಯಲ್ಲಿತ್ತು. ಇಂತಹ ಹೀನ ಪದ್ಧತಿಯನ್ನು ನಿಷೇಧಿಸುವ ಕಾನೂನು ಮಾಡಿದ ಮೇಲೆ ಜೀತದಾಳುಗಳನ್ನು ಪತ್ತೆ ಹಚ್ಚುವ ಕಠಿಣ ಕೆಲಸ ಸರ್ಕಾರದ ಮೇಲೆ ಬಿತ್ತು. ಆದರೆ ಅರಸು ತಮ್ಮ ಆಡಳಿತ ಯಂತ್ರವನ್ನು ಸಾಕಷ್ಟು ಮೊದಲೇ ಸಜ್ಜುಗೊಳಿಸಿದ್ದುದರಿಂದ ಜೀತದಾಳುಗಳನ್ನು ಪತ್ತೆ ಹಚ್ಚಿ ಸಾವಿರಾರು ಮಂದಿಗೆ ಸ್ವತಂತ್ರ ಜೀವನದ ಅವಕಾಶ ಕಲ್ಪಿಸುವ ಕೆಲಸವನ್ನೂ ಸರ್ಕಾರ ಮಾಡಿತು. ಋಣ ಪರಿಹಾರ ಜೀತ ಪದ್ಧತಿಯ ನಿರ್ಮೂಲನೆಗಳ ಅನುಷ್ಠಾನದಲ್ಲಿ ಅರಸರಿಗೆ ಅವರ ಸಂಪುಟ ಸಹೋದ್ಯೋಗಿ ಕೆ.ಹೆಚ್. ರಂಗನಾಥರವರ ಪೂರ್ಣ ಸಹಯೋಗವಿತ್ತೆಂಬುದನ್ನು ಇಲ್ಲಿ ಉಲ್ಲೇಖಿಸಲೇಬೇಕಾಗಿದೆ.

ದೇವರಾಜುಅರಸು ಮುಖ್ಯಮಂತ್ರಿಯಾಗಿದ್ದ ಮೊದಲ ಅವಧಿ (೧೯೭೨ ಮಾರ್ಚ್‌ನಿಂದ ೧೯೭೭ ಡಿಸೆಂಬರ್ ತನಕ) ಯಲ್ಲಿ ಮಾಡಿದ ಬಹುತೇಕ ಶಾಸನಗಳು ಹಾಗೂ ಯೋಜನೆಗಳ ಮೂಲ ಉದ್ದೇಶ ಸಾಮಾಜಿಕ ಪರಿವರ್ತನೆಯಾಗಿತ್ತೆಂಬುದನ್ನು ಮರೆಯಲಾಗದು. ಅಂದಿನವರೆಗೆ ಈ ರಾಜ್ಯವನ್ನಾಳಿದ ಯಾವ ಮುಖ್ಯಮಂತ್ರಿಯು ಈ ದಿಶೆಯಲ್ಲಿ ಯೋಚಿಸಿರಲಿಲ್ಲವೆಂಬುದನ್ನು ಗಮನಿಸಬೇಕಾಗಿದೆ. ಹಿಂದುಳಿದ ವರ್ಗಗಳಲ್ಲಿ ಉತ್ತಮ ಬದುಕಿನ ಆಸೆಯನ್ನು ಚಿಗುರಿಸುವ ಕೆಲಸದೊಂದಿಗೆ ಸಮಾಜದ ಎಲ್ಲಾ ವರ್ಗಗಳ ಹಿತವನ್ನು ಅವರು ಮರೆತಿರಲಿಲ್ಲ. ಜನರ ಎಲ್ಲ ಸಮಸ್ಯೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ರಾಜ್ಯದ ಪೇಟೆ ಪಟ್ಟಣಗಳಲ್ಲಿ ೧೯೭೩ ರ ಮಳೆಗಾಲದಲ್ಲಿ ನಡೆದ ಆಹಾರ ದಂಗೆ ಅಥವಾ ದರೋಡೆ ಈ ರಾಜ್ಯದ ಇತಿಹಾಸದಲ್ಲಿ ಸರಕಾರವೊಂದು ಎದುರಿಸಿದ ಘೋರ ಸಮಸ್ಯೆ. ತೀವ್ರತರವಾದ ಆಹಾರ ಧಾನ್ಯಗಳ ಅಭಾವ ಈ ದಂಗೆ ಮೂಲಕ ಕಾರಣವಾಗಿತ್ತು. ಅದರೊಂದಿಗೆ ಮಾಮೂಲಿ ರಾಜಕೀಯವೂ

ಸೇರಿಕೊಂಡಿತು. ವಿದ್ಯಾವಂತ ನಿರುದ್ಯೋಗಿಯೊಬ್ಬರು ಅಂಗಡಿಗಳಿಗೆ ನುಗ್ಗಿ ಕೈಗೆ ಸಿಕ್ಕಿದ್ದನ್ನು ದೋಚಲಾರಂಭಿಸಿದರು. ಕಾನೂನು ವ್ಯವಸ್ಥಾ ಪಾಲನೆ ಅಸಾಧ್ಯವೆನ್ನುವಷ್ಟರ ಮಟ್ಟಿಗೆ ಪರಿಸ್ಥಿತಿ ತಲುಪಿತು. ಹಸಿದ ಜನರ ದಂಗೆಯನ್ನು ಅರಸು ಬಹಳ ಜಾಣ್ಮೆಯಿಂದ ನಿಭಾಯಿಸಿದರು. ಅಧಿಕಾರ ದಂಡವನ್ನು ಅಡ್ಡಾದಿಡ್ಡಿ ಬಳಸಲಿಲ್ಲ. ಇನ್ನೊಮ್ಮೆ ದಂಗೆಯೆದ್ದರೆ ಗುಂಡಿಟ್ಟು ಕೊಲ್ಲಲಾಗುವುದು ಎಂಬ ಎಚ್ಚರಿಕೆಯೊಂದಿಗೆ ಜನರ ಮನೆಮನೆಗೆ ಕಾಳು ಬೇಳೆ ಪೂರೈಕೆ ಮಾಡಿದರು. ದಂಗೆ ಹುಟ್ಟಿಕೊಂಡ ಒಂದು ತಿಂಗಳೊಳಗೆ ಶಮನಗೊಂಡಿತು. ಈ ಕ್ಲಿಷ್ಟ ಸಮಸ್ಯೆಯನ್ನು ಎದುರಿಸುವುದರಲ್ಲಿ ಧೃಡ ನಿಲುವಿಗೆ ಸಂಯಮದ ಚೌಕಟ್ಟು ಕೊಟ್ಟು ಯಶಸ್ವಿಯಾದರು ಇದರೊಂದಿಗೆ ವಿದ್ಯಾವಂತ ನಿರುದ್ಯೋಗಿಗಳ ಸಮಸ್ಯೆಯನ್ನು ಕೈಗೆತ್ತಿಕೊಂಡರು. ಉದ್ಯೋಗವಿಲ್ಲದೇ ಹತಾಶರಾಗಿ ಅಲೆಯುತ್ತಿದ್ದ ಯುವಕರಿಗೆ ತುಸು ನೆರವಾಗಬಲ್ಲ ಒಂದು ಯೋಜನೆ ತಯಾರಿಸಿದರು. ಅದೇ ಸ್ಟೈಫೆಂಡರಿ ಯೋಜನೆ ಇದರಲ್ಲಿ ಯುವಕರಿಗೆ ಪೂರ್ಣ ಪಮಾಣದ ಸಕರಾರಿ ನೌಕರಿಯಲ್ಲವಾದರೂ ಅವರ ಕನಿಷ್ಠ ಅವಶ್ಯಕತೆಗಳನ್ನು ಈಡೇರಿಸಬಲ್ಲಷ್ಟು ಭೆತ್ಯೆಯನ್ನು ನಿಗದಿಮಾಡಿ ಸರಕಾರಿ ಕಛೇರಿಗಳಲ್ಲಿ ಉದ್ಯೋಗ ದೊರಕಿಸಿದರು. ೧೯೭೫-೭೬ ರ ಹೊತ್ತಿಗೆ ಸುಮಾರು ೫೦ ಸಾವಿರ ಮಂದಿ ಪದವೀದರ ನಿರುದ್ಯೋಗಿಗಳು ಈ ಯೋಜನೆಯ ನೆರಳಿನಲ್ಲಿದ್ದರು. ವಿದ್ಯಾವಂತ ಯುವಕರು ನಿರುದ್ಯೋಗಿಗಳಾಗಿ ಉಳಿದರೆ ಸಾಮಾಜಿಕ ನೆಮ್ಮದಿ ಕೆಡುವುದೆಂಬುದನ್ನು ಮನಗಂಡಿದ್ದ ಅರಸು ಜನರ ಸಮಸ್ಯೆಗಳಿಗೆ ಸ್ಪಂದಿಸಿದ ರೀತಿಯನ್ನು ಎಷ್ಟು ವಿವರಿಸಿದರೂ ಸಲ್ಲುತ್ತದೆ. ಸಾಧನೆಗಳನ್ನೆಲ್ಲಾ ಪಟ್ಟಿ ಮಾಡುತ್ತಾ ಹೋದರೆ ಅವರ ಜೀವನ ಕಥನ ಬಹುವಾಗಿ ಲಂಭಿಸುವ ಅಪಾಯವಿದೆ. ಆದ್ದರಿಂದ ಗಹನವಾದ ವಿಚಾರಗಳನ್ನು ಮಾತ್ರ ಪ್ರಸ್ತಾಪಿಸುತ್ತಿದ್ದೇನೆ.

**ಮಲ ಹೊರುವ ಪದ್ಧತಿ ನಿಷೇಧ**

ಗಹನ ವಿಚಾರಗಳ ೧೯೭೭ ರಲ್ಲಿ ಜಾರಿಗೆ ತಂದ ಒಂದು ಕಾಂತಿಕಾರಿ ದೂರಗಾಮಿ ಪರಿಣಾಮ ಬೀರಬಲ್ಲ ಮಲ ಹೊರು ಪದ್ಧತಿಯ ನಿಷೇಧ ಶಾಸನ ಉಲ್ಲೇಖನೀಯ. ಕೆಳಜಾತಿಯ ಜನರು ಮೇಲ್ಜಾತಿಯ ಜನರ ಮಲವನ್ನು ತಲೆಹೊರೆಯಾಗಿ ಸಾಗಿಸುವ ಪದ್ಧತಿಯಿತ್ತು. ಇದಕ್ಕಾಗಿ ದಲಿತ ವರ್ಗದಲ್ಲಿ ಒಂದು ಜಾತಿಯನ್ನೇ ಸೃಷ್ಟಿಮಾಡಲಾಗಿತ್ತು. ಜಗತ್ತಿನ ಯಾವ ನಾಗರಿಕ ಸಮಾಜದಲ್ಲಿಯೂ ಆಚರಣೆಯಲ್ಲಿಲ್ಲದ ಮಲ ಹೊರುವ ಪದ್ಧತಿಗೆ ಧಾರ್ಮಿಕ ಆಚರಣೆಯ ಕವಚವನ್ನು ಹೊದಿಸಲಾಗಿತ್ತು. ಇದು ನಿಷೇಧಿಸಲೇಬೇಕಾದ ಅನಿಷ್ಟ ಪದ್ಧತಿಯೆಂದು ಯಾವ ಸಮಾಜ ಸುಧಾರಕರಿಗೂ ಮನಗಾಣಲಿಲ್ಲ. ಕರ್ನಾಟಕದಲ್ಲಿ ಅರಸು ಆರಂಭಿಸಿದ ಸಾಮಾಜಿಕ ಪರಿವರ್ತನೆಯ ವಾತಾವರಣದಲ್ಲಿ ಈ ವಿಚಾರದಲ್ಲಿ ಚಿಂತನೆ ಚಿಗುರೊಡೆಯಿತು. ಅರಸು ಸಂಪುಟದಲ್ಲಿ ಪೌರಾಡಳಿತ ಸಚಿವರಾಗಿದ್ದ ಬಿ. ಬಸವಲಿಂಗಪ್ಪನವರು ಈ ಪದ್ಧತಿಯ ಉಚ್ಛಾಟನೆಗೆ ಧೃಡ ಸಂಕಲ್ಪ ಮಾಡಿದರು.

ಪತಿಮನೆಯ ಲ್ಯಾಟ್ರಿನ್ನಿಗೆ ಹೊಂದಿಕೊಂಡಂತೆ ವೈಜ್ಞಾನಿಕವಾದ ಸೆಪ್ಟಿಕ್ ಟ್ಯಾಂಕುಗಗಳನ್ನು ನಿರ್ಮಿಸಿ ಸ್ವಾಸ್ಥರಕ್ಷಣೆ ಸಾಧ್ಯವೆಂಬ ಯೋಜನೆ ಯಾರಿಗೂ ಹೊಳೆಯಲಿಲ್ಲ. ಸರಕಾರವೇ ಇಂತಹ ಒಂದು ಬದಲಿ ವ್ಯವಸ್ಥೆಯ ಸೂತಗಳನ್ನು ಮುಂದಿಟ್ಟಿತು. ಇಂತಹ ಸೆಪ್ಟಿಕ್ ಟ್ಯಾಂಕ್ಗಳನ್ನು ಜೋಡಿಸುವ ಆರ್ಥಿಕ ಶಕ್ತಿ ತಮಗಿಲ್ಲವೆಂದು ಜನ ಗೊಣಗಲಾರಂಭಿಸಿದರು. ಇದಕ್ಕೂ ಸರಕಾರದೊಡನೆ ಒಂದು ಪರಿಹಾರ ಸೂತ್ರವಿತ್ತು. ಇಂತಹ ಆರ್ಥಿಕ ಶಕ್ತಿಯಿಲ್ಲದ ಕುಟುಂಬಗಳಿಗೆ ಆರ್ಥಿಕ ನೆರವು ನೀಡಲು ಉದ್ಯುಕ್ತವಾಯಿತು. ಮಲಹೊರುವ ಪದ್ಧತಿ ನಿಷೇಧ ಕಾನೂನನ್ನು ಪಾಲಿಸಲು ಆರು ತಿಂಗಳ ಕಾಲಾವಕಾಶ ಕೊಟ್ಟಿತು. ಕುಂಟುನೆಪ ಹೇಳಿ ಜಾರಿಕೊಳ್ಳಲಾಗದ ಕಾನೂನು ಇದೆಯೆಂಬುದು ಸ್ಪಷ್ಟವಾದಾಗ ಜನರು ಲ್ಯಾಟ್ರಿನ್‌ಗಳನ್ನು ಕಟ್ಟಿಸಿಕೊಂಡರು. ಕೇವಲ ಆರು ತಿಂಗಳ ಅವಧಿಯಲ್ಲಿ ನಿಷೇಧ ಕಾನೂನು ಅರ್ಥವತ್ತಾಗಿ ಜಾರಿಗೆ ಬಂತು. ಈ ದಶಕದಲ್ಲಿ

ಮೊತ್ತ ಮೊದಲ ಬಾರಿಗೆ ಕರ್ನಾಟಕವು ಮಲ ಹೊರುವ ಪದ್ಧತಿಯನ್ನು ನಿಷೇಧ ಮಾಡಿತು.

ಮಾತು ಮಾತಿಗೆ ಭಾರತೀಯ ಸಂಸ್ಕೃತಿಗೆ ಉಜ್ವಲ ಪರಂಪರೆಯ ಸೊಲ್ಲೆತ್ತುವ ಮಂದಿ ಬಹುತೇಕ ರಾಜ್ಯಗಳಲ್ಲಿ ಇಂದಿಗೂ ಈ ಹೀನಾಯ ಪದ್ಧತಿಯನ್ನು ಉಳಿಸಿಕೊಂಡು ಬಂದಿದ್ದಾರೆ. ೧೯೭೨ ರಿಂದ ಸದ್ದಿಲ್ಲದೆ ಸಾಮಾಜಿಕ ಕ್ರಾಂತಿಯ ಕಿಡಿ ಹೊತ್ತಿಸಿದ ಕರ್ನಾಟಕ ಸರ್ವತ್ರ ಪ್ರಶಂಸೆಗೆ ಪಾತ್ರವಾಯಿತು.

ಅರಸು ಆಡಳಿತ ದಾಖಲೆಗಳ ಪಟ್ಟಿ ಅಲ್ಲಗೇ ನಿಲ್ಲಲಿಲ್ಲ. ಅದೇ ವರ್ಷ ಅರಸುರವರು ನ್ಯಾಯಾಲಯಗಳು ಒಡ್ಡಿದ ಎಲ್ಲಾ ತೊಡರುಗಳನ್ನು ನಿಭಾಯಿಸಿಕೊಂಡು ಹಿಂದುಳಿದ ಜನವರ್ಗಗಳಿಗೆ ಉದ್ಯೋಗ ಮತ್ತು ಶಿಕ್ಷಣ ಸಂಸ್ಥೆಗಳಲ್ಲಿ ಮೀಸಲಾತಿ ಸೌಲಭ್ಯ ನೀಡುವ ಆಜ್ಞೆ ಹೊರಡಿಸಿದರು. ಹಾವನೂರು ವರದಿಯನ್ನು ಆಧರಿಸಿ ಹೊರಡಿಸಿದ ಈ ಮೀಸಲಾತಿ ಆಜ್ಞೆ ಸಮಾಜ ವಿಜ್ಞಾನಿಗಳೆನ್ನುವರ ಸಂಶೋಧನೆಗೆ ಅರ್ಹವಾದ ವಿಷಯ. ಇಷ್ಟರಿಂದಲೆ ತೃಪ್ತಿ ಪಡದೇ ಹಾವನೂರು ಆಯೋಗದ ವರದಿಯಲ್ಲಿ ಮಾಡಿದ್ದ ಅನೇಕ ಶಿಫಾರಸ್ಸುಗಳನ್ನು ಜಾರಿಗೆ ತರಲು ನಿಶ್ಚಿತ ಹೆಜ್ಜೆಯಿಟ್ಟರು. ಈ ಕೆಲಸಕ್ಕಾಗಿಯೇ ಒಂದು ಪ್ರತ್ಯೇಕ ಇಲಾಖೆಯನ್ನು ಸೃಷ್ಟಿಸಿದರು. ಪ್ರಾಥಮಿಕ ಮಟ್ಟದಿಂದ ವಿಶ್ವವಿದ್ಯಾಲಯ ಮಟ್ಟದವರೆಗೆ ಈ ವರ್ಗದ ಮಕ್ಕಳ ಶಿಕ್ಷಣಕ್ಕೆ ಅನುಕೂಲವಾಗುವಂತೆ ಉಚಿತ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಿದರು ಎಂದು ವಡ್ಡರ್ಸೆ ರಘುರಾಮಶೆಟ್ಟಿ ತಮ್ಮ ಬಹುರೂಪಿ ಅರಸು ಪುಸ್ತಕದ ಪುಟ ೧೧೬ ರಿಂದ ೧೨೨ ರವರೆಗೆ ಹೇಳಿರುತ್ತಾರೆ.

**ದಲಿತರ ಭೂಮಿ ಸಮಸ್ಯೆಯ ಗಂಭೀರ ವಿಶ್ಲೇಷಣೆ**

ಸುಧಾರಣವಾದಿ ಕಾದಂಬರಿಗಳಲ್ಲಿ ಅತಿ ಮುಖ್ಯವಾದುದೆಂದರೆ ಚೋಮನದುಡಿ. ಇಂಗ್ಲೀಷ್‌ನಲ್ಲಿ ಪಸಿದ್ಧವಾಗಿರುವ ಮುಲ್ಕರಾಜ್ ಆನಂದ್ ರವರ ಅನ್ಟಚಬಲ್ ಕೃತಿಗಿಂತ ಮೊದಲು ೧೯೩೧ ರಲ್ಲಿ ರಚಿಸಲ್ಪಟ್ಟ ಈ ಕೃತಿ ಪಾಯಶಃ ದಲಿತ ಸಮಸ್ಯೆಯನ್ನು ಗಂಭೀರವಾಗಿ ವಿಶ್ಲೇಷಿಸುವ ಭಾರತದ ಮೊದಲ ಕಾದಂಬರಿ. ಕತ್ತಲೆಯಿಂದ ಪಾರಂಭವಾಗಿ ಕತ್ತಲೆಯಲ್ಲಿಯೇ ಮುಗಿಯುವ ಕಾದಂಬರಿ ವರ್ಣ ವ್ಯವಸ್ಥೆಯ ಉಚ್ಚ ನೀಚ ಎಂಬ ವರ್ಗೀಕರಣವನ್ನು ಒಡೆದು ಜಾತಿಪದ್ಧತಿಯಿಂದ ಆಗುತ್ತಿದ್ದ; ಆಗುತ್ತಿರುವ ದಲಿತರ ಶೋಷಣೆ, ಅವರ ನೋವು, ಸಂಕಟ, ಹತಾಶೆ ಮತ್ತು ಅವುಗಳಿಂದ ಪಾರಾಗುವ ಸಾಧ್ಯತೆಗಳು ಇವುಗಳನ್ನು ವಿಶ್ಲೇಷಿಸುತ್ತವೆ. ತನ್ನದೇ ಆದ ಒಂದು ಚೂರು ನೆಲಕ್ಕಾಗಿ ಕನಸು ಕಾಣುವ, ನರಳುವ ಚೋಮನ ಕಥೆಯನ್ನು ಯಾವ ಸರಳೀಕೃತ ಪರಿಹಾರವನ್ನೂ ಸೂಚಿಸದೇ ಶಿವರಾಮಕಾರಂತರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ದಲಿತರ ಅವಮಾನ, ಶೋಷಣೆಗಳಿಂದ ಆರ್ಥಿಕ ಸ್ವಾತಂತ್ರ್ಯವೊಂದೇ ಜಾರಿ ಎಂಬ ಪಬುದ್ಧ ಚಿಂತನೆ ಇಲ್ಲಿ ಕಂಡುಬರುತ್ತದೆ. ಈ ಕಾದಂಬರಿ ತಮಗೆ ಭೂ ಸುಧಾರಣೆಯಲ್ಲಿ ತೊಡಗಿಸಿಕೊಳ್ಳುವುದಕ್ಕೆ ಪೇರಣೆ ನೀಡಿತೆಂದು ದೇವರಾಜ ಅರಸುರವರು ಒಂದು ಸಂದರ್ಭದಲ್ಲಿ ಹೇಳಿದ್ದರೆಂದು ನನ್ನ ನೆನಪು ಎಂದು ಬರೆದಿರುವವರು ಡಾ. ಸಿ.ಎನ್.ರಾಮಚಂದ್ರನ್ ಅವರು.

**೩. ಧರ್ಮ, ಮತಾಂತರ ಮತ್ತು ದಲಿತರ ಸ್ಥಿತ್ಯಂತರಗಳು**

ಜಗತ್ತಿನಾದ್ಯಂತ ಧರ್ಮದ ಅತಿರೇಕತೆ ಕರಾಳ ನೃತ್ಯ ಮಾಡುತ್ತಿದೆ. ಧರ್ಮದೊಳಗೆ ಮಾರ್ಮಿಕತೆಯ ಚಿಗುರು ಒಡೆದು ಅಂಧತ್ವವು ಬಯಲಾಗಿದೆ. ಎಲ್ಲೆಂದರಲ್ಲಿ ಮತಧರ್ಮಗಳ ಕಠೋರತೆ, ದುರಾಭಿಮಾನ ಟಿಸಿಲೊಡೆದಿದೆ. ಗಾಢವಾದ ರಕ್ತದ ಛಾಯೆ ಎದ್ದುಕಾಣುತ್ತಿದೆ. ಅನ್ಯಮತೀಯ ಶೋಷಣೆ, ಕಗ್ಗೊಲೆಗಳು, ಭೀಕರತೆಯನ್ನು ಸೃಷ್ಟಿಸಿವೆ. ಮೌಲ್ಯಗಳ ಅಧೋಗತಿ, ಮನೆ, ಮಂದಿರ, ಮಠಗಳಲ್ಲಿ ಅಶಾಂತಿ, ಹಿಂಸೆ, ಪಡೆಒಡೆಯುತ್ತಿದೆ. ಬಹುಳತ್ವ ಸಂಸ್ಕೃತಿಯು ನಶಿಸುತ್ತಾ, ಏಕಸಂಸ್ಕೃತಿಯ ಪುನರುಜ್ಜೀವನ ಯುಗಪಲ್ಲಟದಲ್ಲಿ ತಲ್ಲಣಗೊಳಿಸುತ್ತಿವೆ. ಅವರಲ್ಲೂ

ಭಾರತದಂತಹ ಸಮಾಜದ ವ್ಯವಸ್ಥೆಯ ವ್ಯಾಕುಲತೆಯೊಳಗೆ ಚಾತುರ್ವರ್ಣತೆ ಮತ್ತು ಅಸಮಾನತೆಗಳು ಶತಶತಮಾನಗಳಿಂದಲೂ ಬೇರು ಬಿಡುತ್ತಾ ಇಂದಿಗೂ ಮುಂದುವರೆಯುತ್ತಿವೆ. ಚಾತುರ್ವರ್ಣದ ಸ್ಥಳದಲ್ಲಿ ಏಕವರ್ಣತೆ ಇಲ್ಲದಿರುವಂತಹದು ಹಾಗೂ ಅಸಮಾನತೆಯ ಜಾಗದಲ್ಲಿ ಸಮಾನತೆಯನ್ನು ದಲಿತರು ಹಿಂದೆಯೂ ಇಂದಿಗೂ ಕಾಣದ ಸ್ಥಿತಿಯಲ್ಲಿದ್ದಾರೆ. ಆದರೆ ಸ್ಪೃಶ್ಯ ಹಿಂದೂ ಸಮಾಜ ಅಸ್ಪೃಶ್ಯರಿಗೆ ಬಾಳುವೆ ಮಾಡಲು ಬಿಡಲಿಲ್ಲ. ದಲಿತರು ಮನುಷ್ಯತ್ವಕ್ಕಾಗಿ ಸಮಾನತೆಗಾಗಿ ಪಟ್ಟ ಕಷ್ಟಗಳು ಗೌಣವಾಗುತ್ತಾ ಬಂದಿವೆ. ಹಿಂದುತ್ವದಲ್ಲಿ ದೈವವಾದ ನಂಬಿಕೆಗಳು ಆಚಾರಗಳು ಪದ್ಧತಿಗಳು ಅಲ್ಲದೆ ಸ್ವರ್ಗ ನರಕಗಳ ಪರಿಕಲ್ಪನೆಗಳು ಹಿಂದೂ ಧರ್ಮದ ಆತ್ಮವಾದ ಹಾಗೂ ಪರಿತ್ಯಕ್ತ ವಿಚಾರಧಾರೆಗಳು ಜಾತಿಪದ್ಧತಿಗಳು ಧರ್ಮದ ವರ್ಣನೀತಿ, ವಿಧಿವಾದ ಮತ್ತು ಭವಿಷ್ಯಕ್ಕೆ ಆಧರಿಸಿದ ಹಿಂದೂ ತತ್ವಗಳು ಅಲ್ಲದೆ ಹಿಂದೂಗಳ ಹಿಂಸಾಕಾಂಡದ ಯಜ್ಞಯಾಗಾದಿಗಳು ಪೂಜೆಪುರಸ್ಕಾರಗಳು ಅಲ್ಲದೆ ಹಿಂದೂ ಕರ್ಮಸಿದ್ಧಾಂತ ಜೊತೆಗೆ ಸಂಕುಚಿತ ಸಾಮಾಜಿಕ ಅಭಿಪ್ರಾಯಗಳು ಧರ್ಮದೊಳಗೆ ಮೆತ್ತಿಕೊಂಡಿದೆ.

ಈ ಮೇಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡಿದ್ದ ಅಂಬೇಡ್ಕರ್ ಅವರು ೧೯೫೬ರ ಅಕ್ಟೋಬರ್ ೧೪ರಂದು ಹಿಂದೂ ಧರ್ಮ ಬಿಟ್ಟು ಬೌದ್ಧಧರ್ಮವನ್ನು ಸ್ವೀಕರಿಸಲು ಮುಂದಾದರು. ಅಂದರೆ ೧೯೩೫ ಅಕ್ಟೋಬರ್ ೧೩ರಂದು ನಾನು ಹಿಂದುವಾಗಿಯೆ ಹುಟ್ಟಿದ್ದರೂ ಹಿಂದುವಾಗಿಯೇ ಸಾಯಲಾರೆ ಅಂತ ಮಹಾರಾಷ್ಟ್ರದ ಯೆವಲೆ ಊರಲ್ಲಿ ಘೋಷಿಸಿದ್ದರು. ಈ ಘೋಷಣೆ ಒಂದು ತೆರನಾದ ಮತಾಂತರದ ಘೋಷಣೆಯೇ ಆಗಿತ್ತು. ಇಷ್ಟೆಲ್ಲಾ ನಿರ್ಧಾರಗಳನ್ನು ಮಾಡಿದ್ದರೂ ಡಾ.ಅಂಬೇಡ್ಕರ್ ಹಿಂದೂ ಧರ್ಮವನ್ನು ತ್ಯಜಿಸಲು ಸುದೀರ್ಘವಾದ ೨೧ ವರ್ಷಗಳನ್ನು ತೆಗೆದುಕೊಂಡರು ಎಂಬ ಸತ್ಯವನ್ನು ಮನನ ಮಾಡಿಕೊಳ್ಳಬೇಕಾಗುತ್ತದೆ. ಅಲ್ಲದೆ, ದಲಿತರ ಸ್ಥಿತಿಗತಿಗಳ ನೋವನ್ನು ಕಂಡುಂಡ ಅವರು ದಲಿತರ ಹಿಂದುಗಳಲ್ಲ, ಆದರೂ ಮೌಲ್ಯಗಳು ಆಚಾರ ವಿಚಾರಗಳು ದೇವರ ಅವತಾರಗಳು ಅವರ ಮೇಲೆ ಬಲವಂತವಾಗಿ ಹೇರಲ್ಪಟ್ಟಿವೆ. ಸಾವಿರಾರು ವರ್ಷಗಳಿಂದ ಆಳುತ್ತಾ ಬಂದಿರುವ ಮೇಲ್ಜಾತಿಯವರು ತಮ್ಮ ಸಂಸ್ಕೃತಿ ಪರಂಪರೆ ಪದ್ಧತಿಗಳನ್ನು ಅಳವಡಿಸಿಕೊಂಡು ಬದುಕಲು ಅಧೀನ ಸಮುದಾಯಕ್ಕೆ ಆದೇಶಿಸುವರು. ಆದ್ದರಿಂದ ಶೋಷಕರ ಧಾರ್ಮಿಕ ಸಾಮಾಜಿಕ ಪದ್ಧತಿಗಳ ರೀತಿಯಲ್ಲಿ ಶೋಷಿತರು ತಲತಲಾಂತರಗಳಿಂದ ಜೀವಿಸುತ್ತಿರುವರು. ಅಂಬೇಡ್ಕರ್ ಹಾಗೆಯೇ ಅಚ್ಯುತಾನಂದ ದಲಿತರು ಪಜ್ಞಾಶೂನ್ಯರಾಗಿ ಹಿಂದು ಮತಾಂತರವಾಗಿರುವುದನ್ನು ತಮಗೆ ಅಳವಡಿಸಿಕೊಂಡು ತಮ್ಮ ದಲಿತ ಬಾಂಧವರಿಗೆ ತಿರಸ್ಕರಿಸಲು ಆಜ್ಞಾಪನೆ ಮಾಡಿದರು.

**ಈ. ಮೀಸಲಾತಿ ಮತ್ತು ದಲಿತರ ಸ್ಥಿತ್ಯಂತರಗಳು**

ಮೀಸಲಾತಿ ಪರಿಕಲ್ಪನೆಗೆ ಚಾತುರ್ವರ್ಣವೇ ಬುನಾದಿ. ಬ್ರಾಹ್ಮಣ , ಕ್ಷತ್ರೀಯ, ವೈಶ್ಯರು ಇಳಿಮುಖ ಸೀಮಾಂತ ತುಷ್ಟಿಗುಣ ಸಿದ್ಧಾಂತದಲ್ಲಿ ಯಥೇಚ್ಛ ಸೌಲತ್ತು ಸೌಕರ್ಯ ಪಡೆದ ಭೂಪರು, ಶೂದ್ರರು – ಪಮಚಮರು ಇದರ ಕಾಲ ತುಳಿತದಲ್ಲಿ ನಜ್ಜ ಹೋದವರು. ಅದರಿಂದ ಮೀಸಲಾತಿಗೆ ಸಾವಿರಾರು ವರ್ಷಗಳ ಹೆಜ್ಜೆಗುರುತುಗಳು ಚರಿತ್ರೆಯಲ್ಲಿವೆ. ಮೀಸಲಾತಿ ಕಾಲಿದ್ದವನ ಜೊತೆ ನಡೆಯಲು ಒಬ್ಬ ಹೆಳವನಿಗೆ ಕೊಡುವಂತಹ ಒಂದು ಕನಿಷ್ಠ ಸಾಧನವೇ ವಿನಃ ಅವನಿಗೆ ಇರಬೇಕಾದ ಕಾಲುಗಳನ್ನು ಕೊಟ್ಟಂತಲ್ಲ.

"ಸಮಾಜದ ತಟ್ಟತಳದಲ್ಲಿ ಸಹಸ್ರಾರು ವರ್ಷಗಳ ಶೋಷಣೆಗೆ ಬಲಿಯಾಗಿ ಎಲ್ಲಾ ಸಾಮಾಜಿಕ ಅವಕಾಶಗಳಿಂದಲೂ ವಂಚಿತರಾಗಿದ್ದವರನ್ನು ಮೇಲೆತ್ತಿ ಅವರೂ ಸಮಾಜದ ಮುಖ್ಯವಾಹಿನಿಯಲ್ಲಿ ಸೇರಲು ಸಾಧ್ಯವಾಗುವಂತೆ ಮಾಡುವ ಒಂದು ಕನಿಷ್ಠ ಸಾಧನವೇ ಮೀಸಲಾತಿ".

ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿರುವ ಕೋಟ್ಯಂತರ ಪರಿಶಿಷ್ಟರ ಏಳಿಗೆಯಾಗ ಬೇಕಾದರೆ ಸಮಾಜದ ಇತರ ವರ್ಗಗಳಂತೆ ನೆಮ್ಮದಿಯಾಗಿ ಅವರು ಬದುಕಬೇಕಾದರೆ ಅವರ ಬದುಕಿನ ಪುನರುಜ್ಜೀವನವಾಗಬೇಕು. ಅದಕ್ಕಾಗಿ ಅವರು ರಾಜಕೀಯದಲ್ಲಿ , ಉದ್ಯೋಗದಲ್ಲಿ , ಶಾಲಾ ಕಾಲೇಜುಗಳ ಪ್ರವೇಶದಲ್ಲಿ ಮೀಸಲಾತಿ ಅಗತ್ಯವೆಂದು ಮೊಟ್ಟಮೊದಲು ಬಾರಿಗೆ ಮನಗಂಡವರು ಡಾ. ಬಿ. ಆರ್. ಅಂಬೇಡ್ಕರ್‌ವರು. ಅವರು ಸ್ವತಃ ಅಸ್ಪೃಶ್ಯತೆಯ ಕಹಿಯನ್ನು ಅನುಭವಿಸಿದ್ದರು. ಬಡತನವನ್ನು ನೇರವಾಗಿ ಅನುಭವಿಸಿದರೂ ಅಮಾನವೀಯ ಬದುಕಿನಲ್ಲಿ ತೊಳಲಾಡುತ್ತಿದ್ದ ಅಸಂಖ್ಯಾತ ಅಸ್ಪೃಶ್ಯರ ಅಸಹಾಯಕತೆಯ ಬದುಕನ್ನು ಕಣ್ಣಾರೆ ಕಂಡಿದ್ದವರು. ಅಂಬೇಡ್ಕರ್‌ವರು ಬ್ರಿಟಿಷರ್ ಮುಂದೆ ಪರಿಶಿಷ್ಟರ ಶೋಷಿತ ಬದುಕಿನ ಸ್ಪಷ್ಟ ಚಿತ್ರಣ ನೀಡಿ ಅವರ ಏಳಿಗೆಗಾಗಿ ಬ್ರಿಟಿಷ್ ಸರ್ಕಾರ ಏನೂ ಮಾಡಿಲ್ಲವೆಂದು ದನಿ ಎತ್ತಿದರು. ಪರಿಶಿಷ್ಟರಿಗಾಗಿ ಪ್ರತ್ಯೇಕ ರಾಜ್ಯದ ಅಗತ್ಯವನ್ನು ಪ್ರತಿಪಾದಿಸಿದರು. ಮುಸ್ಲಿಂರಂತೆ ಪರಿಶಿಷ್ಟರಿಗೆ ಪ್ರತ್ಯೇಕ ರಾಷ್ಟ್ರ ದಕ್ಕುವುದು ಅಷ್ಟು ಕಷ್ಟವಿರಲಿಲ್ಲ. ಇಡೀ ದೇಶ ಒಡೆದು ಹೋಳಾಗುತ್ತಿರುವುದನ್ನು ಸಹಿಸದೆ ಪ್ರತ್ಯೇಕ ರಾಷ್ಟ್ರದ ಪ್ರತಿಪಾದನೆಯನ್ನು ಕೈ ಬಿಟ್ಟು ಮಹಾತ್ಮಗಾಂಧಿ ಮತ್ತು ಇತರರೊಡನೆ ೧೯೩೨ ರಲ್ಲಿ ಮಾಡಿಕೊಂಡ ಐತಿಹಾಸಿಕ ಪೂನಾ ಒಪ್ಪಂದದ ಮೂಲಕ ಪರಿಶಿಷ್ಟರಿಗೆ ಮೀಸಲಾತಿಯನ್ನು ದೊರಕಿಸಿಕೊಟ್ಟು ಈ ದೇಶದ ಐಕ್ಯತೆಯನ್ನು , ಅಖಂಡತೆಯನ್ನು ಡಾ. ಅಂಬೇಡ್ಕರ್‌ರವರು ರಕ್ಷಿಸಿದರು.

ಹೀಗೆ ಪೂನಾ ಒಪ್ಪಂದದಿಂದ ಬಸುರಾದ ಮೀಸಲಾತಿಯ ಕೂಸು ಸಂಪಿಧಾನದ ಅನುಚ್ಛೇದ ೧೫(೪), ೧೬(೪) ಮತ್ತು ೪೬ ರ ಪ್ರಕಾರ ಸಂವಿಧಾನಾತ್ಮಕವಾಗಿ ಹುಟ್ಟಿದ್ದು ೧೯೫೧ ರಿಂದೀಚೆಗೆ ಇದರ ಮೂಲ ಉದ್ದೇಶಗಳು ಇಂತಿವೆ.

೧) ಮೀಸಲಾತಿಯ ಮುಖಾಂತರ ಶ್ರೇಣೀಕೃತ ಸಮಾಜವನ್ನು ಸಮಾನಾಂತರ ಸಮಾಜವನ್ನಾಗಿ ಮಾಡುವುದು.

೨) ಈ ಮೂಲಕ ಸಮಾನತೆಯ ಮತ್ತು ಸಾಮಾಜಿಕ ನ್ಯಾಯವನ್ನು ಪರಿಶಿಷ್ಟರಿಗೆ ದೊರಕಿಸಿಕೊಡುವುದು ಮತ್ತು ಅವರೂ ಸಮಾಜದಲ್ಲಿ ಘನತೆ ಗೌರವಗಳಿಂದ ಇತರರಂತೆ ಬಾಳುವಂತಾಗುವುದು.

೩) ಎಲ್ಲಾ ವರ್ಗದ ಆರ್ಥಿಕ, ಶೈಕ್ಷಣಿಕ, ಸಾಮಾಜಿಕ ಸಮತೋಲನವನ್ನು ಸಮಾಜದಲ್ಲಿ ಕಾಣುವುದು.

೪) ಈ ದೇಶದ ಆಡಳಿತದಲ್ಲಿ ಪರಿಶಿಷ್ಟರೂ ಭಾಗವಹಿಸುವಂತೆ ಮಾಡುವುದು.

೫) ಈ ದೇಶದ ಎಲ್ಲಾ ಅಭಿವೃದ್ಧಿ ಕಾರ್ಯಗಳಲ್ಲೂ ಪರಿಶಿಷ್ಟರಿಗೆ ಆದ್ಯತೆ ಸಿಗುವಂತಾಗುವುದು.

ಪರಿಶಿಷ್ಟರಿಗೆ ಮೀಸಲಾತಿ ೧೯೫೧ ರಲ್ಲೇ ಪೂರ್ಣವಾಗಿ ದೊರಕಿದರೂ ಉದ್ಯೋಗದಲ್ಲಿನ ಮೀಸಲಾತಿ ಅಧಿಕೃತವಾಗಿ ಜಾರಿಗೆ ಬಂದದ್ದು ೧೯೬೩ರಿಂದೀಚೆಗೆ ಮತ್ತು ಅದು ಕಂತು ಕಂತಾಗಿ ಜಾರಿಗೆ ಬಂದಿತು. ಮೀಸಲಾತಿ ಮೊದಲು ನೇರ ನೇಮಕಾತಿಯಲ್ಲಿ

ಕೆಳವರ್ಗದ ಹುದ್ದೆಗಳಲ್ಲಿ ಮಾತ್ರ ಜಾರಿಗೆ ಬಂದಿತು. ಮೀಸಲಾತಿ ಬಡ್ತಿಯಲ್ಲಿ ಬಂದಿದ್ದು ೧೯೭೮ ರ ನಂತರ ಮಾತ್ರ.

ಹೀಗೆ ಜಾರಿಗೆ ಬಂದ ಉದ್ಯೋಗದಲ್ಲಿನ ಮೀಸಲಾತಿ ಎಷ್ಟರ ಮಟ್ಟಿಗೆ ಫಲ ನೀಡಿದೆ ಎಂಬುದು ಈ ಮುಂದಿನ ಅಂಕಿ ಅಂಶಗಳಿಂದ ಸ್ಪಷ್ಟವಾಗುತ್ತದೆ.

**ಕೋಷ್ಟಕ ೭.೧**

**ಕರ್ನಾಟಕ ರಾಜ್ಯ ಸರ್ಕಾರಿ ಸೇವೆಗಳಲ್ಲಿನ ಮೀಸಲಾತಿ ವಿವರ**

| ೧೯೯೦ ರಲ್ಲಿ | ಒಟ್ಟು ಸಂಖ್ಯೆ | ಎಸ್‌ಸಿ | ಎಸ್‌ಟಿ | ತುಂಬದೆ ಉಳಿದಿರುವ ಹಿಂಬಾಕಿ ಹುದ್ದೆಗಳು |
|---|---|---|---|---|
| ಗ್ರೂಪ್ ಎ | ೧೨.೪೩೮ | ೧, ೪೮೨ | ೨, ೨೩೯ | ೭೪೭ |
| ಗ್ರೂಪ್ ಬಿ | ೨೩, ೬೨೦ | ೨, ೨೧೮೪, | ೨೫೨ | ೨, ೦೩೩ |
| ಗ್ರೂಪ್ ಸಿ | ೨, ೪೮, ೯೯೩ | ೩೦, ೦೮೨ | ೪೪, ೮೧೯ | ೧೪, ೭೫೭ |
| ಗ್ರೂಪ್ ಡಿ | ೯೧, ೪೭೨ | ೧೯, ೦೨೮ | ೧೮, ೪೮೫ | ೩, ೪೬೮ |

(ಸ್ಲೀಪರ್ ಸೇರಿ)

ಮುಂದಿನ ಪುಟದಲ್ಲಿ ತೋರಿಸಿರುವ ಕೊಷ್ಟಕ ಸಂಖ್ಯೆ ೭.೨ ಮತ್ತು ೭.೩ ರಲ್ಲಿ ಕೇಂದ್ರ ಸರ್ಕಾರದ ಸೇವೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮೀಸಲಾತಿ ವಿವರಗಳನ್ನು ಪುಟ ಸಂಖ್ಯೆ ೨೦೧ ಹಾಗು ೨೦೨ ರಲ್ಲಿ ನೀಡಲಾಗಿದೆ.

ಈ ಅಂಕಿ ಅಂಶಗಳನ್ನು ಗಮನಿಸಿದಾಗ ಮೇಲಿನ ಮೂರು ವರ್ಗದ ಹುದ್ದೆಗಳಲ್ಲಿ ಪರಿಶಿಷ್ಟರಿಗಾಗಿ ಮೀಸಲಿಟ್ಟ ಹುದ್ದೆಗಳು ತುಂಬದೇ ಉಳಿದಿರುವ ಹಿಂಬಾಕಿಯನ್ನು (ಬ್ಯಾಕ್‌ಲಾಗ್) ಕಾಣುತ್ತೇವೆ. ಮೇಲ್ವರ್ಗದ ಹುದ್ದೆಗಳಲ್ಲಿ ಪರಿಶಿಷ್ಟರಿಗೆ ಕಡಿಮೆ ಪ್ರಾತಿನಿಧ್ಯವಿರುವುದು ಇದರಿಂದ ಸ್ಪಷ್ಟವಾಗುತ್ತದೆ. ಸರ್ಕಾರದ ಅಸ್ಪಷ್ಟ ಆಜ್ಞೆಗಳು, ಆಜ್ಞೆಗಳಲ್ಲಿನ ಹಲವಾರು ಲೋಪ ದೋಷಗಳು, ಪಾಲಿಸುವ ಅಧಿಕಾರಿಗಳಿಗಿಲ್ಲದ ಮೀಸಲಾತಿಯ ಪ್ರಜ್ಞೆ . ಸರ್ಕಾರದ ನಿರ್ಲಕ್ಷತೆ, ರಾಜಕಾರಣಿಗಳಿಗಿಲ್ಲದ ಮೀಸಲಾತಿಮೇಲಿನ ಕಾಳಜಿ, ಆಜ್ಞೆಗಳನ್ನು ಪಾಲಿಸಿದ ಅಧಿಕಾರಿಗಳಿಗಿಲ್ಲದ ಕಾನೂನು ಬದ್ಧ ಶಿಕ್ಷೆ ಇತ್ಯಾದಿ ಮೀಸಲಾತಿ ಪರಿಶಿಷ್ಟರಿಗೆ ನಿರೀಕ್ಷಿಸಿದಷ್ಟು ಫಲ ನೀಡದಿರುವುದಕ್ಕೆ ಬಲವಾದ ಕಾರಣಗಳು.

ಕೋಷ್ಟಕ 7.2

## ಕೇಂದ್ರ ಸರ್ಕಾರದ ಸೇವೆಯಲ್ಲಿ ಎಸ್.ಸಿ. / ಎಸ್. ಟಿ.ಗಳ ಸ್ಥಾನ 1-1-91 ರಿಂದ 1-1-2002 ರ ವರೆಗೆ

| ಇದುವರೆಗೆ | ಒಟ್ಟು ನೌಕರರ ಸಂಖ್ಯೆ | | | | | | | | | | | | | | |
|---|---|---|---|---|---|---|---|---|---|---|---|---|---|---|---|
| | ಗ್ರೂಪ್ 'ಎ' | | | | | ಗ್ರೂಪ್ 'ಬಿ' | | | | | ಗ್ರೂಪ್ 'ಸಿ' | | | | |
| | ಒಟ್ಟು | SC | % | ST | % | ಒಟ್ಟು | SC | % | ST | % | ಒಟ್ಟು | SC | % | ST | % |
| 1-1-1991 | 62560 | 5689 | 9.09 | 1584 | 2.53 | 102532 | 12115 | 11.82 | 2414 | 2.35 | 2402089 | 376015 | 15.65 | 119666 | 4.98 |
| 1-1-1992 | 65456 | 6331 | 9.7 | 1914 | 2.9 | 98519 | 11399 | 11.6 | 2349 | 2.4 | 2334003 | 368494 | 15.8 | 73739 | 3.2 |
| 1-1-1993 | 64197 | 6293 | 9.8 | 1967 | 3.06 | 107120 | 13036 | 12.17 | 2513 | 2.35 | 2309003 | 367401 | 15.91 | 125424 | 5.43 |
| 1-1-1994 | 59016 | 6046 | 10.24 | 1727 | 2.92 | 103198 | 12443 | 12.06 | 2902 | 2.81 | 2381613 | 374758 | 15.73 | 128228 | 5.38 |
| 1-1-1995 | 65408 | 6637 | 10.15 | 1891 | 2.89 | 108857 | 13797 | 12.67 | 2913 | 2.68 | 2341863 | 378172 | 16.15 | 133179 | 5.69 |
| 1-1-1996 | 62142 | 7151 | 11.51 | 2216 | 3.57 | 107263 | 13197 | 12.3 | 3011 | 2.81 | 2306784 | 356460 | 15.45 | 130312 | 5.65 |
| 1-1-1997 | 73156 | 7855 | 10.74 | 2362 | 3.23 | 119044 | 15361 | 12.9 | 3623 | 3.04 | 2206018 | 356628 | 16.2 | 135587 | 6.16 |
| 1-1-1998 | 70738 | 7640 | 10.8 | 2432 | 3.44 | 119229 | 14724 | 12.35 | 366 | 3.02 | 2224267 | 362991 | 16.32 | 133678 | 6.01 |
| 1-1-1999 | 93520 | 10558 | 11.29 | 3172 | 3.39 | 104963 | 13306 | 12.68 | 3512 | 3.35 | 2396426 | 378115 | 15.78 | 145482 | 6.07 |
| 1-1-2000 | 93485 | 10258 | 10.97 | 3251 | 3.48 | 138214 | 17332 | 12.54 | 4267 | 3.09 | 2368472 | 376189 | 15.88 | 149950 | 6.33 |
| 1-1-2001 | 104642 | 11950 | 11.42 | 3746 | 3.58 | 158154 | 20274 | 12.82 | 5857 | 3.70 | 2468060 | 400978 | 16.25 | 159478 | 6.46 |
| 1-1-2002 | 99009 | 10983 | 11.09 | 3928 | 3.97 | 187033 | 26336 | 14.08 | 7811 | 4.18 | 2141879 | 345358 | 1612 | 127064 | 5.93 |

ಕೋಷ್ಟಕ 7.3

## ಕೇಂದ್ರ ಸರ್ಕಾರದ ಸೇವೆಯಲ್ಲಿ ಎಸ್.ಸಿ. / ಎಸ್. ಟಿ.ಗಳ ಸ್ಥಾನ 1-1-91 ರಿಂದ 1-1-2002 ರ ವರೆಗೆ

| ಇದುವರೆಗೆ | ಒಟ್ಟು ನೌಕರರ ಸಂಖ್ಯೆ | | | | | | | | | |
|---|---|---|---|---|---|---|---|---|---|---|
| | ಗ್ರೂಪ್ 'ಡಿ' ಒಟ್ಟು | SC | % | ST | % | ಒಟ್ಟು ಒಟ್ಟು | SC | % | ST | % |
| 1-1-1991 | 1167836 | 248101 | 21.24 | 79589 | 6.82 | 3735017 | 641920 | 17.19 | 203253 | 5.44 |
| 1-1-1992 | 1161413 | 242485 | 20.90 | 78375 | 6.70 | 3659391 | 628709 | 17.18 | 156377 | 4.27 |
| 1-1-1993 | 1049703 | 217617 | 20.73 | 72164 | 6.87 | 3530023 | 604347 | 17.12 | 202068 | 5.72 |
| 1-1-1994 | 1023285 | 209423 | 20.46 | 62945 | 6.15 | 3567112 | 602670 | 16.90 | 195802 | 5.48 |
| 1-1-1995 | 1041082 | 221380 | 21.26 | 76453 | 6.48 | 3557210 | 619986 | 17.43 | 205436 | 5.78 |
| 1-1-1996 | 998638 | 213748 | 21.4 | 60598 | 6.07 | 3474827 | 590556 | 17.00 | 196137 | 5.64 |
| 1-1-1997 | 913766 | 202386 | 22.15 | 61465 | 6.73 | 3307984 | 582230 | 17.60 | 203037 | 6.14 |
| 1-1-1998 | 1017522 | 219851 | 21.61 | 70689 | 6.95 | 3431756 | 605206 | 17.64 | 210405 | 6.13 |
| 1-1-1999 | 949353 | 189761 | 19.99 | 66487 | 7.00 | 3544262 | 591740 | 16.70 | 218653 | 6.17 |
| 1-1-2000 | 1027711 | 189860 | 18.47 | 68449 | 6.66 | 3627882 | 593639 | 16.30 | 225917 | 6.23 |
| 1-1-2001 | 998711 | 178667 | 17.89 | 67970 | 6.81 | 3729567 | 611869 | 16.41 | 237051 | 6.36 |
| 1-1-2002 | 953300 | 191356 | 20.07 | 67949 | 7.13 | 3381221 | 574033 | 16.98 | 206752 | 6.11 |

ಪರಿಶಿಷ್ಟರ ಮೀಸಲಾತಿಯನ್ನು ವಿರೋಧಿಸುವವರು ಈ ಮೇಲ್ಕಂಡ ಅಂಕಿ - ಅಂಶಗಳನ್ನು ಗಮನಿಸಿಲಿ, ವಿಚಾರ ಮಂಥನ ಮಾಡಲಿ. ಪರಿಶಿಷ್ಟರ ಮೀಸಲಾತಿಯ ಪ್ರಗತಿಯ ಪಕ್ಷಿನೋಟ ಅವರಿಗೆ ಅರಿವಾಗುತ್ತದೆ. ಈ ದೇಶದಲ್ಲಿ ಶೇಕಡಾ ೨೨.೫ ಕ್ಕೂ ಹೆಚ್ಚಿರುವ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗಗಳಿಗೆ ಈವರೆಗೆ ಲಭ್ಯವಾಗಿರುವ ಮೀಸಲಾತಿ ಶೇಕಡಾವಾರು ತಿಳಿಯುತ್ತದೆ.

ಸರ್ಕಾರಿ ಸ್ವಾಮ್ಯ ನಿಗಮ ಮಂಡಳಿಗಳಲ್ಲೂ ಮೀಸಲಾತಿಯ ಆಜ್ಞೆಗಳು ಸರಿಯಾಗಿ ಪಾಲನೆ ಆಗದಿರುವುದು ಅಲ್ಲಿನ ಅಂಕಿ - ಅಂಶಗಳನ್ನು ಗಮನಿಸಿದಾಗ ತಿಳಿಯುತ್ತದೆ. ಮುಖ್ಯ ನ್ಯಾಯಾಧೀಶರ ಹುದ್ದೆಗಳಲ್ಲಿ ಮುಖ್ಯ ಕಾರ್ಯದರ್ಶಿಗಳ ಹುದ್ದೆಗಳಿಂದ ಹಿಡಿದು ಜಿಲ್ಲಾಧಿಕಾರಿಗಳ ಹುದ್ದೆಗಳವರೆಗೆ ನೋಡಿದಾಗ ಪರಿಶಿಷ್ಟರಿಗೆ ಹೆಚ್ಚು ಪ್ರಾತಿನಿಧ್ಯವಿಲ್ಲದಿರುವುದು ಮೀಸಲಾತಿ ಎಷ್ಟರಮಟ್ಟಿಗೆ ಫಲ ನೀಡಿದೆ ಎಂಬುದನ್ನು ಎತ್ತಿ ತೋರುತ್ತದೆ.

ಮೀಸಲಾತಿ ದಲಿತರಿಗೆ ನೀಡುವ ಬಿಕ್ಷೆಯಲ್ಲ. ಸಹಸ್ರಾರು ವರ್ಷಗಳಿಂದ ಒಂದು ವರ್ಗದ ಸಾಮಾಜಿಕ, ಶೈಕ್ಷಣಿಕ ಹಕ್ಕುಗಳನ್ನು ಕಸಿದುಕೊಂಡು ಈ ರಾಷ್ಟ್ರದ ಮುಖ್ಯವಾಹಿನಿಯಿಂದ ಆ ವರ್ಗವನ್ನು ದೂರವಿಟ್ಟ ನೀಚ ಸಂಪ್ರದಾಯದಿಂದ ದುರ್ಬಲಗೊಂಡ ಕೋಟಿ, ಕೋಟಿ ಜನಗಳನ್ನು ಮೇಲಕೆತ್ತಲು ನೀಡುತ್ತಿರುವ ಕೇವಲ ಅತ್ಯಲ್ಪಪರಿಹಾರ ಎಂಬುದನ್ನು ಯಾರೂ ಮರೆಯುವಂತಿಲ್ಲ. ಮೀಸಲಾತಿಯ ಹಕ್ಕನ್ನು ಸಂವಿಧಾನ ಬದ್ಧಮಾಡಿದ ಡಾ॥ ಅಂಬೇಡ್ಕರ್‌ರವರು ನಿರೀಕ್ಷಿಸಿದ್ದು ಈ ವರ್ಗಗಳ ಅತಿವೇಗದ ಪ್ರಗತಿಯನ್ನು ಈ ದೇಶದವನ್ನು ಆಳಿದ ಯಾವುದೇ ಸರ್ಕಾರ ಈ ಮಹತ್ವಾಕಾಂಕ್ಷೆಯನ್ನು ಅರಿಯದ ಹಾಗು ಈ ವರ್ಗದ ಸಮಗ್ರ ಪ್ರಗತಿಯ ಬಗ್ಗೆ ಗಂಭೀರವಾಗಿ ಪರಿಗಣಿಸದಿದ್ದುದು ಈ ಯುಗದ ಅತ್ಯಂತ ದುರದೃಷ್ಟಕರ ಸಂಗತಿ.

ಇಂದು ಮೀಸಲಾತಿಯ ಕಕ್ಷೆಯೊಳಗೆ ಪರಿಭ್ರಮಿಸದ ಜನ - ಜಾತಿಗಳಿಲ್ಲ. ಎಲ್ಲರೂ ಇದರ ಲಾಭಕೋರರು. ಸಾಮಾಜಿಕ ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಆಯಾಮಗಳ ಮೇಲೆ ಮೀಸಲಾತಿಯ ಸವಲತ್ತು , ಸೌಕರ್ಯಗಳು ದೇಶದ ಬಹುತೇಕ ಎಲ್ಲಾ ಜಾತಿ , ಕೋಮುಗಳಿಗೆ ಲಭಿಸಿವೆ ಎಂದರೆ ತಪ್ಪಾಗಲಾರದು. ಹಾಗಾಗಿ ಮೀಸಲಾತಿ ನಾನಾ ತರ್ಲೆಗಳ ವಿಷಯ. ವಿಸ್ಮಯ. ವಿಸ್ಮಯದ ಸಂಗತಿ. ಕಾನೂನು ಸುವ್ಯವಸ್ಥೆಯ ಸಮಸ್ಯೆಯ ಬೀಜ. ಜಾತಿ ಜಾತಿಗಳ ನಡುವೆ ಮತ್ತೆ - ಮತ್ತೆ ಬಿರುಕ ತರುತ್ತಿರುವ ಆಯುಧ.

**ಜಾಗತೀಕರಣ ದೃಷ್ಟಿಯಲ್ಲಿ ದಲಿತರ ಸ್ಥಿತಿಗತಿ**

ದಲಿತರು ಅಸ್ಪೃಶ್ಯತೆ ಮತ್ತು ಬಡತನ ಈ ಎರಡು ಪೆಡಂಭೂತಗಳ ಕಾಟದಲ್ಲೂ ಹಿಂಸೆಯಲ್ಲೂ, ಬೇಗುದಿಯಲ್ಲೂ ಸಾವಿರಾರು ವರ್ಷಗಳಿಂದ ಜೀವಂತವಾಗಿರುವರು. ಆದರೆ ಈ ಬದುಕು ಬದುಕೆ ? ಏತಕ್ಕಾಗಿ ಬದುಕಬೇಕು ? ಜೀವಂತನಾಗಿರಲು ಬದುಕಬೇಕಾ ? ಅಥವಾ ಬಾಳುವುದಕ್ಕಾಗಿ ಬದುಕಬೇಕಾ ? ಅಸ್ಪೃಶ್ಯತೆಯ ಅಪಮಾನದಲ್ಲೂ ಜೀವಂತವಾಗಿರುವುದರಲ್ಲಿ ಯಾವ ಅರ್ಥವಿಲ್ಲ. ಬದುಕು ಕಟ್ಟಿಕೊಳ್ಳಲು ಬಾಳ್ವೆನಡೆಸಲು ಜೀವಂತವಾಗಿರುವುದು ಅರ್ಥಪೂರ್ಣ ದುರಂತ. ಈ ಬಗೆಯ ಬದುಕು ದಲಿತರಿಗೆ ಲಭಿಸುವುದು ಪ್ರಸ್ತುತದ ಆರ್ಥಿಕ ಸುಧಾರಣೆಯಲ್ಲಿ "ಜಾಗತೀಕರಣ"ದಲ್ಲಿ ಕಷ್ಟಕರ. ಜಾಗತೀಕರಣವನ್ನು ಸೂಕ್ಷ್ಮವಾಗಿ ಬಗೆದು ವಿಶ್ಲೇಷಿಸಿದರೆ ಹಲವು ಒಳ ನೋಟಗಳು ಹೊಳೆಯದಿರುವುದಿಲ್ಲ.

